ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ನಂ. ೨೯

ಶ್ರೀವೇದವ್ಯಾಸರಿಂದ ರಚಿತವಾದ

# ನಾರದೀಯ ಮಹಾಪುರಾಣ

(ಕನ್ನಡ ಅರ್ಥಾನುವಾದ ವಿವರಣೆಗಳ ಸಹಿತ)

## ಭಾಗ—೯

ಉತ್ತರಭಾಗ

(೩೮—೬೦ ಅಧ್ಯಾಯಗಳು)



ಪಂಡಿತಶಿರೋಮಣಿ,
ಮಹಾವಿದ್ವಾನ್, ಪಂಡಿತರತ್ನಂ, ವಿದ್ವಾನ್,
**ದೊಡ್ಡಬೆಳ್ಳಾಪುರಂ ವಾಸುದೇವಾಚಾರ್ಯ.**
ಅನುವಾದಕ.

ಮೈಸೂರು
ಶ್ರೀಚಾಮುಂಡೇಶ್ವರೀ ಪತ್ರಿಕಾ ಪ್ರೆಸ್
೧೯೪೮

# ಉಪೋದ್ಘಾತ.



ಸುಖವೇ ಶಾಶ್ವತವಾಗಿ ನೆಲೆಸಿರಬೇಕು, ದುಃಖದ ಸೋಂಕೂ ಇರಬಾರದು ಎಂಬುದು ಮಾನವರ ಸಹಜಬಯಕೆಯು. ಅದು ಸುಲಭವಾಗಿ ಈಡೇರುತ್ತಿಲ್ಲ ವೆಂಬುದೂ ಅನುಭವಸಿದ್ಧವಾಗಿದೆ. ಇಷ್ಟಾರ್ಥಸಾಧನೆಯ ಉಪಾಯವನ್ನರಿತು ಅದನ್ನಾಚರಿಸದಿರುವುದೇ ಈ ಆಶಾಭಂಗಕ್ಕೆ ಕಾರಣವು. ಪರತತ್ವಸಾಕ್ಷಾತ್ಕಾರ ವೊಂದೇ ಇಂತಹ ಪರಮಶ್ರೇಯಸ್ಸಿಗೆ ಸಾಧನವು. ಬೇರಾವುದೂ ಇದಕ್ಕೆ ತಕ್ಕ ಉಪಾಯವಾಗಲಾರದು. ಮನಸ್ಸಿನ ಕಾಲುಷ್ಯವು ಹೋಗುವವರೆಗೂ ಸಾಕ್ಷಾತ್ಕಾ ರದ ದಾರಿಯೇ ಗೋಚರವಾಗುವುದಿಲ್ಲ. ಆದಕಾರಣ ಮನಸ್ಸನ್ನು ಆವರಿಸಿ ಕೊಂಡಿರುವ ಮಲವನ್ನು ತೊಳೆದು ಶುದ್ಧಿಯನ್ನು ಸಂಪಾದಿಸುವುದು ಮಾನವನ ಮೊದಲನೆಯ ಕರ್ತವ್ಯವು.

ಹೀಗೆ ಆವಶ್ಯಕವಾದ ಚಿತ್ತಶುದ್ಧಿಗೆ ಪುಣ್ಯತೀರ್ಥ ಕ್ಷೇತ್ರಗಳ ಯಾತ್ರೆಯು ಸಾಧಕವಾಗುವುದು. ತೀರ್ಥಯಾತ್ರೆಗೆ ತೊಡಗುವ ಮುನ್ನ ಆಯಾಯಾ ತೀರ್ಥ ಕ್ಷೇತ್ರಗಳ ಮಹಿಮೆ, ಅಲ್ಲಲ್ಲಿ ಆಚರಿಸಬೇಕಾದ ವಿಧಾನಗಳು, ತೀರ್ಥಯಾತ್ರೆ ಯನ್ನು ಸಫಲಗೊಳಿಸುವಂತಹ ನಿಯಮಾದಿ ಅಂಗಕಲಾಪ ಮುಂತಾದುವುಗಳನ್ನು ಚೆನ್ನಾಗಿ ತಿಳಿಯಬೇಕು. ಇವುಗಳನ್ನರಿಯದೆ ತೀರ್ಥಾದಿಗಳಿಗೆ ಹೋಗುವುದು ಫಲಕಾರಿಯಲ್ಲವೆಂದು ಶ್ರೀಮಹಾಭಾರತದಲ್ಲಿ ಹೇಳಿದೆ. ಈರೀತಿ ಅವಶ್ಯಜ್ಞಾ ತವ್ಯವಾದ ತೀರ್ಥಕ್ಷೇತ್ರಮಹಿಮಾದಿಗಳೇ ಈ ಸಂಪುಟದ ವಿಷಯವು.

ಯಜ್ಞಾದಿ ಕರ್ಮಗಳೂ ಸಹ ಚಿತ್ತಶುದ್ಧಿಯನ್ನುಂಟುಮಾಡಿ ಜ್ಞಾನಸಾಧನೆ ಗಳಾಗುವುವು. ಆದರೆ ಅವು ಸರ್ವರಿಗೂ ಸಾಧ್ಯವಾಗುವ ಉಪಾಯವಲ್ಲ. ಬಹು ಧನ ಮತ್ತು ಜನಗಳ ಸಹಾಯವುಳ್ಳವರು ಮಾತ್ರ ಅವನ್ನು ಸಾಧಿಸಬಹುದು. ಬಡವರು ಅದನ್ನು ಸಾಧಿಸಲಾರರು. ತೀರ್ಥಯಾತ್ರೆಯಾದರೋ ಬಡವರು--ಭಾಗ್ಯ ವಂತರು ಎಂಬ ಭೇದವಿಲ್ಲದೆ ಸರ್ವರೂ ಸಾಧಿಸಬಹುದಾದ ಸುಲಭೋಪಾಯವು. ತೀರ್ಥಯಾತ್ರೆಮಾಡುವವನು ಕೆಲವು ಮಾನಸಿಕ ಮತ್ತು ಕಾಯಿಕ ನಿಯಮಗ

ಳನ್ನು ಅನುಸರಿಸಬೇಕು. ನಿಯಮಪೂರ್ವಕವಾಗಿ ತೀರ್ಥಯಾತ್ರೆಮಾಡಿದವನೇ ವಿಹಿತಫಲವನ್ನು ಪಡೆಯುವನು ಎಂದು ಈ ಪ್ರಮಾಣವಚನದಿಂದ ತಿಳಿದು ಬರುತ್ತದೆ.

**ಯಸ್ಯ ಹಸ್ತೌ ಚ ಪಾದೌ ಚ ಮನಶ್ಚೈವ ಸುಸಂಯುತಂ ।**
**ವಿದ್ಯಾ ತಪಶ್ಚ ಕೀರ್ತಿಶ್ಚ ಸ ತೀರ್ಥಫಲಮಶ್ನುತೇ ॥ ೯ ॥**
**ಪ್ರತಿಗ್ರಹಾದಪಾವೃತ್ತಃ ಸಂತುಷ್ಟೋ ಯೇನ ಕೇನಚಿತ್ ।**
**ಅಹಂಕಾರನಿವೃತ್ತಶ್ಚ ಸ ತೀರ್ಥಫಲಮಶ್ನುತೇ ॥ ೧೦ ॥**
**ಅಲಕ್ಕಕೋ ನಿರಾರಂಭೋ ಲಘ್ವಾಹಾರೋ ಜಿತೇಂದ್ರಿಯಃ ।**
**ವಿಮುಕ್ತಃ ಸರ್ವಪಾಪೇಭ್ಯಃ ಸ ತೀರ್ಥಫಲಮಶ್ನುತೇ ॥ ೧೧ ॥**
**ಅಕ್ರೋಧನಶ್ಚ ರಾಜೇಂದ್ರ ಸತ್ಯಶೀಲೋ ದೃಢವ್ರತಃ ।**
**ಆತ್ಮೋಪಮಶ್ಚ ಭೂತೇಷು ಸ ತೀರ್ಥಫಲಮಶ್ನುತೇ ॥ ೧೨ ॥**

—ಮಹಾಭಾರತ ವನಪರ್ವ ಅಧ್ಯಾಯ ೮೦.

ಅರ್ಥ :—ಹಸ್ತಪಾದಾದಿ ಕರ್ಮೇಂದ್ರಿಯಗಳನ್ನು ಮತ್ತು ಮನಸ್ಸು ಮುಂತಾದ ಜ್ಞಾನೇಂದ್ರಿಯಗಳನ್ನೂ ಸಹ ವಿಹಿತಮಾರ್ಗದಲ್ಲಿಯೇ ಹೋಗುವಂತೆ ಸ್ವಾಧೀನದಲ್ಲಿಟ್ಟುಕೊಂಡು, ವಿದ್ಯೆ, ತಪಸ್ಸು, ಕೀರ್ತಿ ಇವುಗಳನ್ನು ಸಂಪಾದಿಸಿರುವ ಯಾತ್ರಿಕನು ತೀರ್ಥಫಲ ಭಾಗಿಯಾಗುವನು. ತೀರ್ಥಗಳಲ್ಲಿ ದಾನ ತೆಗೆದುಕೊಳ್ಳದೆ ದೈವಿಕವಾಗಿ ಲಭಿಸಿದುದರಲ್ಲಿಯೇ ಸಂತೋಷಪಡುತ್ತ ಅಹಂಕಾರಪಡದಿರುವ ಯಾತ್ರಿಕನು ತೀರ್ಥಫಲ ಭಾಗಿಯಾಗುವನು. ಪ್ರತಿಫಲಾಪೇಕ್ಷೆಯಿಂದ ಕರ್ಮಮಾಡದೆ ಭಗವಂತನು ಸಂತುಷ್ಟನಾಗಲೆಂಬ ಉದ್ದೇಶದಿಂದಲೇ ಕರ್ಮವನ್ನಾಚರಿಸುವವನಾಗಿ ಡಂಭವಿಲ್ಲದೆ ಮಿತಾಹಾರವನ್ನು ಸೇವಿಸುತ್ತ ಜಿತೇಂದ್ರಿಯನಾಗಿರುವ ಯಾತ್ರಿಕನು ತನ್ನ ಪಾಪಗಳನ್ನೆಲ್ಲಾ ಹೋಗಲಾಡಿಸಿಕೊಂಡು ತೀರ್ಥಫಲ ಭಾಗಿಯಾಗುವನು. ಕೋಪವಿಲ್ಲದೆ ಸತ್ಯಶೀಲನಾಗಿ ಇತರ ಪ್ರಾಣಿಗಳನ್ನೆಲ್ಲಾ ತನ್ನಂತೆಯೇ ನೋಡುವ ಯಾತ್ರಿಕನು ತೀರ್ಥಫಲ ಭಾಗಿಯಾಗುವನು.

ಈ ಸಂಪುಟದಲ್ಲಿ ಉತ್ತರಭಾಗದ ೩೮ ನೆಯ ಅಧ್ಯಾಯದಿಂದ ೬೦ ನೆಯ ಅಧ್ಯಾಯ ಪೂರ್ತಿಯಾಗಿ ೨೩ ಅಧ್ಯಾಯಗಳು ಅಡಕವಾಗಿವೆ. ಗಂಗಾ, ಗಯೆ,

ಕಾಶೀ, ಪುರುಷೋತ್ತಮ (ಜಗನ್ನಾಥ) ಈ ತೀರ್ಥಕ್ಷೇತ್ರಗಳ ಮಾಹಾತ್ಮ್ಯೆಯು ಅಲ್ಲಲ್ಲಿರುವ ವಿಶೇಷ ತೀರ್ಥಾದಿಗಳು ಅವುಗಳ ವಿಧಾನ ಸಹಿತವಾಗಿ ವಿಸ್ತರಿಸಲ್ಪಟ್ಟವೆ.

ಸಂಸ್ಕೃತಭಾಷೆಯನ್ನರಿಯದವರೂ ಸಹ ಈ ಪುರಾಣಾರ್ಥವನ್ನರಿತು ಶ್ರೇಯೋಭಾಗಿಗಳಾಗಲೆಂಬ ಉದಾರಭಾವನೆಯಿಂದ ಆಳುವ ಮಹಾಸ್ವಾಮಿಯವರಾದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ.,** ರವರು ಕನ್ನಡ ಭಾಷಾಂತರಸಹಿತವಾಗಿ ಇದನ್ನು ಪ್ರಕಟಿಸಲು ಅವಕಾಶವನ್ನು ಕಲ್ಪಿಸಿರುವುದಕ್ಕಾಗಿ ಮಹಾಪ್ರಭುಗಳ ಸನ್ನಿಧಾನದಲ್ಲಿ ಕೃತಜ್ಞತೆಯನ್ನರ್ಪಿಸಿ, ಅವರಿಗೆ ಪುರುಷೋತ್ತಮನು ಆಯುರಾರೋಗ್ಯ ಸತ್ಸಂತಾನಾದಿ ಸಕಲಸಂಪತ್ತುಗಳನ್ನೂ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು
ಸರ್ವಧಾರಿ ಸಂ॥ ಬಲಿಪ್ರತಿಪತ್
2-11-1948

ಪಂಡಿತರತ್ನಂ,
**ಡಿ. ವಾಸುದೇವಾಚಾರ್ಯ**
ಅನುವಾದಕ



# ವಿಷಯಾನುಕ್ರಮಣಿಕೆ

|| ಶ್ರೀಃ ||

# ನಾರದೀಯಮಹಾಪುರಾಣಂ

ಉತ್ತರಭಾಗಃ

## ಅಷ್ಟತ್ರಿಂಶೋಽಧ್ಯಾಯಃ

---

ವಸಿಷ್ಠ ಉವಾಚ

**ಸ ವಸುರ್ನೃಪಶಾರ್ದೂಲ ಮೋಹಿನೀಂ ರಾಜ್ಯಕಾಮಿನೀಂ |**
**ಉವಾಚ ಶ್ಲಕ್ಷ್ಣಯಾ ವಾಚಾ ಸರ್ವಲೋಕಹಿತೇ ರತಃ || ೧ ||**

ವಸುರುವಾಚ

ಶೃಣು ಮೋಹಿನಿ ವಕ್ಷ್ಯಾಮಿ ತೀರ್ಥಾನಾಂ ಲಕ್ಷಣಂ ಪೃಥಕ್ |
**ಯೇನ ವಿಜ್ಞಾತಮಾತ್ರೇಣ ಪಾಪಿನಾಂ ಗತಿರುತ್ತಮಾ || ೨ ||**

**ಸರ್ವೇಷಾಮಪಿ ತೀರ್ಥಾನಾಂ ಶ್ರೇಷ್ಠಾ ಗಂಗಾ ಧರಾತಲೇ |**
**ನ ತಸ್ಯಾಃ ಸದೃಶಂ ಕಿಂಚಿದ್ವಿದ್ಯತೇ ಪಾಪನಾಶನಂ || ೩ ||**

---

## ಮೂವತ್ತೆಂಟನೆಯ ಅಧ್ಯಾಯ

೧. ವಸಿಷ್ಠನು ಹೇಳಿದನು:—ರಾಜಶ್ರೇಷ್ಠನೇ! ಸಕಲ ಲೋಕೋಪಕಾರಕನಾದ ಆ ವಸುವು ವಿಶ್ವಾಸವಚನದಿಂದ ರಾಜ್ಯ ಸ್ತ್ರೀಯಾದ ಮೋಹಿನಿಯನ್ನು ಕುರಿತು ಹೇಳಿದನು.

೨. ವಸುವು ಹೇಳಿದನು:—ಮೋಹಿನಿಯೇ! ತಿಳಿಯುವ ಮಾತ್ರದಿಂದ ಪಾಪಿಗಳಿಗೆ ಉತ್ತಮಗತಿಯನ್ನುಂಟುಮಾಡುವಂತಹ ತೀರ್ಥಗಳ ಲಕ್ಷಣವನ್ನು ಪ್ರತ್ಯೇಕವಾಗಿ ಹೇಳುವೆನು ಕೇಳು.

೩. ಭೂಮಂಡಲದಲ್ಲಿ ಗಂಗೆಯು ಸಕಲತೀರ್ಥಗಳಿಗಿಂತಲೂ ಶ್ರೇಷ್ಠವು. ಅದಕ್ಕೆ ಸಮಾನವಾದ ಪಾಪನಾಶಕತೀರ್ಥವು ಯಾವುದೂ ಇಲ್ಲ.

ತಚ್ಛ್ರುತ್ವಾ ವಚನಂ ತಸ್ಯ ವಸೋಃ ಸ್ವಸ್ಯ ಪುರೋಧಸಃ ।
ಪ್ರಣತಾ ಮೋಹಿನೀ ಪ್ರಾಹ ಗಂಗಾಸ್ನಾನಕೃತಾದರಾ ॥ ೪ ॥

ಮೋಹಿನ್ಯುವಾಚ

ಭಗವನ್ ವಾಡವಶ್ರೇಷ್ಠ ಗಂಗಾಮಾಹಾತ್ಮ್ಯಮುತ್ತಮಂ ।
ಸರ್ವೇಷಾಂ ಚ ಪುರಾಣಾನಾಂ ಸಂಮತಂ ವದ ಸಾಂಪ್ರತಂ ॥ ೫ ॥

ಶ್ರುತ್ವಾ ಮಾಹಾತ್ಮ್ಯಮತುಲಂ ಗಂಗಾಯಾಃ ಪಾಪನಾಶನಂ ।
ಪಶ್ಚಾತ್ಪಾಪವಿನಾಶಿನ್ಯಾಂ ಸ್ನಾತುಂ ಯಾಸ್ಯೇ ತ್ವಯಾ ಸಹ ॥ ೬ ॥

ತಚ್ಛ್ರುತ್ವಾ ಮೋಹಿನೀವಾಕ್ಯಂ ವಸುಃ ಸರ್ವಪುರಾಣವಿತ್ ।
ಮಾಹಾತ್ಮ್ಯಂ ಕಥಯಾಮಾಸ ಗಂಗಾಯಾಃ ಪಾಪನಾಶನಂ ॥ ೭ ॥

---

೪. ತನ್ನ ಪುರೋಹಿತನಾದ ಆ ವಸುವಿನ ಮಾತನ್ನು ಕೇಳಿ, ಗಂಗಾಸ್ನಾನದಲ್ಲಿ ಆದರಹೊಂದಿದ ಮೋಹಿನಿಯು ಅವನನ್ನು ನಮಸ್ಕರಿಸಿ ಮಾತನಾಡಿದಳು.

೫. ಮೋಹಿನಿಯು ಹೇಳಿದಳು:—ಪೂಜ್ಯನಾದ ಬ್ರಾಹ್ಮಣಶ್ರೇಷ್ಠನೇ! ಈಗ ಸಕಲ ಪುರಾಣಸಮ್ಮತವಾದ ಉತ್ತಮ ಗಂಗಾಮಾಹಾತ್ಮ್ಯೆಯನ್ನು ಹೇಳು.

೬. ಪಾಪನಾಶಕವಾದ, ಅದ್ವಿತೀಯವಾದ ಗಂಗಾಮಾಹಾತ್ಮ್ಯೆಯನ್ನು ಕೇಳಿ ಆನಂತರ ಪಾಪಪರಿಹಾರಕವಾದ ಆ ಗಂಗೆಯಲ್ಲಿ ಸ್ನಾನಮಾಡಲು ನಿನ್ನೊಡನೆ ಹೊರಡುವೆನು.

೭. ಮೋಹಿನಿಯ ಆ ಮಾತನ್ನು ಕೇಳಿ ಸಕಲ ಪುರಾಣಜ್ಞನಾದ ವಸುವು ಪಾಪನಾಶಕವಾದ ಗಂಗಾಮಾಹಾತ್ಮ್ಯೆಯನ್ನು ಹೇಳತೊಡಗಿದನು.

### ವಸುರುವಾಚ

ತೇ ದೇಶಾಸ್ತೇ ಜನಪದಾಸ್ತೇ ಶೈಲಾಸ್ತೇಽಪಿ ಚಾಶ್ರಮಾಃ |
ಯೇಷಾಂ ಭಾಗೀರಥೀ ಪುಣ್ಯಾ ಸಮೀಪೇ ವರ್ತತೇ ಸದಾ || ೮ ||

ತಪಸಾ ಬ್ರಹ್ಮಚರ್ಯೇಣ ಯಜ್ಞೈಸ್ತ್ಯಾಗೇನ ವಾ ಪುನಃ |
ತಾಂ ಗತಿಂ ನ ಲಭೇಜ್ಜಂತುರ್ಗಂಗಾಂ ಸಂಸೇವ್ಯ ಯಾಂ ಲಭೇತ್ ||೯||

ಪೂರ್ವೇ ವಯಸಿ ಪಾಪಾನಿ ಕೃತ್ವಾ ಕರ್ಮಾಣಿ ಯೇ ನರಾಃ |
ಶೇಷೇ ಗಂಗಾಂ ನಿಷೇವಂತೇ ತೇಽಪಿ ಯಾಂತಿ ಪರಾಂ ಗತಿಂ || ೧೦ ||

ತಿಷ್ಠೇದ್ಯುಗಸಹಸ್ರಂ ತು ಪಾದೇನೈಕೇನ ಯಃ ಪುಮಾನ್ |
ಮಾಸಮೇಕಂ ತು ಗಂಗಾಯಾಂ ಸ್ನಾತಸ್ತುಲ್ಯಫಲಾವುಭೌ || ೧೧ ||

---

೮. ವಸುವು ಹೇಳಿದನು:— ಪುಣ್ಯಕರವಾದ ಭಾಗೀರಥೀನದಿಗೆ ಸಮೀಪದಲ್ಲಿರುವ ದೇಶಗಳೇ ಪವಿತ್ರಗಳು. ಅಲ್ಲಿರುವ ಜನರೇ ಪುಣ್ಯವಂತರು. ಅಲ್ಲಿರುವ ಪರ್ವತಗಳು ಮತ್ತು ಆಶ್ರಮಗಳೂ ಸಹ ಪಾವನಗಳು.

೯. ಪ್ರಾಣಿಯು ಗಂಗಾನದಿಯನ್ನು ಸೇವಿಸುವುದರಿಂದ ಹೊಂದುವಂತಹ ಸದ್ಗತಿಯನ್ನು ತಪಸ್ಸು, ಬ್ರಹ್ಮಚರ್ಯ, ಯಜ್ಞ, ತ್ಯಾಗ ಇವುಗಳಾವುದರಿಂದಲೂ ಹೊಂದಲಾರನು.

೧೦. ಪೂರ್ವವಯಸ್ಸಿನಲ್ಲಿ ಪಾಪಕರ್ಮಗಳನ್ನು ಮಾಡಿ ಅನಂತರ ಉಳಿದ ಆಯುಷ್ಯದಲ್ಲಿ ಗಂಗೆಯನ್ನು ಸೇವಿಸುವ ಮನುಜರೂ ಸಹ ಉತ್ತಮ ಗತಿಯನ್ನು ಪಡೆಯುವರು.

೧೧. ಒಂದುಸಾವಿರಯುಗ ಪರ್ಯಂತವಾಗಿ ಒಂದೇ ಕಾಲಿನಿಂದ ನಿಂತು ತಪಸ್ಸು ಮಾಡುವ ಪುರುಷನು ಮತ್ತು ಗಂಗೆಯಲ್ಲಿ ಒಂದುತಿಂಗಳು ಸ್ನಾನ ಮಾಡುವವನು ಇವರಿಬ್ಬರೂ ಸಮಾನಫಲವನ್ನು ಹೊಂದುವರು.

ತಿಷ್ಠೇತಾವಾರ್ಕ್ಷಿರಾ ಯಸ್ತು ಯುಗಾನಾಮಯುತಂ ನರಾಃ ।
ತಿಷ್ಠೇದ್ಯಥೇಷ್ಟಂ ಯಶ್ಚಾಪಿ ಗಂಗಾಯಾಂ ಸ ವಿಶಿಷ್ಯತೇ ॥ ೧೨ ॥

ಭೂತಾನಾಮಿಹ ಸರ್ವೇಷಾಂ ದುಃಖೋಪಹತಚೇತಸಾಂ ।
ಗತಿಮನ್ವೇಷಮಾಣಾನಾಂ ನ ಗಂಗಾಸದೃಶೀ ಗತಿಃ ॥ ೧೩ ॥

ಪ್ರಕೃಷ್ಟೈಃ ಪಾತಕೈ ಘೋರೈಃ ಪಾಪಿನಃ ಪುರುಷಾಧಮಾಃ ।
ಪ್ರಸಹ್ಯ ತಾರಯೇದ್ಗಂಗಾ ಗಚ್ಛತೋ ನಿರಯೇಽಶುಚೌ ॥ ೧೪ ॥

ತೇ ಸಮಾನಾಸ್ತು ಮುನಿಭಿರ್ಮಾನವಂ ದೇವೈಃ ಸವಾಸವೈಃ ।
ಯೇಽಭಿಗಚ್ಛಂತಿ ಸತತಂ ಗಂಗಾಮಭಿಮತಾಂ ಸುರೈಃ ॥ ೧೫ ॥

ಅಂಧಾನ್ ಜಡಾನ್ ದ್ರವ್ಯಹೀನಾಂಶ್ಚ ಗಂಗಾ
ಸಂಪಾವಯೇದ್ಬೃಹತೀ ವಿಶ್ವರೂಪಾ ।
ದೇವೈಃ ಸೇಂದ್ರೈರ್ಮುನಿಭಿರ್ಮಾನವೈಶ್ಚ
ನಿಷೇವಿತಾ ಸರ್ವಕಾಲಂ ಸಮೃದ್ಧಿಃ ॥ ೧೬ ॥

---

೧೨. ಹತ್ತುಸಾವಿರಯುಗಗಳು ತಲೆಕೆಳಗಾಗಿ ನಿಂತು ತಪಸ್ಸು ಮಾಡುವವನಗಿಂತಲೂ ಗಂಗೆಯ ಸನ್ನಿಧಾನದಲ್ಲಿ ತನ್ನ ಇಚ್ಛಾನುಸಾರ ವಾಸಿಸುವವನು ಉತ್ತಮನು.

೧೩. ಈ ಲೋಕದಲ್ಲಿ ದುಃಖವನ್ನು ಅನುಭವಿಸುತ್ತಾ ಗತಿಯನ್ನು ಹುಡುಕುತ್ತಿರುವ ಸಕಲ ಪ್ರಾಣಿಗಳಿಗೂ ಗಂಗೆಗೆ ಸಮಾನವಾದ ಗತಿಯಿಲ್ಲ.

೧೪. ಉತ್ಕೃಷ್ಟವಾದ ಘೋರಪಾತಕಗಳನ್ನಾಚರಿಸಿ ಪಾಪಿಗಳಾದ, ಅಶುದ್ಧವಾದ ನರಕವನ್ನು ಹೊಂದಿರುವ ನೀಚ ಪುರುಷರನ್ನೂ ಸಹ ಗಂಗೆಯು ಸಂಸಾರದಿಂದ ದಾಟಿಸುವುದು.

೧೫. ದೇವತೆಗಳಿಗಭಿಮತವಾದ ಗಂಗೆಯನ್ನು ಯಾವಾಗಲೂ ಸೇವಿಸುವವರು ಋಷಿಗಳು ಮತ್ತು ಇಂದ್ರಾದಿದೇವತೆಗಳಿಗೆ ಸಮಾನರಾಗುವರು.

೧೬. ವಿಶ್ವರೂಪಿಯಾದ ಬೃಹದ್ಗಂಗೆಯು ಕುರುಡರು, ಅಜ್ಞರು ಮತ್ತು ದರಿದ್ರರನ್ನೂ ಸಹ ಪಾವನಮಾಡುತ್ತದೆ. ಅದು ಇಂದ್ರಸಹಿತರಾದ

ಷಷ್ಠ್ಯಾದೌ ಕೃಷ್ಣಪಕ್ಷೇ ತು ಭೂಮೌ ಸಂನಿಹಿತಾ ಭವೇತ್ ।
ಯಾವತ್ಪುಣ್ಯಾ ಹ್ಯಮಾವಾಸ್ಯಾ ದಿನಾನಿ ದಶ ಮೋಹಿನಿ ॥ ೧೭ ॥

ಶುಕ್ಲಪ್ರತಿಪದಾದೇಶ್ಚ ದಿನಾನಿ ದಶ ಸಂಖ್ಯಯಾ ।
ಪಾತಾಲೇ ಸನ್ನಿಧಾನಂ ತು ಕುರುತೇ ಸ್ವಯಮೇವ ಹಿ ॥ ೧೮ ॥

ಆರಭ್ಯ ಶುಕ್ಲೈಕಾದಶ್ಯಾ ದಿನಾನಿ ದಶ ಯಾನಿ ತು ।
ಪಂಚಮ್ಯಂತಾನಿ ಸಾ ಸ್ವರ್ಗೇ ಭವೇತ್ಸಂನಿಹಿತಾ ಸದಾ ॥ ೧೯ ॥

ಕೃತೇ ತು ಸರ್ವತೀರ್ಥಾನಿ ಸಾ ತು ದೇವೀ ನ ಕುತ್ರಚಿತ್ ।
ಗಂಗಾಂಭಃಕಣದಿಗ್ಧಸ್ಯ ವಾಯೋಃ ಸಂಸ್ಪರ್ಶನಾದಪಿ ॥ ೨೦ ॥

---

ದೇವತೆಗಳು, ಮುನಿಗಳು ಮತ್ತು ಮನುಷ್ಯರಿಂದ ಸೇವಿಸಲ್ಪಟ್ಟರೆ ಅವರಿಗೆ ಹೆಚ್ಚಾದ ಐಶ್ವರ್ಯವನ್ನು ಕೊಡುತ್ತದೆ.

೧೭. ಮೋಹಿನೀ ! ಕೃಷ್ಣಪಕ್ಷದ ಆದಿಯಲ್ಲಿ ಪವಿತ್ರವಾದ ಅಮಾವಾಸ್ಯೆಯವರೆಗಿನ ಹತ್ತು ದಿನಗಳು ಎಂದರೆ ಕೃಷ್ಣಪಕ್ಷದ ಷಷ್ಟೀದಿನದಿಂದ ಅಮಾವಾಸ್ಯೆಯ ಪೂರ್ತಿ ಹತ್ತುದಿನಗಳಕಾಲ ಗಂಗೆಯು ಭೂಲೋಕದಲ್ಲಿ ಸನ್ನಿಹಿತವಾಗಿರುವುದು.

೧೮. ಶುದ್ಧ ಪಾಡ್ಯದಿಂದ ಹತ್ತುದಿನಗಳಕಾಲ ಗಂಗೆಯು ಪಾತಾಳ ಲೋಕದಲ್ಲಿ ಸನ್ನಿಹಿತವಾಗಿರುವುದು.

೧೯. ಶುಕ್ಲಪಕ್ಷದ ಏಕಾದಶಿಯಿಂದ ಕೃಷ್ಣಪಕ್ಷದ ಪಂಚಮಿಯವರೆಗಿನ ಹತ್ತುದಿನಗಳು ಅದು ಸ್ವರ್ಗದಲ್ಲಿ ಸನ್ನಿಹಿತವಾಗಿರುವುದು.

೨೦. ಕೃತಯುಗದಲ್ಲಿ ಸಕಲತೀರ್ಥಗಳೂ ಉತ್ತಮವು. ತ್ರೇತಾಯುಗದಲ್ಲಿ ಪುಷ್ಕರತೀರ್ಥವು ಉತ್ತಮ. ದ್ವಾಪರಯುಗದಲ್ಲಿ ಕುರುಕ್ಷೇತ್ರವು ಪ್ರಶಸ್ತ. ಕಲಿಯುಗದಲ್ಲಿ ಗಂಗೆಯು ಉತ್ತಮ.

ಪಾಪಶೀಲಾ ಅಪಿ ನರಾಃ ಪರಾಂ ಗತಿಮವಾಪ್ನುಯುಃ ॥ ೨೨ ॥

ಯೋಸೌ ಸರ್ವಗತೋ ವಿಷ್ಣುಶ್ಚಿತ್ಸ್ವರೂಪೀ ಜನಾರ್ದನಃ ।
ಸ ಏವ ದ್ರವರೂಪೇಣ ಗಂಗಾಂಭೋ ನಾತ್ರ ಸಂಶಯಃ ॥ ೨೩ ॥

ಬ್ರಹ್ಮಹಾ ಗುರುಹಾ ಗೋಘ್ನಃ ಸ್ತೇಯೀ ಚ ಗುರುತಲ್ಪಗಃ ।
ಗಂಗಾಂಭಸಾ ಚ ಪೂಯಂತೇ ನಾತ್ರ ಕಾರ್ಯಾ ವಿಚಾರಣಾ ॥ ೨೪ ॥

ಕ್ಷೇತ್ರಸ್ಥಮುದ್ಧೃತಂ ವಾಪಿ ಶೀತಮುಷ್ಣಮಥಾಪಿ ವಾ ।
ಗಾಂಗೇಯಂ ತು ಹರೇತ್ತೋಯಂ ಪಾಪಮಾಮರಣಾಂತಿಕಂ ॥ ೨೫ ॥

---

೨೧. ಕಲಿಯುಗನಲ್ಲಿಯಾದರೋ ಸಕಲತೀರ್ಥಗಳೂ ಸ್ವಾಭಾವಿಕವಾದ ತಮ್ಮ ತಮ್ಮ ಸಾಮರ್ಥ್ಯವನ್ನು ಗಂಗೆಯಲ್ಲಿಡುವುವು. ಗಂಗಾದೇವಿಯಾದರೋ ತನ್ನ ಸಾಮರ್ಥ್ಯವನ್ನು ಎಲ್ಲಿಯೂ ಬಿಡದೆ ತನ್ನಲ್ಲಿಯೇ ಇಟ್ಟುಕೊಂಡಿರುವಳು.

೨೨. ಗಂಗೋದಕದ ಹನಿಯಿಂದ ಯುಕ್ತವಾದ ಗಾಳಿಯ ಸ್ಪರ್ಶದಿಂದಲೂ ಸಹ ಪಾಪಶೀಲರಾದ ಮನುಜರು ಉತ್ತಮಗತಿಯನ್ನು ಹೊಂದುವರು.

೨೩. ಸರ್ವವ್ಯಾಪಕನು, ಜ್ಞಾನಸ್ವರೂಪಿಯು, ಜನಾರ್ದನನೂ ಆದ ವಿಷ್ಣುವೇ ದ್ರವರೂಪದಿಂದ ಗಂಗೋದಕವಾಗಿರುವನು; ಸಂದೇಹವಿಲ್ಲ. ಎಂದರೆ ಗಂಗಾಜಲದಲ್ಲಿ ವಿಷ್ಣುವಿನ ವಿಶೇಷ ಸನ್ನಿಧಾನವಿದೆಯೆಂದು ತಾತ್ಪರ್ಯ.

೨೪. ಬ್ರಹ್ಮಹತ್ಯೆ, ಗುರುಹತ್ಯೆ, ಗೋಹತ್ಯೆಗಳನ್ನು ಮಾಡಿದವನು, ಬಂಗಾರವನ್ನು ಕದ್ದವನು ಮತ್ತು ಗುರುಪತ್ನೀಗಮನ ಮಾಡಿದವನೂ ಸಹ ಗಂಗೋದಕ ಸೇವನೆಯಿಂದ ಪರಿಶುದ್ಧರಾಗುವರು. ಈ ವಿಷಯದಲ್ಲಿ ಸಂಶಯ ಪಡಬಾರದು.

೨೫. ಭೂಮಿಯಲ್ಲಿ ಸಂಗ್ರಹಿಸಲ್ಪಟ್ಟದು ಅಥವಾ ಪಾತ್ರೆಯಲ್ಲಿ ತುಂಬಿಟ್ಟದು, ಕಾಯಿಸಿದಾದರೂ ಸರಿ ಗಂಗೋದಕವು ಮರಣಪರ್ಯಂತವಾದ ಪಾಪವನ್ನು ಪರಿಹರಿಸುತ್ತದೆ.

ವರ್ಜ್ಯಂ ಪರ್ಯುಷಿತಂ ತೋಯಂ ವರ್ಜ್ಯಂ ಪರ್ಯುಷಿತಂ ದಲಂ ।
ನ ವರ್ಜ್ಯಂ ಜಾಹ್ನವೀತೋಯಂ ನ ವರ್ಜ್ಯಂ ತುಲಸೀದಲಂ ॥ ೨೬ ॥

ಮೇರೋಃ ಸುವರ್ಣಸ್ಯ ಚ ಸರ್ವರತ್ನೈಃ
ಸಂಖ್ಯೋಪಲಾನಾಮುದಕಸ್ಯ ವಾಪಿ ।
ಗಂಗಾಜಲಾನಾಂ ನ ತು ಶಕ್ತಿರಸ್ತಿ
ವಕ್ತುಂ ಗುಣಾಖ್ಯಾ ಪರಿಮಾಣಮತ್ರ ॥ ೨೭ ॥

ತೀರ್ಥಯಾತ್ರಾವಿಧಿಂ ಕೃತ್ಸ್ನಮಕುರ್ವಾಣೋ ಯಥಾ ನರಃ ।
ಗಂಗಾತೋಯಸ್ಯ ಮಾಹಾತ್ಮ್ಯಾತ್ಸೋಪ್ಯತ್ರ ಫಲಭಾಗ್ಭವೇತ್ ॥ ೨೮ ॥

ಚಿಂತಾಮಣಿಗುಣಾಚ್ಚಾಪಿ ಗಂಗಾಯಾಸ್ತೋಯಬಿಂದವಃ ।
ವಿಶಿಷ್ಟಾ ಯತ್ಪ್ರಯಚ್ಛಂತಿ ಭಕ್ತೇಭ್ಯೋ ವಾಂಛಿತಂ ಫಲಂ ॥ ೨೯ ॥

---

೨೬. ತಂಗಳಾದ ಎಂದರೆ ದಿನಗಟ್ಲೆ ಇಟ್ಟಿದ್ದ ನೀರು ಮತ್ತು ದಳಗಳು ತ್ಯಾಜ್ಯವು ಸ್ವೀಕಾರಾರ್ಹವಲ್ಲ. ಆದರೆ ಗಂಗೋದಕವು ಮತ್ತು ತುಲಸೀದಳಗಳು ಮಾತ್ರ ಪರ್ಯುಷಿತಗಳಾದರೂ ತ್ಯಾಜ್ಯವಲ್ಲ ಸ್ವೀಕಾರಾರ್ಹವು.

೨೭. ಮೇರುಪರ್ವತ-ಸುವರ್ಣಗಳು, ಸಕಲರತ್ನ-ಚಂದ್ರೋಪಲಗಳು, ಉದಕ-ಗಂಗಾಜಲಗಳು ಇವುಗಳ ಗುಣಗಳನ್ನು ತುಲನಮಾಡಿ ಗಂಗಾಜಲಾದಿಗಳ ಗುಣಗಳಿಷ್ಟೆಂದು ನಿರ್ಧರಿಸಿ ಹೇಳಲು ಯಾರಿಗೂ ಸಾಮರ್ಥ್ಯವಿಲ್ಲ.

೨೮. ವಿಧ್ಯುಕ್ತ ಪ್ರಕಾರವಾಗಿ ತೀರ್ಥಯಾತ್ರಾವಿಧಾನವನ್ನಾಚರಿಸದಿರುವ ಮನುಷ್ಯನು ಗಂಗಾಜಲವನ್ನು ಸೇವಿಸಿದರೆ ಅವನು ಯಾತ್ರಾವಿಧಾನದ ಫಲವನ್ನೂ ಸಹ ಹೊಂದುವನು.

೨೯. ಗಂಗೋದಕದ ಹನಿಗಳು ಭಕ್ತರಿಗೆ ಚಿಂತಾಮಣಿಗಿಂತಲೂ ಹೆಚ್ಚಾಗಿ ಉತ್ತಮವಾದ ಇಷ್ಟಫಲಗಳನ್ನು ಕೊಡುತ್ತವೆ.

ಗಂಡೂಷಮಾತ್ರತೋ ಭಕ್ತ್ಯಾ ಸಕೃದ್ಗಂಗಾಂಭಸಾ ನರಃ |
ಕಾಮಧೇನುಸ್ತನೋದ್ಭೂತಾನ್ ಭುಂಕ್ತೇ ದಿವ್ಯರಸಾನ್ ದಿವಿ || ೩೦ ||

ಶಾಲಗ್ರಾಮಶಿಲಾಯಾಂ ತು ಯಸ್ತು ಗಂಗಾಜಲಂ ಕ್ಷಿಪೇತ್ |
ಅಪಹೃತ್ಯ ತಮಸ್ತೀವ್ರಂ ಭಾತಿ ಸೂರ್ಯೋ ಯಥೋದಯೇ || ೩೧ ||

ಮನೋವಾಕ್ಕಾಯಜೈರ್ಗ್ರಸ್ತಃ ಪಾಪೈರ್ಬಹುವಿಧೈರಪಿ |
ವೀಕ್ಷ್ಯ ಗಂಗಾಂ ಭವೇತ್ಪೂತಃ ಪುರುಷೋ ನಾತ್ರ ಸಂಶಯಃ || ೩೨ ||

ಗಂಗಾತೋಯಾಭಿಷಿಕ್ತಾಂ ತು ಭಿಕ್ಷಾಮಶ್ನಾತಿ ಯಃ ಸದಾ |
ಸರ್ಪವತ್ಕಂಚುಕಂ ಮುಕ್ತ್ವಾ ಪಾಪಹೀನೋ ಭವೇತ್ಸ ವೈ || ೩೩ ||

---

೩೦. ಭಕ್ತಿಯಿಂದ ಒಂದಾವರ್ತಿ ಗಂಗೆಯ ನೀರನ್ನು ಬಾಯಿ ಮುಕ್ಕಳಿಸುವ ಮಾತ್ರದಿಂದ ಮನುಷ್ಯನು ಸ್ವರ್ಗಲೋಕದಲ್ಲಿ ಕಾಮಧೇನುವಿನ ಮೊಲೆಗಳಿಂದ ಕರೆದ ದಿವ್ಯರಸಗಳನ್ನನುಭವಿಸುವನು.

೩೧. ಸಾಲಗ್ರಾಮಶಿಲೆಗೆ ಗಂಗಾಜಲದಿಂದ ಅಭಿಷೇಕಮಾಡುವವನು ಸೂರ್ಯೋದಯದಿಂದ ಕಗ್ಗತ್ತಲು ನಾಶವಾಗುವಂತೆ ಅಜ್ಞಾನವನ್ನು ಪರಿಹರಿಸಿಕೊಂಡು ಜ್ಞಾನಿಯಾಗುವನು.

೩೨. ಮನಸ್ಸು, ವಾಕ್ಕು, ಶರೀರಗಳಿಂದ ನಾನಾವಿಧ ಪಾಪಗಳನ್ನು ಮಾಡಿದ ಪುರುಷನೂ ಸಹ ಗಂಗೆಯ ದರ್ಶನಮಾಡುವುದರಿಂದ ಪರಿಶುದ್ಧನಾಗುವನು. ಈ ವಿಷಯದಲ್ಲಿ ಸಂದೇಹವಿಲ್ಲ.

೩೩. ಗಂಗೋದಕದಿಂದ ಪ್ರೋಕ್ಷಿಸಲ್ಪಟ್ಟ ಭಿಕ್ಷೆಯನ್ನು ಯಾವಾಗಲೂ ತಿನ್ನುವವನು ಪೊರೆಬಿಟ್ಟ ಸರ್ಪದಂತೆ ಪಾಪವನ್ನು ಕಳೆದುಕೊಳ್ಳುವನು.

ಹಿಮವದ್ವಿಂಧ್ಯಸದೃಶಾ ರಾಶಯಃ ಪಾಪಕರ್ಮಣಾಂ ।
ಗಂಗಾಂಭಸಾ ವಿನಶ್ಯಂತಿ ವಿಷ್ಣುಭಕ್ತ್ಯಾ ಯಥಾಪದಃ　　॥ ३४ ॥

ಪ್ರವೇಶಮಾತ್ರೇ ಗಂಗಾಯಾಂ ಸ್ನಾನಾರ್ಥಂ ಭಕ್ತಿತೋ ನೃಣಾಂ ।
ಬ್ರಹ್ಮಹತ್ಯಾದಿಪಾಪಾನಿ ಹಾಹೇತ್ಯುಕ್ತ್ವಾ ಪ್ರಯಾಂತ್ಯಲಂ　　॥ ३५ ॥

ಗಂಗಾತೀರೇ ವಸೇನ್ನಿತ್ಯಂ ಗಂಗಾತೋಯಂ ಪಿಬೇತ್ಸದಾ ।
ಯಃ ಪುಮಾನ್ ಸ ವಿಮುಚ್ಯೇತ ಪಾತಕೈಃ ಪೂರ್ವಸಂಚಿತೈಃ　　॥ ३६ ॥

ಯೋ ವೈ ಗಂಗಾಂ ಸಮಾಶ್ರಿತ್ಯ ನಿತ್ಯಂ ತಿಷ್ಠತಿ ನಿರ್ಭಯಃ ।
ಸ ಏವ ದೇವೈರ್ಮರ್ತ್ಯೈಶ್ಚ ಪೂಜನೀಯೋ ಮಹರ್ಷಿಭಿಃ　　॥ ३७ ॥

ಕಿಮಷ್ಟಾಂಗೇನ ಯೋಗೇನ ಕಿಂ ತಪೋಭಿಃ ಕಿಮಧ್ವರೈಃ ।
ವಾಸ ಏವ ಹಿ ಗಂಗಾಯಾಂ ಸರ್ವತೋಽಪಿ ವಿಶಿಷ್ಯತೇ　　॥ ३८ ॥

---

३४. ವಿಷ್ಣುಭಕ್ತಿಯಿಂದ ವಿಪತ್ತುಗಳು ನಾಶವಾಗುವಂತೆ ವಿಂಧ್ಯ ಹಿಮಾಚಲಗಳಿಗೆ ಸಮಾನಗಳಾದ ಪಾಪಕೃತ್ಯಗಳ ರಾಶಿಗಳು ಗಂಗಾಜಲ ಸೇವನೆಯಿಂದ ನಾಶವಾಗುತ್ತವೆ.

३५. ಭಕ್ತಿಯಿಂದ ಗಂಗೆಯಲ್ಲಿ ಸ್ನಾನಮಾಡಬೇಕೆಂದು ಪ್ರವೇಶ ಮಾಡುವಷ್ಟರಲ್ಲಿಯೇ ಮನುಷ್ಯರ ಬ್ರಹ್ಮಹತ್ಯಾದಿ ಪಾಪಗಳು "ಅಯ್ಯೋ! ಅಯ್ಯೋ!" ಎಂದು ಕೂಗಿಕೊಂಡು ಬೇಗ ಓಡಿಹೋಗುತ್ತವೆ.

३६. ಯಾವಾಗಲೂ ಗಂಗಾತೀರದಲ್ಲಿಯೇ ವಾಸಿಸುತ್ತಾ ಸರ್ವದಾ ಗಂಗಾಜಲವನ್ನು ಪಾನಮಾಡುತ್ತಿರುವ ಮನುಷ್ಯನು ಪೂರ್ವಾರ್ಜಿತ ಸಂಚಿತ ಕರ್ಮಗಳಿಂದ ಮುಕ್ತನಾಗುವನು.

३७. ಪ್ರತಿನಿತ್ಯವೂ ಗಂಗೆಯನ್ನಾಶ್ರಯಿಸಿಕೊಂಡಿರುವ ಮನುಷ್ಯನು ಭಯವನ್ನು ನೀಗಿಕೊಂಡು ದೇವತೆಗಳು, ಮನುಷ್ಯರು ಮತ್ತು ಮಹರ್ಷಿಗಳಿಂದ ಸತ್ಕಾರಾರ್ಹನಾಗುವನು.

३८. ಅಷ್ಟಾಂಗಯೋಗ, ತಪಸ್ಸು ಯಜ್ಞ ಇವುಗಳಿಂದೇನು? ಇವೆಲ್ಲಕ್ಕಿಂತಲೂ ಗಂಗೆಯ ಸನ್ನಿಧಿಯಲ್ಲಿ ವಾಸ ಮಾಡುವುದೇ ಶ್ರೇಷ್ಠವು!

ಕಿಂ ಯಜ್ಞೈರ್ಬಹುಭಿರ್ಜಾಪ್ಯೈಃ ಕಿಂ ತಪೋಭಿರ್ಧನಾರ್ಪಣೈಃ ।
ಸ್ವರ್ಗಮೋಕ್ಷಪ್ರದಾ ಗಂಗಾ ಸುಖಸೇವ್ಯಾ ಯತಸ್ತಥಾ ॥ ೩೯ ॥

ಯಜ್ಞೈರ್ಯಮೈಶ್ಚ ನಿಯಮೈರ್ದಾನೈಃ ಸಂನ್ಯಾಸತೋಽಪಿ ವಾ ।
ನ ತತ್ಫಲಮವಾಪ್ನೋತಿ ಗಂಗಾಂ ಸೇವ್ಯ ಯದಾಪ್ನುಯಾತ್ ॥ ೪೦ ॥

ಪ್ರಭಾಸೇ ಗೋಸಹಸ್ರೇಣ ರಾಹುಗ್ರಸ್ತೇ ದಿವಾಕರೇ ।
ಯತ್ಫಲಂ ಲಭತೇ ಮರ್ತ್ಯೋ ಗಂಗಾಯಾಂ ತದ್ದಿನೇನ ವೈ ॥ ೪೧ ॥

ಅನ್ಯೋಪಾಯಾಂಶ್ಚ ಯಸ್ತ್ಯಕ್ತ್ವಾ ಮೋಕ್ಷಕಾಮಃ ಸುನಿಶ್ಚಿತಃ ।
ಗಂಗಾತೀರೇ ಸುಖಂ ತಿಷ್ಠೇತ್ಸ ವೈ ಮೋಕ್ಷಸ್ಯ ಭಾಜನಂ ॥ ೪೨ ॥

ವಾರಾಣಸ್ಯಾಂ ವಿಶೇಷೇಣ ಗಂಗಾ ಸದ್ಯಸ್ತು ಮೋಕ್ಷದಾ ।
ಪ್ರತಿಮಾಸಂ ಚತುರ್ದಶ್ಯಾಮಷ್ಟಮ್ಯಾಂ ಚೈವ ಸರ್ವದಾ ॥ ೪೩ ॥

---

೩೯. ಯಜ್ಞ, ಬಹುಮಂತ್ರಜಪಗಳು, ತಪಸ್ಸು, ದ್ರವ್ಯದಾನ ಇವುಗಳಿಂದೇನು? ಅನಾಯಾಸವಾಗಿ ಸೇವಿಸಲರ್ಹವಾದ ಗಂಗೆಯೇ ಸ್ವರ್ಗಮೋಕ್ಷದಾಯಕವಾಗಿದೆ!

೪೦. ಯಜ್ಞ, ಇಂದ್ರಿಯನಿಗ್ರಹ, ನಿಯಮ, ದಾನ, ಸನ್ಯಾಸ ಇವುಗಳಿಂದಾಗುವ ಫಲವು ಗಂಗೆಯ ಸೇವನೆಯಿಂದಲೇ ಲಭಿಸುವುದು.

೪೧. ಸೂರ್ಯಗ್ರಹಣಕಾಲದಲ್ಲಿ ಪ್ರಭಾಸಕ್ಷೇತ್ರದಲ್ಲಿ ಒಂದುಸಾವಿರ ಗೋವುಗಳನ್ನು ದಾನಮಾಡುವುದರಿಂದುಂಟಾಗುವ ಫಲವು ಆದಿನ ಗಂಗೆಯಲ್ಲಿ ಸ್ನಾನ ಮಾಡುವ ಮನುಷ್ಯನಿಗೆ ದೊರೆಯುವುದು.

೪೨. ಮೋಕ್ಷವನ್ನು ಬಯಸುವ ತತ್ವಜ್ಞಾನಿಯು ಬೇರೆ ಸಾಧನಗಳನ್ನೆಲ್ಲಾ ಬಿಟ್ಟು ಗಂಗೆಯ ತೀರದಲ್ಲಿ ಸುಖವಾಗಿ ವಾಸಮಾಡಿದರೆ ಅವನು ಮೋಕ್ಷಭಾಗಿಯಾಗುವನು.

೪೩. ಗಂಗೆಯು ಕಾಶೀಕ್ಷೇತ್ರದಲ್ಲಿ ಇತರ ಸ್ಥಳಗಳಿಗಿಂತಲೂ ಕ್ಷಿಪ್ರವಾಗಿ ಮೋಕ್ಷದಾಯಕವಾಗುವುದು. ಅಲ್ಲಿ ಪ್ರತಿ ತಿಂಗಳ ಚತುರ್ದಶಿಯಲ್ಲಿ ಇಷ್ಟಲ್ಲವೇ ಎಲ್ಲಾ ಅಷ್ಟಮೀದಿನಗಳಲ್ಲಿ ಗಂಗಾಸ್ನಾನವು ವಿಶೇಷ ಫಲಪ್ರದವು.

ಗಂಗಾತೀರೇ ನಿವಾಸಶ್ಚ ಯಾವಜ್ಜೀವಂ ಚ ಸಿದ್ಧಿದಃ ।
ಕೃಚ್ಛ್ರಾಣಿತು ಸದಾ ಕೃತ್ವಾ ಯತ್ಫಲಂ ಚಾಶ್ನುತೇ ಸದಾ ॥ ೪೪ ॥

ಚಾಂದ್ರಾಯಣಂ ಚೈವ ತಥಾ ತಲ್ಲಭೇಜ್ಜಾಹ್ನವೀತಟೇ ।
ಗಂಗಾಸೇವಾಪರಸ್ಯೇಹ ದಿವಸಾರ್ಧೇನ ಯತ್ಫಲಂ ॥ ೪೫ ॥

ನ ತಚ್ಛಕ್ಯಂ ಬ್ರಹ್ಮಸುತೇ ಪ್ರಾಪ್ತುಂ ಕ್ರತುಶತೈರಪಿ ।
ಸರ್ವಯಜ್ಞತಪೋದಾನಯೋಗಸ್ವಾಧ್ಯಾಯಕರ್ಮಭಿಃ ॥ ೪೬ ॥

ಯತ್ಫಲಂ ತಲ್ಲಭೇದ್ಭಕ್ತ್ಯಾ ಗಂಗಾತೀರನಿವಾಸತಃ ।
ಯತ್ಪುಣ್ಯಂ ಸತ್ಯವಚನೈರ್ನೈಷ್ಠಿಕಬ್ರಹ್ಮಚಾರಿಣಾಂ ॥ ೪೭ ॥

ಯದಗ್ನಿಹೋತ್ರಿಣಾಂ ಪುಣ್ಯಂ ತತ್ತು ಗಂಗಾನಿವಾಸತಃ ।
ಸಮಾತೃಪಿತೃದಾರಾಣಾಂ ಕುಲಕೋಟಿಮನಂತಕಂ ॥ ೪೮ ॥

---

೪೪-೪೫. ಬದುಕಿರುವವರೆಗೂ ಗಂಗೆಯ ತೀರದಲ್ಲಿ ವಾಸಮಾಡುವುದು ಸಿದ್ಧಿದಾಯಕವು. ಕೃಚ್ಛ್ರ ಚಾಂದ್ರಾಯಣವ್ರತಗಳನ್ನಾಚರಿಸುವುದರಿಂದುಂಟಾಗುವ ಫಲವು ಗಂಗಾತೀರದಲ್ಲಿ ಅದರ ಸೇವೆಯನ್ನು ಮಾಡುತ್ತಾ ಅರ್ಧದಿನ ವಾಸಮಾಡುವುದರಿಂದಲೇ ದೊರೆಯುತ್ತದೆ.

೪೬-೫೦.. ಬ್ರಹ್ಮಕುಮಾರಿಯೇ! ನೂರು ಕ್ರತುಗಳು, ಸಕಲ ಯಜ್ಞಗಳು, ತಪಸ್ಸು, ದಾನ, ಯಾಗ, ವೇದಾಧ್ಯಯನವೆಂಬ ಸತ್ಕರ್ಮಗಳಿಂದ ಲಭಿಸುವ ಫಲವು ಗಂಗಾತೀರದಲ್ಲಿದ್ದು ಭಕ್ತಿಯಿಂದ ಅದನ್ನು ಸೇವಿಸುವ ಮಾತ್ರದಿಂದ ಲಭಿಸುತ್ತದೆ.

ನೈಷ್ಠಿಕಬ್ರಹ್ಮಚಾರಿಗಳಿಗೆ ಸತ್ಯವಚನಗಳಿಂದ ಸಂಭವಿಸುವ ಪುಣ್ಯವು ಮತ್ತು ಅಗ್ನಿಹೋತ್ರಿಗಳಿಗೆ ಬರುವ ಪುಣ್ಯವೂ ಸಹ ಗಂಗೆಯ ಸೇವನೆಯಿಂದ ದೊರೆಯುವುದು.

ಗಂಗಾಭಕ್ತಿಸ್ತಾರಯತೇ ಸಂಸಾರಾರ್ಣವತೋ ಧ್ರುವಂ ।
ಸಂತೋಷಃ ಪರಮೈಶ್ವರ್ಯಂ ತತ್ತ್ವಜ್ಞಾನಂ ಸುಖಾತ್ಮನಾಂ ॥ ೪೯ ॥

ವಿನಯೋಽಚಾರಸಂಪತ್ತಿರುಮಾಭಕ್ತಸ್ಯ ಜಾಯತೇ ।
ಕೃತಕೃತ್ಯೋ ಭವೇನ್ಮರ್ತ್ಯೋ ಗಂಗಾಂ ಪ್ರಾಪ್ಯೈವ ಕೇವಲಂ ॥ ೫೦ ॥

ತದ್ಭಕ್ತಸ್ತತ್ಪರಶ್ಚ ಸ್ಯಾನ್ಮೃತೋ ವಾಪಿ ನ ಸಂಶಯಃ ।
ಭಕ್ತ್ಯಾ ತಜ್ಜಲಸಂಸ್ಪರ್ಶೀ ತಜ್ಜಲಂ ಪಿಬತೇ ಚ ಯಃ ॥ ೫೧ ॥

ಅನಾಯಾಸೇನ ಹಿ ನರೋ ಮೋಕ್ಷೋಪಾಯಂ ಸ ವಿಂದತಿ ।
ದೀಕ್ಷಿತಃ ಸರ್ವಯಜ್ಞೇಷು ಸೋಮಪಾನಂ ದಿನೇದಿನೇ ॥ ೫೨ ॥

ಸರ್ವಾಣಿ ಯೇಷಾಂ ಗಂಗಾಯಾಸ್ತೋಯೈಃ ಕೃತ್ಯಾನಿ ಸರ್ವದಾ ।
ದೇಹಂ ತ್ಯಕ್ತ್ವಾ ನರಾಸ್ತೇ ತು ಮೋದಂತೇ ಶಿವಸನ್ನಿಧೌ ॥ ೫೩ ॥

---

ಗಂಗೆಯಲ್ಲಿ ಮಾಡುವ ಭಕ್ತಿಯು ತಾಯಿ, ತಂದೆ ಮತ್ತು ಅವನ ಪತ್ನಿಯರುಗಳ ಅಸಂಖ್ಯಾಕ ಕುಲಕೋಟಿಯನ್ನು ಖಂಡಿತವಾಗಿಯೂ ಸಂಸಾರ ವೆಂಬ ಸಾಗರದಿಂದ ದಾಟಿಸುತ್ತದೆ.

ಸುಖಸ್ವರೂಪರಾದ ಜೀವರಿಗೆ ಸಂತೋಷ, ಪರಮೈಶ್ವರ್ಯ, ತತ್ತ್ವಜ್ಞಾನ, ವಿನಯ ಮತ್ತು ಸದಾಚಾರಸಂಪತ್ತಿಗಳು ಉಮಾದೇವಿಯ ಭಕ್ತನಿಗುಂಟಾ ಗುತ್ತವೆ. ಮನುಷ್ಯನು ಗಂಗೆಯನ್ನು ಸೇವಿಸಿಯೇ ಕೃತಕೃತ್ಯನಾಗಬೇಕು.

೫೧-೫೩. ಗಂಗಾಸೇವಿಯು ಸತ್ತರೂಸಹ ಅವನು ಗಂಗಾಭಕ್ತನು, ಅದರ ಸೇವೆಯಲ್ಲಿ ನಿರತನೂ ಆಗುವನು. ಸಂದೇಹವಿಲ್ಲ. ಭಕ್ತಿಯಿಂದ ಗಂಗೋ ದಕವನ್ನು ಸ್ಪರ್ಶಮಾಡುವವನು ಮತ್ತು ಅದನ್ನು ಪಾನಮಾಡುವವನೂ ಸಹ ಅನಾಯಾಸವಾಗಿ ಮೋಕ್ಷಸಾಧನಸಂಪನ್ನನಾಗುವನು.

ಸಕಲಯಜ್ಞಗಳಲ್ಲಿಯೂ ದೀಕ್ಷಿತನಾಗಿ ಪ್ರತಿದಿನವೂ ಸೋಮಪಾನ ಮಾಡುತ್ತಾ ಗಂಗೋದಕದಿಂದಲೇ ಸಕಲಕರ್ತವ್ಯಕರ್ಮಗಳನ್ನೂ ಯಾವಾ ಗಲೂ ಮಾಡುವ ಪುರುಷರು ಈ ದೇಹವನ್ನು ಬಿಟ್ಟ ಮೇಲೆ ಈಶ್ವರ ಸನ್ನಿ ಧಾನದಲ್ಲಿ ಸುಖಪಡುವರು.

**ದೇವಾಃ ಸೋಮಾರ್ಕಸಂಸ್ಥಾನಿ ಯಥಾ ಶಕ್ರಾದಯೋಃ ಮುಖೈಃ ।**
**ಅಮೃತಾನ್ಯುಪಭುಂಜಂತಿ ತಥಾ ಗಂಗಾಜಲಂ ನರಾಃ ॥ ೫೪ ॥**

**ಕನ್ಯಾದಾನೈಶ್ಚ ವಿಧಿವದ್ಭೂಮಿದಾನೈಶ್ಚ ಭಕ್ತಿತಃ ।**
**ಅನ್ನದಾನೈಶ್ಚ ಗೋದಾನೈಃ ಸ್ವರ್ಣದಾನಾದಿಭಿಸ್ತಥಾ ॥ ೫೫ ॥**

**ರಥಾಶ್ವಗಜದಾನೈಶ್ಚ ಯತ್ಪುಣ್ಯಂ ಪರಿಕೀರ್ತಿತಂ ।**
**ತತಃ ಶತಗುಣಂ ಪುಣ್ಯಂ ಗಂಗಾಂಭಶ್ಚುಲುಕಾಶನಾತ್ ॥ ೫೬ ॥**

**ಚಾಂದ್ರಾಯಣಸಹಸ್ರಾಣಾಂ ಯತ್ಫಲಂ ಪರಿಕೀರ್ತಿತಂ ।**
**ತತೋಧಿಕಫಲಂ ಗಂಗಾತೋಯಪಾನಾದವಾಪ್ಯತೇ ॥ ೫೭ ॥**

**ಗಂಡೂಷಮಾತ್ರಪಾನೇ ತು ಅಶ್ವಮೇಧಫಲಂ ಲಭೇತ್ ।**
**ಸ್ವಚ್ಛಂದಂ ಯಃ ಪಿಬೇದಂಭಸ್ತಸ್ಯ ಮುಕ್ತಿಃ ಕರೇ ಸ್ಥಿತಾ ॥ ೫೮ ॥**

---

೫೪. ಇಂದ್ರಾದಿ ದೇವತೆಗಳು ಯಜ್ಞಗಳಿಂದ ಚಂದ್ರ ಸೂರ್ಯ ಸಂಸ್ಥಗಳಾದ ಅಮೃತಗಳನ್ನು ಭೋಗಿಸುವಂತೆ ಮನುಷ್ಯರು ಗಂಗೋದಕವನ್ನು ಭೋಗಿಸುವರು.

೫೫-೫೬. ವಿಧಿವತ್ತಾಗಿ ಭಕ್ತಿಯಿಂದ ಮಾಡಿದ ಕನ್ಯಾದಾನ, ಭೂದಾನ, ಗೋದಾನ, ಸುವರ್ಣದಾನಾದಿಗಳು, ರಥ, ಕುದುರೆ, ಆನೆಗಳ ದಾನ ಇವುಗಳಿಂದ ಎಷ್ಟು ಪುಣ್ಯವು ಬರುತ್ತದೆಂದು ಹೇಳಿದೆಯೋ ಅದರ ನೂರರಷ್ಟು ಪುಣ್ಯವು ಗಂಗಾಜಲಬಿಂದುವನ್ನು ಕುಡಿಯುವುದರಿಂದ ಲಭಿಸುತ್ತದೆ.

೫೭. ಸಾವಿರಾರು ಚಾಂದ್ರಾಯಣವ್ರತಗಳಿಂದ ಎಂತಹ ಫಲ ಬರುತ್ತದೆಯೆಂದು ಹೇಳಿದೆಯೋ ಅದಕ್ಕಿಂತಲೂ ಹೆಚ್ಚಿನ ಫಲವು ಗಂಗೋದಕ ಪಾನದಿಂದ ಬರುತ್ತದೆ.

೫೮. ಗಂಗಾಜಲವನ್ನು ಬಾಯಿಮುಕ್ಕಳಿಸುವಷ್ಟು ಪಾನಮಾಡಿದರೆ ಅಶ್ವಮೇಧಫಲವೂ, ಯಥೇಷ್ಟವಾಗಿ ಪಾನಮಾಡಿದರೆ ಮುಕ್ತಿಯೂ ಸಹ ಹಸ್ತಗತವಾಗುವುದು.

ತ್ರಿಭಿಃ ಸಾರಸ್ವತಂ ತೋಯಂ ಸಪ್ತಭಿಸ್ತ್ವಥ ಯಾಮುನಂ ।
ನಾರ್ಮದಂ ದಶಭಿರ್ಮಾಸೈರ್ಗಾಂಗಂ ವರ್ಷೇಣ ಜೀರ್ಯತಿ ॥ ೫೯ ॥

ಶಾಸ್ತ್ರೇಣಾಕೃತತೋಯಾನಾಂ ಮೃತಾನಾಂ ಕ್ವಾಪಿ ದೇಹಿನಾಂ ।
ತದುತ್ತರಫಲಾವಾಪ್ತಿರ್ಗಂಗಾಯಾಮಸ್ಥಿಯೋಗತಃ ॥ ೬೦ ॥

ಚಾಂದ್ರಾಯಣಸಹಸ್ರಂ ತು ಯಶ್ಚರೇತ್ಕಾಯಶೋಧನಂ ।
ಯಃ ಪಿಬೇತ್ತು ಯಥೇಷ್ಟಂ ತು ಗಂಗಾಂಭಃ ಸ ವಿಶಿಷ್ಯತೇ ॥ ೬೧ ॥

ಗಂಗಾಂ ಪಶ್ಯತಿ ಯಃ ಸ್ತೌತಿ ಸ್ನಾತಿ ಭಕ್ತ್ಯಾ ಪಿಬೇಜ್ಜಲಂ ।
ಸ ಸ್ವರ್ಗಂ ಜ್ಞಾನಮಮಲಂ ಯೋಗಂ ಮೋಕ್ಷಂ ಚ ವಿಂದತಿ ॥ ೬೨ ॥

---

೫೯. ಸರಸ್ವತೀನದಿಯನೀರು ಮೂರುತಿಂಗಳುಗಳಲ್ಲಿಯೂ, ಯಮುನಾ ಜಲವು ಏಳುತಿಂಗಳುಗಳಲ್ಲಿಯೂ, ಗಂಗಾಜಲವು ಒಂದು ವರ್ಷದಲ್ಲಿಯೂ ಜೀರ್ಣವಾಗುತ್ತದೆ.

೬೦. ಎಲ್ಲಿಯೋ ಬೇರೆ ದೇಶದಲ್ಲಿ ಸತ್ತ, ಶಾಸ್ತ್ರೋಕ್ತರೀತಿಯಿಂದ ಗಂಗೋದಕವನ್ನು ಸೇವಿಸದಿರುವ ಪ್ರಾಣಿಗಳ ಮೂಳೆಯನ್ನು ತಂದು ಗಂಗೆಯಲ್ಲಿ ಸಂಯೋಜನೆ ಮಾಡಿದರೆ ಮೃತನಿಗೆ ಭವಿಷ್ಯ ಸದ್ಗತಿಯು ಸಿಕ್ಕುವುದು.

೬೧. ಶರೀರ ಶೋಧಕವಾದ ಸಾವಿರ ಚಾಂದ್ರಾಯಣವ್ರತವನ್ನಾಚರಿಸಿದವನಿಗಿಂತಲೂ ಯಥೇಷ್ಟವಾಗಿ ಗಂಗೋದಕವನ್ನು ಕುಡಿದವನು ಉತ್ತಮನು.

೬೨-೬೩. ಯಾವನು ಗಂಗೆಯ ದರ್ಶನವನ್ನು ಮಾಡುವನೋ, ಅದನ್ನು ಸ್ತೋತ್ರಮಾಡುವನೋ, ಅದರಲ್ಲಿ ಸ್ನಾನಮಾಡುವನೋ, ಭಕ್ತಿಯಿಂದ ಅದನ್ನು ಕುಡಿಯುವನೋ ಅಥವಾ ಸೂರ್ಯನಿಂದ ಕಾಯಿಸಲ್ಪಟ್ಟ ಗಂಗಾಜಲ

ಯಸ್ತು ಸೂರ್ಯಸುನಿಷ್ಟಪ್ತಗಾಂಗೇಯಂ ಪಿಬತೇ ಜಲಂ ।
ಗೋಮೂತ್ರಪಾವಕಾಹಾರಾದ್ಗಾಂಗಪಾನಂ ವಿಶಿಷ್ಯತೇ ॥ ೬೩ ॥

ಇತಿ ಶ್ರೀನಾರದೀಯಮಹಾಪುರಾಣೋತ್ತರಭಾಗೇ ಮೋಹಿನೀ
ವಸುಸಂವಾದೇ ಗಂಗಾಮಾಹಾತ್ಮ್ಯವರ್ಣನಂ ನಾಮ
ಅಷ್ಟತ್ರಿಂಶತ್ತಮೋಽಧ್ಯಾಯಃ

---

ವನ್ನು ಪಾನ ಮಾಡುತ್ತಾನೆಯೋ ಅವನು ಸ್ವರ್ಗವನ್ನೂ, ನಿರ್ಮಲಜ್ಞಾನವನ್ನೂ, ಯೋಗಕ್ಷೇಮಗಳನ್ನೂ ಸಹ ಹೊಂದುವನು.

ಗೋಮೂತ್ರ ಅಥವಾ ಪಾವಕ (ಚಿತ್ರಮೂಲ) ಗಳನ್ನು ಆಹಾರ ಮಾಡುವುದಕ್ಕಿಂತಲೂ ಗಂಗಾಪಾನವು ಉತ್ತಮ ಫಲದಾಯಕವು.

ಇಂತು ಶ್ರೀ ನಾರದೀಯ ಪುರಾಣೋತ್ತರಭಾಗದಲ್ಲಿ ಮೋಹಿನೀ ವಸು
ಸಂವಾದದೊಳು ಗಂಗಾ ಮಾಹಾತ್ಮ್ಯ ವರ್ಣನೆಯೆಂಬ
ಮೂವತ್ತೆಂಟನೆಯ ಅಧ್ಯಾಯವು ಮುಗಿದುದು.



## ಏಕೋನಚತ್ವಾರಿಂಶೋಽಧ್ಯಾಯಃ

### ವಸುರುವಾಚ

ಶೃಣು ಮೋಹಿನಿ ವಕ್ಷ್ಯಾಮಿ ಗಂಗಾಯಾ ದರ್ಶನೇ ಫಲಂ ।
ಯದುಕ್ತಂ ಹಿ ಪುರಾಣೇಷು ಮುನಿಭಿಸ್ತತ್ವದರ್ಶಿಭಿಃ ॥ ೧ ॥

ಭವಂತಿ ನಿರ್ವಿಷಾಃ ಸರ್ಪಾ ಯಥಾ ತಾರ್ಕ್ಷ್ಯಸ್ಯ ದರ್ಶನಾತ್ ।
ಗಂಗಾಸಂದರ್ಶನಾತ್ತದ್ವತ್ಸರ್ವಪಾಪೈಃ ಪ್ರಮುಚ್ಯತೇ ॥ ೨ ॥

ಸಪ್ತಾವರಾನ್ ಸಪ್ತಪರಾನ್ ಪಿತೄಂಸ್ತೇಭ್ಯಶ್ಚ ಯೇ ಪರೇ ।
ಪುಮಾಂಸ್ತಾರಯತೇ ಗಂಗಾಂ ವೀಕ್ಷ್ಯ ಸ್ಪೃಷ್ಟ್ವಾವಗಾಹ್ಯ ಚ ॥ ೩ ॥

---

### ಮೂವತ್ತೊಂಬತ್ತನೆಯ ಅಧ್ಯಾಯ

೧. ವಸುವು ಹೇಳಿದನು:-ಮೋಹಿನಿಯೇ! ತತ್ವಜ್ಞಾನಿಗಳಾದ ಮುನಿಗಳು ಪುರಾಣಗಳಲ್ಲಿ ಹೇಳಿರುವ ಗಂಗೆಯ ದರ್ಶನದ ಫಲವನ್ನು ಹೇಳುವೆನು ಕೇಳು.

೨. ಸರ್ಪಗಳು ಗರುಡನನ್ನು ನೋಡುವುದರಿಂದ ವಿಷರಹಿತವಾಗುವಂತೆ ಗಂಗೆಯ ಸಂದರ್ಶನ ಮಾತ್ರದಿಂದ ಮನುಷ್ಯರು ಸಕಲ ಪಾಪಗಳಿಂದಲೂ ಮುಕ್ತರಾಗುವರು.

೩. ಗಂಗೆಯ ದರ್ಶನ, ಸ್ಪರ್ಶನ, ಅವಗಾಹನ ಸ್ನಾನಗಳಿಂದ ಪುರುಷನು ತನ್ನ ಹಿಂದೆ, ಮುಂದೆಯೂ ಸಹ ಏಳು ಪಿತೃಗಳನ್ನೂ, ಅವರಿಗಿಂತ ದೂರದವರನ್ನೂ ಸಹ ಸಂಸಾರಾಬ್ಧಿಯಿಂದ ದಾಟಿಸುವನು.

ದರ್ಶನಾತ್ಸ್ಪರ್ಶನಾತ್ಪಾನಾತ್ತಥಾ ಗಂಗೇತಿ ಕೀರ್ತನಾತ್ |
ಪುರ್ಮಾ ಪುನಾತಿ ಪುರುಷಾನ್ ಶತಶೋಽಥ ಸಹಸ್ರಶಃ || ೪ ||

ಜ್ಞಾನಮೈಶ್ವರ್ಯಮತುಲಂ ಪ್ರತಿಷ್ಠಾಯುರ್ಯಶಸ್ತಥಾ |
ಶುಭಾನಾಮಾಶ್ರಮಾಣಾಂ ಚ ಗಂಗಾದರ್ಶನಜಂ ಫಲಂ || ೫ ||

ಸರ್ವೇಂದ್ರಿಯಾಣಾಂ ಚಾಂಚಲ್ಯಂ ವ್ಯಸನಾನಿ ಚ ಪಾತಕಂ |
ನಿರ್ಘೃಣತ್ವಂ ಚ ನಶ್ಯಂತಿ ಗಂಗಾದರ್ಶನಮಾತ್ರತಃ || ೬ ||

ಪರಹಿಂಸಾಂ ಚ ಕೌಟಿಲ್ಯಂ ಪರದೋಷಾದ್ಯವೇಕ್ಷಣಂ |
ದಾಂಭಿಕತ್ವಂ ನೃಣಾಂ ಗಂಗಾದರ್ಶನಾದೇವ ನಶ್ಯತಿ || ೭ ||

ಮುಹುರ್ಮುಹುಸ್ತಥಾ ಪಶ್ಯೇತ್ಸ್ಪೃಶೇದ್ವಾಪಿ ಮುಹುರ್ಮುಹುಃ |
ಭಕ್ತ್ಯಾ ಯದಿಚ್ಛತಿ ನರಃ ಶಾಶ್ವತಂ ಪದಮವ್ಯಯಂ || ೮ ||

---

೪. ದರ್ಶನ, ಸ್ಪರ್ಶನ, ಪಾನಗಳಿಂದಲೂ ಮತ್ತು "ಗಂಗಾ" ಎಂದು ಕೀರ್ತನೆ ಮಾಡುವುದರಿಂದಲೂ, ಮನುಷ್ಯನು ನೂರು ಅಥವಾ ಸಾವಿರಾರು ಪುರುಷರನ್ನು ಪರಿಶುದ್ಧರನ್ನಾಗಿ ಮಾಡುವನು.

೫. ಗಂಗೆಯ ದರ್ಶನದಿಂದ ಜ್ಞಾನ, ಅನವೃಶವಾದ ಐಶ್ವರ್ಯ, ಗೌರವ, ಆಯುಸ್ಸು, ಕೀರ್ತಿ ಮತ್ತು ಮಂಗಳಕರವಾದ ಆಶ್ರಮಗಳ ಫಲ ಇವೆಲ್ಲವೂ ಉಂಟಾಗುತ್ತವೆ.

೬. ಸಕಲೇಂದ್ರಿಯಗಳ ಚಾಪಲ್ಯ, ವ್ಯಸನ, ಪಾಪ ಮತ್ತು ನಿರ್ದಯತೆಗಳು ಗಂಗೆಯ ದರ್ಶನಮಾಡುವ ಮಾತ್ರದಿಂದ ಹೋಗುತ್ತವೆ.

೭. ಪರಹಿಂಸೆ, ಮೋಸಬುದ್ಧಿ, ಇತರರಲ್ಲಿ ದೋಷಗಳನ್ನೇ ಹುಡುಕುವುದು, ಡಂಭ ಇವು ಮನುಷ್ಯರಿಗೆ ಗಂಗೆಯ ದರ್ಶನದಿಂದಲೇ ಹೋಗುತ್ತವೆ.

೮. ಬಾರಿಬಾರಿಗೂ ಗಂಗೆಯ ದರ್ಶನ ಸ್ಪರ್ಶನಗಳನ್ನು ಭಕ್ತಿಯಿಂದ ಮಾಡುವವನು ಮನುಷ್ಯನು ಬಯಸುವ ನಾಶರಹಿತವಾದ ಶಾಶ್ವತಪದ ಎಂದರೆ ಮೋಕ್ಷವನ್ನು ಪಡೆಯುವನು.

ವಾಪೀಕೂಪತಡಾಗಾದಿಪ್ರಪಾಸತ್ರಾದಿಭಿಸ್ತಥಾ ।
ಅನ್ಯತ್ರ ಯದ್ಭವೇತ್ಪುಣ್ಯಂ ತದ್ಗಂಗಾದರ್ಶನಾದ್ಭವೇತ್ ॥ ೯ ॥

ಯತ್ಫಲಂ ಜಾಯತೇ ಪುಂಸಾಂ ದರ್ಶನೇ ಪರಮಾತ್ಮನಃ ।
ತದ್ಭವೇದೇವ ಗಂಗಾಯಾ ದರ್ಶನಾದ್ಭಕ್ತಿಭಾವತಃ ॥ ೧೦ ॥

ನೈಮಿಷೇ ಚ ಕುರುಕ್ಷೇತ್ರೇ ನರ್ಮದಾಯಾಂ ಚ ಪುಷ್ಕರೇ ।
ಸ್ನಾನಾತ್ಸಂಸ್ಪರ್ಶನಾತ್ಸೇವ್ಯ ಸುಫಲಂ ಲಭತೇ ನರಃ ॥ ೧೧ ॥

ತದ್ಗಂಗಾದರ್ಶನಾದೇವ ಕಲೌ ಪ್ರಾಹುರ್ಮಹರ್ಷಯಃ ।
ಅಥ ತೇ ಸ್ಮರಣಸ್ಯಾಪಿ ಗಂಗಾಯಾ ಭೂಪ ಭಾಮಿನಿ ॥ ೧೨ ॥

ಪ್ರವಕ್ಷ್ಯಾಮಿ ಫಲಂ ಯತ್ತು ಪುರಾಣೇಷು ಪ್ರಕೀರ್ತಿತಂ ।
ಅಶುಭೈಃ ಕರ್ಮಭಿರ್ಯುಕ್ತಾನ್ ಮಜ್ಜಮಾನಾನ್ ಭವಾರ್ಣವೇ ॥ ೧೩ ॥

---

೯. ಸರೋವರ, ಬಾವಿ, ಕೆರೆ, ಅರವಟ್ಟಿಗೆ, ಛತ್ರ ಮುಂತಾದುವುಗಳನ್ನು ಬೇರೆ ಸ್ಥಳಗಳಲ್ಲಿ ಕಟ್ಟಿಸುವುದರಿಂದ ಜನರಿಗೆ ಯಾವ ಪುಣ್ಯವು ಬರುವುದೋ ಅಂತಹ ಪುಣ್ಯವು ಗಂಗೆಯ ದರ್ಶನ ಮಾತ್ರದಿಂದ ಬರುತ್ತದೆ.

೧೦ ಮನುಷ್ಯರಿಗೆ ಪರಮಾತ್ಮನನ್ನು ಸಾಕ್ಷಾತ್ತಾಗಿ ಸಂದರ್ಶನ ಮಾಡುವುದರಿಂದಲೇ ಲಭಿಸುತ್ತದೆ.

೧೧-೨೨. ನೈಮಿಷಾರಣ್ಯ, ಕುರುಕ್ಷೇತ್ರ, ನರ್ಮದಾ ಮತ್ತು ಪುಷ್ಕರಗಳನ್ನು ಸ್ಪರ್ಶನ, ಸ್ನಾನಾದಿಗಳಿಂದ ಸೇವಿಸುವ ಮನುಷ್ಯನು ಯಾವ ಉತ್ತಮ ಫಲವನ್ನು ಹೊಂದುವನೋ ಅದು ಕಲಿಯುಗದಲ್ಲಿ ಗಂಗೆಯ ದರ್ಶನದಿಂದಲೇ ಸಿದ್ಧಿಸುವುದೆಂದು ಮಹರ್ಷಿಗಳು ಹೇಳಿರುವರು.

ರಾಜಪತ್ನಿಯೇ ! ಈಗ ಪುರಾಣಗಳಲ್ಲಿ ಹೇಳಿರುವ ಗಂಗೆಯ ಸ್ಮರಣ ಫಲವನ್ನು ನಿನಗೆ ಹೇಳುವೆನು. ದೂರದಿಂದಲಾದರೂ ಗಂಗೆಯನ್ನು ಸ್ಮರಿಸಿದರೆ ಅದು ಪಾಪಕರ್ಮಗಳಿಂದ ಯುಕ್ತರಾಗಿ ಸಂಸಾರ ಸಾಗರದಲ್ಲಿ ಮುಳುಗಿ ನರಕದಲ್ಲಿ ಬಿದ್ದು ನರಳುತ್ತಿರುವವರನ್ನೂ ಸಹ ಉದ್ಧರಿಸುತ್ತದೆ.

ಪತತೋ ನರಕೇ ಗಂಗಾ ಸ್ಮೃತಾ ದೂರಾತ್ಸಮುದ್ಧರೇತ್ ।
ಯೋಜನಾನಾಂ ಸಹಸ್ರೇಷು ಗಂಗಾಂ ಸ್ಮರತಿ ಯೋ ನರಃ ॥ ೧೪ ॥

ಅಪಿ ದುಷ್ಕೃತಕರ್ಮಾ ಹಿ ಲಭತೇ ಪರಮಾಂ ಗತಿಂ ।
ಸ್ಮರಣಾದೇವ ಗಂಗಾಯಾಃ ಪಾಪಸಂಘಾತಪಂಜರಂ ॥ ೧೫ ॥

ಭೇದಂ ಸಹಸ್ರಧಾ ಯಾತಿ ಗಿರಿರ್ವಜ್ರಹತೋ ಯಥಾ ।
ಗಚ್ಛಂಸ್ತಿಷ್ಠನ್ ಸ್ವಪನ್ ಧ್ಯಾಯಞ್ಜಾಗ್ರದ್ಭುಂಜನ್ ಹಸನ್ ರುದನ್ ॥ ೧೬ ॥

ಯಃ ಸ್ಮರೇತ್ಸತತಂ ಗಂಗಾಂ ಸ ಚ ಮುಚ್ಯೇತ ಬಂಧನಾತ್ ।
ಸಹಸ್ರಯೋಜನಸ್ಥಾಶ್ಚ ಗಂಗಾಂ ಭಕ್ತ್ಯಾ ಸ್ಮರಂತಿ ಯೇ ॥ ೧೭ ॥

ಗಂಗಾಗಂಗೇತಿ ಚಾಕ್ರುಶ್ಯ ಮುಚ್ಯಂತೇ ತೇಽಪಿ ಪಾತಕಾತ್ ।
ಯೇ ಚ ಸ್ಮರಂತಿ ವೈ ಗಂಗಾಂ ಗಂಗಾಭಕ್ತಿಪರಾಶ್ಚ ಯೇ ॥ ೧೮ ॥

---

ಸಾವಿರಾರು ಗಾವುದ ದೂರದಲ್ಲಿ ನಿಂತು ಗಂಗೆಯನ್ನು ಸ್ಮರಿಸುವ ಮನುಷ್ಯನು ದುಷ್ಕರ್ಮ ಮಾಡಿದವನಾದರೂ ಉತ್ತಮಗತಿಯನ್ನು ಹೊಂದುವನು.

ಗಂಗೆಯ ಸ್ಮರಣೆಮಾಡುವ ಮಾತ್ರದಿಂದ ಪಾಪಸಮೂಹಗಳಿಗಾಶ್ರಯವಾದ ಈ ದೇಹವು ವಜ್ರಾಯುಧದಿಂದ ಹೊಡೆಯಲ್ಪಟ್ಟ ಪರ್ವತದಂತೆ ಸಾವಿರಾರು ಚೂರುಗಳಾಗುತ್ತದೆ.

ಸಂಚಾರ ಮಾಡುವಾಗ, ನಿಂತಿದ್ದಾಗ, ಮಲಗಿದ್ದಾಗ, ಧ್ಯಾನಿಸುವಾಗ ಎಚ್ಚರದಿಂದಿದ್ದಾಗ, ಊಟಮಾಡುವಾಗ, ನಗುವಾಗ ಅಥವಾ ಅಳುವಾಗ ಯಾವಾಗಲೂ ಗಂಗೆಯನ್ನು ಸ್ಮರಿಸುತ್ತಿರುವ ಮನುಷ್ಯನು ಈ ಸಂಸಾರ ಬಂಧನದಿಂದ ಬಿಡುಗಡೆಯಾಗುವನು.

ಸಾವಿರ ಗಾವುದ ದೂರದಲ್ಲಿರುವವರೂ ಸಹ "ಗಂಗಾ! ಗಂಗಾ!" ಎಂದು ಕೂಗುತ್ತಾ ಭಕ್ತಿಯಿಂದ ಗಂಗೆಯನ್ನು ಸ್ಮರಿಸಿದರೆ ಅವರೂ ಸಹ ಪಾಪಗಳನ್ನು ಕಳೆದುಕೊಳ್ಳುವರು.

ತೇಷ್ಯೈಶೇಷೈರ್ಮಹಾಪಾಪೈರ್ಮುಚ್ಯಂತೇ ನಾತ್ರ ಸಂಶಯಃ ।
ಭವನಾನಿ ವಿಚಿತ್ರಾಣಿ ವಿಚಿತ್ರಾಭರಣಾಃ ಸ್ತ್ರಿಯಃ । ॥ ೧೯ ॥

ಆರೋಗ್ಯಂ ವಿತ್ತಸಂಪತ್ತಿರ್ಗಂಗಾಸ್ಮರಣಜಂ ಫಲಂ ।
ಮನಸಾ ಸಂಸ್ಮರೇದ್ಯಸ್ತು ಗಂಗಾಂ ದೂರಸ್ಥಿತೋ ನರಃ ॥ ೨೦ ॥

ಚಾಂದ್ರಾಯಣಸಹಸ್ರಸ್ಯ ಸ ಫಲಂ ಲಭತೇ ಧ್ರುವಂ ।
ಗಂಗಾ ಗಂಗಾ ಜಪನ್ನಾಮ ಯೋಜನಾನಾಂ ಶತೇ ಸ್ಥಿತಃ ॥ ೨೧ ॥

ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಚ ಗಚ್ಛತಿ ।
ಕೀರ್ತನಾನ್ಮುಚ್ಯತೇ ಪಾಪಾದ್ದರ್ಶನಾನ್ಮಂಗಲಂ ಲಭೇತ್ ॥ ೨೨ ॥

ಅವಗಾಹ್ಯ ತಥಾ ಪೀತ್ವಾ ಪುನಾತ್ಯಾಸಪ್ತಮಂ ಕುಲಂ ।
ಸಪ್ತಾವರಾನ್ ಪರಾನ್ ಸಪ್ತ ಸಪ್ತಾಥ ಪರತಃ ಪರಾನ್ ॥ ೨೩ ॥

---

ಯಾರು ಗಂಗೆಯನ್ನು ಸ್ಮರಿಸುವರೋ ಯಾರು ಗಂಗೆಯಲ್ಲಿ ಪರಮ ಭಕ್ತರೋ ಅವರು ಸಮಸ್ತ ಮಹಾಪಾತಕಗಳನ್ನೂ ಕಳೆದುಕೊಳ್ಳುವರು. ಈ ವಿಷಯದಲ್ಲಿ ಸಂದೇಹವಿಲ್ಲ.

ವಿಚಿತ್ರ ಭವನಗಳು, ನಾನಾವಿಧಾಭರಣಗಳನ್ನು ಧರಿಸಿರುವ ಸ್ತ್ರೀಯರು, ಆರೋಗ್ಯ, ಧನಸಂಪತ್ತು ಇವೆಲ್ಲವೂ ಗಂಗೆಯ ಸ್ಮರಣೆಯಿಂದುಂಟಾಗುವ ಫಲವು.

ದೂರದಲ್ಲಿದ್ದ ಮನುಷ್ಯನು ಮನಸ್ಸಿನಲ್ಲಿ ಗಂಗೆಯನ್ನು ಸ್ಮರಿಸಿದರೆ ಸಾವಿರ ಚಾಂದ್ರಾಯಣ ವ್ರತಗಳ ಫಲವು ಬರುತ್ತದೆ.

ನೂರುಗಾವುದ ದೂರದಲ್ಲಿ ನಿಂತು "ಗಂಗಾ! ಗಂಗಾ!" ಎಂಬ ನಾಮವನ್ನು ಜಪಿಸುವವನು ಸಕಲ ಪಾಪಗಳಿಂದಲೂ ಮುಕ್ತನಾಗಿ ವಿಷ್ಣು ಲೋಕಕ್ಕೆ ಹೋಗುವನು. ನಾಮಸಂಕೀರ್ತನೆಯಿಂದ ಪಾಪಪರಿಹಾರವೂ, ದರ್ಶನದಿಂದ ಮಂಗಳವೂ ಲಭಿಸುತ್ತದೆ.

ಗಂಗಾ ತಾರಯತೇ ಪುಂಸಾಂ ಪ್ರಸಂಗೇನಾಪಿ ಕೀರ್ತಿತಾ |
ಅಶ್ರದ್ಧಯಾಪಿ ಗಂಗಾಯಾ ಯಸ್ತು ನಾಮಾನುಕೀರ್ತನಂ || ೨೪ ||

ಕರೋತಿ ಪುಣ್ಯವಾಹಿನ್ಯಾಃ ಸೋಽಪಿ ಸ್ವರ್ಗಸ್ಯ ಭಾಜನಂ |
ಸರ್ವಾವಸ್ಥಾಂ ಗತೋ ವಾಪಿ ಸರ್ವಧರ್ಮವಿವರ್ಜಿತಃ || ೨೫ ||

ಗಂಗಾಯಾಃ ಕೀರ್ತನೇನೈವ ಶುಭಾಂ ಗತಿಮವಾಪ್ನುಯಾತ್ |
ಬ್ರಹ್ಮಹಾ ಗುರುಹಾ ಗೋಘ್ನಃ ಸ್ಪೃಷ್ಟೋ ವಾ ಸರ್ವಪಾತಕೈಃ || ೨೬ ||

ಗಂಗಾತೋಯಂ ನರಃ ಸ್ಪೃಷ್ಟ್ವಾ ಮುಚ್ಯತೇ ಸರ್ವಪಾತಕೈಃ |
ಕದಾ ದ್ರಕ್ಷ್ಯಾಮಿ ತಾಂ ಗಂಗಾಂ ಕದಾ ಸ್ನಾನಂ ಲಭೇ ಹ್ಯಹಂ || ೨೭ ||

ಇತಿ ಪುಂಸಾಭಿಲಷಿತಾ ಕುಲಾನಾಂ ತಾರಯೇಚ್ಛತಂ |
ಅಥ ಸ್ನಾನಫಲಂ ದೇವಿ ಗಂಗಾಯಾಃ ಪ್ರವದಾಮಿ ತೇ || ೨೮ ||

---

೨೩-೨೮. ಗಂಗೆಯಲ್ಲಿ ಸ್ನಾನಮಾಡಿ ಅದರ ಜಲವನ್ನು ಪಾನಮಾಡಿದರೆ ಏಳುಕುಲಗಳವರೆಗಿನ ಪಿತೃಗಳು ಪವಿತ್ರರಾಗುವರು.

ಗಂಗೆಯನ್ನು ಪ್ರಾಸಂಗಿಕವಾಗಿ ಕೀರ್ತನೆ ಮಾಡಿದರೂ ಅದು ಹಿಂದಿನ ಏಳು, ಮುಂದಿನ ಏಳು, ಅದರ ಮುಂದಿನ ಏಳು ಪಿತೃಕುಲಗಳನ್ನು ಸಂಸಾರ ಸಾಗರದಿಂದ ದಾಟಿಸುತ್ತದೆ.

ಪುಣ್ಯವಾಹಿನಿಯಾದ ಗಂಗೆಯ ನಾಮಸಂಕೀರ್ತನೆಯನ್ನು ಅಶ್ರದ್ಧೆಯಿಂದ ಮಾಡುವವನೂ ಸಹ ಸ್ವರ್ಗಭಾಗಿಯಾಗುವನು.

ಯಾವ ಅವಸ್ಥೆಯಲ್ಲಿದ್ದರೂ ಸಕಲ ಧರ್ಮಗಳನ್ನು ಬಿಟ್ಟಿದ್ದರೂ ಸಹ ಗಂಗೆಯ ನಾಮಸಂಕೀರ್ತನೆಯಿಂದಲೇ ಸದ್ಗತಿಯನ್ನು ಹೊಂದುವನು.

ಬ್ರಹ್ಮಹತ್ಯೆ, ಗುರುಹತ್ಯೆ, ಗೋಹತ್ಯೆ ಇವನ್ನು ಮಾಡಿದವನಾದರೂ, ಹೆಚ್ಚೇನು! ಸಕಲ ಪಾಪಭಾಗಿಯಾಗಿದ್ದರೂ ಸಹ ಅಂತಹವನು ಗಂಗೋದಕವನ್ನು ಮುಟ್ಟಿದರೆ ಸಕಲಪಾಪಗಳಿಂದಲೂ ಮುಕ್ತನಾಗುವನು. ಅಂತಹ ಗಂಗೆ

ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ।
ಸ್ನಾತಸ್ಯ ಗಂಗಾಸಲಿಲೇ ಸದ್ಯಃ ಪಾಪಂ ಪ್ರಣಶ್ಯತಿ ॥ ೨೯ ॥

ಅಪೂರ್ವಪುಣ್ಯಪ್ರಾಪ್ತಿಶ್ಚ ಸದ್ಯೋ ಮೋಹಿನಿ ಜಾಯತೇ ।
ಸ್ನಾತಾನಾಂ ಶುಚಿಭಿಸ್ತೋಯೈರ್ಗಾಂಗೇಯೈಃ ಪ್ರಯತಾತ್ಮನಾಂ ॥ ೩೦ ॥

ವ್ಯುಷ್ಟಿರ್ಭವತಿ ಯಾ ಪುಂಸಾಂ ನ ಸಾ ಕ್ರತುಶತೈರಪಿ ।
ಅಪಹತ್ಯ ತಮಸ್ತೀವ್ರಂ ಯಥಾ ಭಾತ್ಯುದಯೇ ರವಿಃ ॥ ೩೧ ॥

ತಥಾಪಹತ್ಯ ಪಾಪ್ಮಾನಂ ಭಾತಿ ಗಂಗಾಜಲೋಕ್ಷಿತಃ ।
ವಿಕೇನ್ಯೈವಾಪಿ ವಿಧಿನಾ ಸ್ನಾನೇನ ನೃಪಸುಂದರಿ ॥ ೩೨ ॥

---

ಯನ್ನು ಯಾವಾಗ ನೋಡೇನು? ಅದರಲ್ಲಿ ಯಾವಾಗ ಸ್ನಾನಮಾಡೇನು? ಎಂಬುದಾಗಿ ಹಂಬಲಿಸುತ್ತಿರುವ ಮನುಷ್ಯರ ನೂರುಕುಲಗಳನ್ನು ಗಂಗೆಯು ಉದ್ಧರಿಸುವುದು.

ದೇವಿಯೇ! ಈಗ ಗಂಗಾಸ್ನಾನಫಲವನ್ನು ನಿನಗೆ ವಿವರಿಸಿ ಹೇಳುವೆನು.

೨೯. ಗಂಗಾಸ್ನಾನ ಫಲವನ್ನು ಕೇಳಿದರೆ ಸಕಲಪಾಪ ಪರಿಹಾರವಾಗುವುದು. ಸಂದೇಹವಿಲ್ಲ. ಗಂಗೋದಕದಲ್ಲಿ ಸ್ನಾನಮಾಡಿದವನ ಪಾಪವು ತಕ್ಷಣದಲ್ಲಿ ನಾಶವಾಗುವುದು.

೩೦-೩೩. ಅಷ್ಟೇ ಅಲ್ಲ; ಮೋಹಿನಿಯೇ! ತಕ್ಷಣದಲ್ಲಿಯೇ ಅವನಿಗೆ ಅಪೂರ್ವಪುಣ್ಯಲಾಭವೂ ಆಗುವುದು. ಪರಿಶುದ್ಧವಾದ ಗಂಗಾಜಲದಲ್ಲಿ ಸ್ನಾನ ಮಾಡಿದ, ಜಿತೇಂದ್ರಿಯರಾದ ಮನುಜರಿಗೆ ಲಭಿಸುವಂತಹ ಸಮೃದ್ಧಿಯು ನೂರು ಕ್ರತುಗಳನ್ನಾಚರಿಸಿದರೂ ದೊರೆಯಲಾರದು.

ಸೂರ್ಯನು ಉದಯಿಸಿದಮೇಲೆ ಕಗ್ಗತ್ತಲೆಯನ್ನು ಹೋಗಲಾಡಿಸಿ ಪ್ರಕಾಶಿಸುವಂತೆ ಗಂಗಾಜಲದಲ್ಲಿ ಸ್ನಾನಮಾಡಿದವನು ಪಾಪಗಳನ್ನು ನಾಶಪಡಿಸಿ ವಿರಾಜಿಸುವನು.

ಅಶ್ವಮೇಧಫಲಂ ಮರ್ತ್ಯೋ ಗಂಗಾಯಾಂ ಲಭತೇ ಧ್ರುವಂ ।
ಅನೇಕಜನ್ಮಸಂಭೂತಂ ಪುಂಸಃ ಪಾಪಂ ಪ್ರಣಶ್ಯತಿ ॥ ೩೩ ॥

ಸ್ನಾನಮಾತ್ರೇಣ ಗಂಗಾಯಾಃ ಸದ್ಯಃ ಸ್ಯಾತ್ ಪುಣ್ಯಭಾಜನಂ ।
ಅನ್ಯಸ್ಥಾನಕೃತಂ ಪಾಪಂ ಗಂಗಾತೀರೇ ವಿನಶ್ಯತಿ ॥ ೩೪ ॥

ಗಂಗಾತೀರೇ ಕೃತಂ ಪಾಪಂ ಗಂಗಾಸ್ನಾನೇನ ನಶ್ಯತಿ ।
ರಾತ್ರೌ ದಿವಾ ಚ ಸಂಧ್ಯಾಯಾಂ ಗಂಗಾಯಾಂ ತು ಪ್ರಯತ್ನತಃ ॥ ೩೫ ॥

ಸ್ನಾತ್ವಾಶ್ವಮೇಧಜಂ ಪುಣ್ಯಂ ಗೃಹೇಪ್ಯುದ್ಧೃತತಜ್ಜಲೈಃ ।
ಸರ್ವತೀರ್ಥೇಷು ಯತ್ಪುಣ್ಯಂ ಸರ್ವೇಷ್ವಾಯತನೇಷು ಚ ॥ ೩೬ ॥

ತತ್ಫಲಂ ಲಭತೇ ಮರ್ತ್ಯೋ ಗಂಗಾಸ್ನಾನಾನ್ನ ಸಂಶಯಃ ।
ಮಹಾಪಾತಕಸಂಯುಕ್ತೋ ಯುಕ್ತೋ ವಾ ಸರ್ವಪಾತಕೈಃ ॥ ೩೭ ॥

---

ರಾಜಪತ್ನಿಯೇ! ವಿಧಾನೋಕ್ತಪ್ರಕಾರವಾಗಿ ಒಂದಾವರ್ತಿ ಗಂಗೆಯಲ್ಲಿ ಮಾಡಿದ ಸ್ನಾನದಿಂದಲೇ ಮನುಷ್ಯನು ಖಂಡಿತವಾಗಿಯೂ ಅಶ್ವಮೇಧಯಜ್ಞದ ಫಲವನ್ನು ಹೊಂದುವನು. ಗಂಗಾಸ್ನಾನದಿಂದ ಅನೇಕಜನ್ಮಗಳಲ್ಲಿ ಸಂಪಾದಿಸಿದ ಪಾಪವು ಹೋಗುತ್ತದೆ.

೩೪. ಗಂಗೆಯಲ್ಲಿ ಸ್ನಾನಮಾಡಿದಕೂಡಲೇ ಪುಣ್ಯವಂತನಾಗುವನು. ಬೇರೆಸ್ಥಳದಲ್ಲಿ ಮಾಡಿದ ಪಾಪವು ಗಂಗೆಯತೀರದಲ್ಲಿ ನಾಶವಾಗುತ್ತದೆ.

೩೫-೩೬. ಗಂಗಾತೀರದಲ್ಲಿ ಗಳಿಸಿದ ಪಾಪವು ಗಂಗಾಸ್ನಾನದಿಂದ ಹೋಗುತ್ತದೆ. ರಾತ್ರಿ, ಹಗಲು, ಸಂಧ್ಯಾಕಾಲಗಳಲ್ಲಿ ಪ್ರಯತ್ನಪೂರ್ವಕವಾಗಿ ಗಂಗೆಯಲ್ಲಿ ಸ್ನಾನಮಾಡಿದರೆ ಅಥವಾ ಗಂಗೆಯಿಂದ ನೀರನ್ನು ತಂದು ಮನೆಯಲ್ಲಿ ಸ್ನಾನಮಾಡಿದರೂ ಸಹ ಅವನು ಅಶ್ವಮೇಧಯಜ್ಞದ ಪುಣ್ಯವನ್ನು ಹೊಂದುವನು.

ಸಕಲತೀರ್ಥಗಳಲ್ಲಿ ಮತ್ತು ಇಷ್ಟವಾದ ಸರ್ವಾಯತನಗಳಲ್ಲಿಯೂ ಸಹ ಸ್ನಾನಾದಿಗಳನ್ನುಮಾಡುವುದರಿಂದ ಮನುಷ್ಯನು ಗಳಿಸುವ ಫಲವನ್ನು ಗಂಗಾಸ್ನಾನದಿಂದಲೇ ಸಂಪಾದಿಸುವನು ಸಂದೇಹವಿಲ್ಲ.

ಗಂಗಾಸ್ನಾನೇನ ವಿಧಿವನ್ಮುಚ್ಯತೇ ಸರ್ವಪಾತಕೈಃ |
ಗಂಗಾಸ್ನಾನಾತ್ಪರಂ ಸ್ನಾನಂ ನ ಭೂತಂ ನ ಭವಿಷ್ಯತಿ || ೩೮ ||

ವಿಶೇಷತಃ ಕಲಿಯುಗೇ ಪಾಪಂ ಹರತಿ ಜಾಹ್ನವೀ |
ನಿಹತ್ಯ ಕಾಮಜಾನ್ ದೋಷಾನ್ ಕಾಯವಾಕ್ಚಿತ್ತಸಂಭವಾನ್ || ೩೯ ||

ಗಂಗಾಸ್ನಾನೇನ ಭಕ್ತ್ಯಾ ತು ಮೋದತೇ ದಿವಿ ದೇವವತ್ |
ವರ್ಷಂ ಸ್ನಾತಿ ಚ ಗಂಗಾಯಾಂ ಯೋ ನರೋ ಭಕ್ತಿಸಂಯುತಃ || ೪೦ ||

ತಸ್ಯ ಸ್ಯಾದ್ವೈಷ್ಣವೇ ಲೋಕೇ ಸ್ಥಿತಿಃ ಕಲ್ಪಂ ನ ಸಂಶಯಃ |
ಅಪ್ಯೃತ್ಯ ಸ್ನಾತಿ ಗಂಗಾಯಾಂ ಯೋ ನರೋ ನಿತ್ಯಮೇವ ಚ || ೪೧ ||

ಸಮಸ್ತಪಾಪನಿರ್ಮುಕ್ತಃ ಸಮಸ್ತಕುಲಸಂಯುತಃ |
ಸಮಸ್ತಭೋಗಸಂಯುಕ್ತೋ ವಿಷ್ಣುಲೋಕೇ ಮಹೀಯತೇ || ೪೨ ||

---

ಮಹಾಪಾತಕ ಅಥವಾ ಸರ್ವಪಾತಕಗಳನ್ನು ಮಾಡಿದವನಾದರೂ ವಿಧಿವತ್ತಾಗಿ ಗಂಗಾಸ್ನಾನವನ್ನು ಮಾಡಿದರೆ ಸಕಲಪಾಪಗಳಿಂದಲೂ ಮುಕ್ತನಾಗುವನು. ಭೂತಭವಿಷ್ಯದ್ವರ್ತಮಾನ ಕಾಲಗಳಲ್ಲಿ ಗಂಗಾಸ್ನಾನಕ್ಕಿಂತ ಮಿಗಿಲಾದುದಾವುದೂ ಇಲ್ಲ.

೩೯. ಗಂಗೆಯು ಕಲಿಯುಗದಲ್ಲಿ ವಿಶೇಷವಾಗಿ ಕಾಮಜನ್ಯವಾದ, ಮನೋವಾಕ್ಕಾಯಗಳಿಂದುಂಟಾದ ದೋಷಗಳನ್ನು ನೀಗಿ ಪಾಪವನ್ನು ಪರಿಹರಿಸುತ್ತದೆ.

೪೦-೪೪. ಭಕ್ತಿಪೂರ್ವಕವಾಗಿ ಗಂಗಾಸ್ನಾನ ಮಾಡುವುದರಿಂದ ದೇವಲೋಕದಲ್ಲಿ ದೇವತೆಗಳಂತೆ ಸುಖಪಡುತ್ತಾನೆ.

ಯಾವ ಮನುಷ್ಯನು ಭಕ್ತಿಯಿಂದ ಗಂಗೆಯಲ್ಲಿ ಒಂದುವರ್ಷಕಾಲ ಸ್ನಾನ ಮಾಡುವನೋ ಅವನಿಗೆ ಕಲ್ಪಾಂತವಾಗಿ ವಿಷ್ಣುಲೋಕವಾಸವು ಲಭಿಸುತ್ತದೆ. ಸಂದೇಹವಿಲ್ಲ.

ಪರಾರ್ಧದ್ವಿತಯಂ ಯಾವನ್ನಾತ್ರ ಕಾರ್ಯಾ ವಿಚಾರಣಾ |
ಗಂಗಾಯಾಂ ಸ್ನಾತಿ ಯೋ ಮರ್ತ್ಯೋ ನೈರಂತರ್ಯೇಣ ನಿತ್ಯದಾ ||೪೩||

ಜೀವನ್ಮುಕ್ತಃ ಸ ಚಾತ್ರೈವ ಮೃತೋ ವಿಷ್ಣುಪದಂ ವ್ರಜೇತ್ |
ಪ್ರಾತಃಸ್ನಾನಾದ್ದಶಗುಣಂ ಪುಣ್ಯಂ ಮಧ್ಯಂ ದಿನಂ ಸ್ಮೃತಂ || ೪೪ ||

ಸಾಯಂಕಾಲೇ ಶತಗುಣಮನಂತಂ ಶಿವಸನ್ನಿಧೌ |
ಕಪಿಲಾಕೋಟಿದಾನಾದ್ಧಿ ಗಂಗಾಸ್ನಾನಂ ವಿಶಿಷ್ಯತೇ || ೪೫ ||

ಕುರುಕ್ಷೇತ್ರಸಮಾ ಗಂಗಾ ಯತ್ರ ತತ್ರಾವಗಾಹಿತಾ |
ಹರಿದ್ವಾರೇ ಪ್ರಯಾಗೇ ಚ ಸಿಂಧುಸಂಗೇ ಫಲಾಧಿಕಾ || ೪೬ ||

---

ಸಾಯುವವರೆಗೂ ಪ್ರತಿದಿನವೂ ಗಂಗೆಯಲ್ಲಿ ಸ್ನಾನಮಾಡುವವನು ಸಕಲ ಪಾಪಗಳನ್ನೂ ಬಿಡಿಸಿಕೊಂಡು ಸಮಸ್ತಕುಲಸಹಿತನಾಗಿ ಅಶೇಷಭೋಗಗಳನ್ನೂ ಅನುಭವಿಸುತ್ತಾ, ವಿಷ್ಣುಲೋಕದಲ್ಲಿ ಎರಡು ಪರಾರ್ಧಪರ್ಯಂತವಾಗಿ ಸತ್ಕರಿಸಲ್ಪಡುವನು. ಈ ವಿಷಯದಲ್ಲಿ ಸಂಶಯಪಡಬಾರದು.

ನಿತ್ಯವೂ ಬಿಡದೆ ಗಂಗೆಯಲ್ಲಿ ಸ್ನಾನಮಾಡುವ ಮನುಷ್ಯನು ಇಲ್ಲಿ ಜೀವನ್ಮುಕ್ತನಾಗಿದ್ದು ಮರಣಾನಂತರ ವೈಕುಂಠಕ್ಕೆ ಹೋಗುವನು. ಪ್ರಾತಃಸ್ನಾನಕ್ಕಿಂತಲೂ ಮಧ್ಯಾಹ್ನಸ್ನಾನವು ಹತ್ತರಷ್ಟು ಹೆಚ್ಚು ಪುಣ್ಯವನ್ನು ಕೊಡುತ್ತದೆಂದು ವಿಹಿತವಾಗಿದೆ.

೪೫. ಸಾಯಂಕಾಲಸ್ನಾನದಿಂದ ನೂರರಷ್ಟು ಹೆಚ್ಚು ಪುಣ್ಯವೂ, ಶಿವಸನ್ನಿಧಿಯಲ್ಲಿ ಮಾಡಿದ ಸ್ನಾನದಿಂದ ಅನಂತಪುಣ್ಯವೂ ಲಭಿಸುತ್ತದೆ. ಕೋಟಿ ಕಪಿಲಗೋವುಗಳನ್ನು ದಾನಮಾಡುವುದಕ್ಕಿಂತಲೂ ಗಂಗಾಸ್ನಾನವು ಉತ್ತಮವು.

೪೬. ಗಂಗೆಯಲ್ಲಿ ಯಾವಪ್ರದೇಶದಲ್ಲಿ ಸ್ನಾನಮಾಡಿದರೂ ಅದು ಕುರುಕ್ಷೇತ್ರಕ್ಕೆ ಸಮಾನವಾದ ಫಲಪ್ರದವಾಗುವುದು. ಅದರಲ್ಲಿಯೂ ಹರಿದ್ವಾರ, ಪ್ರಯಾಗ, ಸಮುದ್ರಸಂಗಮಸ್ಥಾನಗಳಲ್ಲಿ ಸ್ನಾನಮಾಡಿದರೆ ಅಧಿಕಫಲಪ್ರದವಾಗುವುದು.

ಯೇ ಮದೀಯಾಂಶುಸಂತಪ್ತೇ ಜಲೇ ತೇ ಸ್ನಾಂತಿ ಜಾಹ್ನವಿ |
ತೇ ಭಿತ್ವಾ ಮಂಡಲಂ ಯಾಂತಿ ಮೋಕ್ಷಂ ಚೇತಿ ರವೇರ್ವಚಃ || ೪೭ ||

ಯೋ ಗೃಹೇ ಸ್ವೇ ಸ್ಥಿತೇಽಪಿ ತ್ವಾಂ ಸ್ನಾನೇ ಸಂಕೀರ್ತಯಿಷ್ಯತಿ |
ಸೋಽಪಿ ಯಾಸ್ಯತಿ ನಾಕಂ ವೈ ಇತ್ಯಾಹ ವರುಣಶ್ಚ ತಾಂ || ೪೮ ||

ಇತಿ ಶ್ರೀನಾರದೀಯಮಹಾಪುರಾಣೋತ್ತರಭಾಗೇ ಮೋಹಿನೀ
ಚರಿತೇ ಗಂಗಾಸ್ನಾನಮಾಹಾತ್ಮ್ಯಂ ನಾಮ
ಏಕೋನಚತ್ವಾರಿಂಶೋಽಧ್ಯಾಯಃ

---

೪೭. ನನ್ನ ಕಿರಣಗಳಿಂದ ತಪಿಸಲ್ಪಟ್ಟ ಗಂಗಾಜಲದಲ್ಲಿ ಸ್ನಾನಮಾಡು ವವರು ನನ್ನ ಮಂಡಲವನ್ನು ಭೇದಿಸಿಕೊಂಡು ಮೋಕ್ಷಕ್ಕೆ ಹೋಗುವರೆಂದು ಸೂರ್ಯನು ಹೇಳಿರುವನು

೪೮. ಗಂಗೆಯನ್ನು ಕುರಿತು ವರುಣನು " ತನ್ನ ಮನೆಯಲ್ಲಿದ್ದರೂ ಸ್ನಾನಕಾಲದಲ್ಲಿ ನಿನ್ನನ್ನು ಕೀರ್ತನೆಮಾಡುವವನು ಸ್ವರ್ಗಕ್ಕೆ ಹೋಗುವನು " ಎಂಬುದಾಗಿ ಹೇಳಿರುವನು.

ಇಂತು ಶ್ರೀನಾರದೀಯಪುರಾಣೋತ್ತರಭಾಗದಲ್ಲಿ ಮೋಹಿನೀ ಚರಿತ್ರೆಯೊಳು
ಗಂಗಾಸ್ನಾನಮಾಹಾತ್ಮ್ಯೆಯೆಂಬ ಮೂವತ್ತೊಂಬತ್ತನೆಯ
ಅಧ್ಯಾಯವು ಮುಗಿದುದು.

## ವಿಷಯಸಂಗ್ರಹ

ಗಂಗೆಯದರ್ಶನಫಲ ಮತ್ತು ಸ್ಮರಣೆಯ ಫಲಗಳನ್ನು ಹೇಳಿ ಸ್ನಾನಫ ಲವು ವಿಸ್ತಾರವಾಗಿ ಉಕ್ತವಾಗಿದೆ.

---

# ಚತ್ವಾರಿಂಶೋಽಧ್ಯಾಯಃ

## ವಸುರುವಾಚ

ಅಥ ಕಾಲವಿಶೇಷೇ ತು ಗಂಗಾಸ್ನಾನಸ್ಯ ತೇ ಫಲಂ ।
ಕೀರ್ತಯಿಷ್ಯಾಮಿ ವಾಮೋರು ಸಾವಧಾನಾ ನಿಶಾಮಯ ॥ ೧ ॥

ನೈರಂತರ್ಯೇಣ ಗಂಗಾಯಾಂ ಮಾಘೇ ಸ್ನಾತಿ ಚ ಯೋ ನರಃ ।
ಸ ಶಕ್ರಲೋಕೇ ಸುಚಿರಂ ಕಾಲಂ ತಿಷ್ಠೇತ್ಸಗೋತ್ರಜಃ ॥ ೨ ॥

ತತೋ ಬ್ರಹ್ಮಪುರಂ ಯಾತಿ ಕಲ್ಪಕೋಟಿಶತಾಯುತೈಃ ।
ನೈರಂತರ್ಯೇಣ ವಿಧಿವದ್ಗಂಗಾಯಾಂ ಸ್ನಾತಿ ಯೋ ನರಃ ॥ ೩ ॥

ಷಣ್ಮಾಸಮೇಕಕಾಲಾಶೀ ಸಕೃದೇವೋತ್ತರಾಯಣೇ ।
ಸೋಽಪಿ ವಿಷ್ಣುಪದಂ ಯಾತಿ ಕುಲಾನಾಂ ಶತಮುದ್ಧರನ್ ॥ ೪ ॥

---

## ನಲವತ್ತನೆಯ ಅಧ್ಯಾಯ

೧. ವಸುವು ಹೇಳಿದನು :—ಸುಂದರಾಂಗಿಯೇ! ವಿಶೇಷದಿವಸದಲ್ಲಿ ಮಾಡುವ ಗಂಗಾಸ್ನಾನದ ಫಲವನ್ನು ನಿನಗೆ ಹೇಳುವೆನು. ಸಾವಧಾನವಾಗಿ ಕೇಳು.

೨. ಮಾಘಮಾಸದಲ್ಲಿ ನಿರಂತರವೂ ಗಂಗೆಯಲ್ಲಿ ಸ್ನಾನಮಾಡುವ ಮನುಷ್ಯನು ತನ್ನವಂಶದಲ್ಲಿ ಹುಟ್ಟಿದವರೊಡನೆ ಬಹುಕಾಲ ಇಂದ್ರಲೋಕದಲ್ಲಿ ವಾಸಮಾಡುವನು.

೩. ವಿಧಾನಾನುಸಾರವಾಗಿ ಗಂಗೆಯಲ್ಲಿ ನಿರಂತರ ಸ್ನಾನಮಾಡುವ ಮನುಷ್ಯನು ನೂರುಕೋಟಿ ಅಯುತಕಲ್ಪಗಳ ಪರ್ಯಂತರವಾಗಿ ಬ್ರಹ್ಮಲೋಕದಲ್ಲಿ ಭೋಗಿಸುವನು.

೪. ಉತ್ತರಾಯಣದ ಆರುತಿಂಗಳು ಒಪ್ಪತ್ತೂಟಮಾಡುತ್ತಾ ಒಂದಾವರ್ತಿಯಾದರೂ ಗಂಗೆಯಲ್ಲಿ ಸ್ನಾನಮಾಡುವವನೂ ಸಹ ನೂರುಕುಲಗಳನ್ನುದ್ಧರಿಸಿ ವೈಕುಂಠಕ್ಕೆ ಹೋಗುವನು.

ಸಂಕ್ರಾಂತಿಷು ತು ಸರ್ವಾಸು ಸ್ನಾತ್ವಾ ಗಂಗಾಜಲೇ ನರಃ ।
ವಿಮಾನೇನಾರ್ಕವರ್ಣೇನ ಸ ವ್ರಜೇದ್ವಿಷ್ಣುಮಂದಿರಂ ॥ ೫ ॥
ವಿಷುವೇಯನಸಂಕ್ರಾಂತೌ ವಿಶೇಷಾತ್ಫಲಮೀರಿತಂ ।
ತಪಃಸಮಂ ಕಾರ್ತಿಕೇಽಪಿ ಗಂಗಾಸ್ನಾನೇ ಫಲಂ ವಿದುಃ ॥ ೬ ॥
ಮೇಷಪ್ರವೇಶಾರ್ಕಕಾಲೇ ಕಾರ್ತಿಕ್ಯಾಂ ವಾಪಿ ಮೋಹಿನಿ ।
ಮಾಘಸ್ನಾನಾಧಿಕಂ ಪ್ರಾಹುಃ ಕಮಲಾಸನಪೂರ್ವಕಾಃ ॥ ೭ ॥
ಸಂವತ್ಸರಸ್ನಾನಜನ್ಯಂ ಫಲಮಕ್ಷಯಕೇ ತಿಥೌ ।
ಕಾರ್ತಿಕೇ ವಾಪಿ ವೈಶಾಖೇ ಇತಿ ಪ್ರಾಹ ಪಿತಾ ತವ ॥ ೮ ॥
ಮನ್ವಾದೌ ಚ ಯುಗಾದೌ ಯತ್ಪ್ರೋಕ್ತಂ ಗಂಗಾಜಲೇ ಫಲಂ ।
ಸ್ನಾನೇನ ಯಾಜ್ಯವನಿತೇ ತ್ರಿಮಾಸ್ಯಾಪಿ ಚ ತತ್ಫಲಂ ॥ ೯ ॥

೫. ಸಕಲ ಸಂಕ್ರಮಣಗಳಲ್ಲಿಯೂ ಗಂಗಾಜಲದಲ್ಲಿ ಸ್ನಾನಮಾಡುವ ಮನುಷ್ಯನು ಸ್ಫಟಿಕಮಣಿ ಬಣ್ಣದ ವಿಮಾನದಲ್ಲಿ ಕುಳಿತು ಹರಿಮಂದಿರಕ್ಕೆ ಹೋಗುವನು.

೬. ತುಲಾದಿ ಸಂಕ್ರಮಣ ಮತ್ತು ಕರ್ಕಾಟಕ ಸಂಕ್ರಮಣಗಳ ಕಾಲಗಳಲ್ಲಿ ಸ್ನಾನಮಾಡಿದರೆ ವಿಶೇಷಫಲವು ಉಕ್ತವಾಗಿದೆ. ಕಾರ್ತಿಕಮಾಸದಲ್ಲಿ ಗಂಗಾಸ್ನಾನಮಾಡಿದರೆ ತಪಸ್ಸಿಗೆಸಮಾನವಾದ ಫಲವು ಬರುತ್ತದೆ.

೭. ಮೋಹಿನಿಯೇ! ಬ್ರಹ್ಮಾದಿಗಳು ಮೇಷಸಂಕ್ರಮಣ ಅಥವಾ ಕಾರ್ತಿಕಮಾಸದ ಪೂರ್ಣಿಮೆಯ ದಿನದಲ್ಲಿ ಗಂಗಾಸ್ನಾನವು ಮಾಘಸ್ನಾನಕ್ಕಿಂತಲೂ ಅಧಿಕಫಲದಾಯಕವೆಂದು ಹೇಳಿರುವರು.

೮. ಮೋಹಿನೀ! ಕಾರ್ತಿಕ ಅಥವಾ ವೈಶಾಖಮಾಸದ ಅಕ್ಷಯ್ಯತೃತೀಯಾದಿನದಲ್ಲಿ ಗಂಗಾಸ್ನಾನವು ಒಂದುವರ್ಷ ಸ್ನಾನಮಾಡಿದ ಫಲವನ್ನು ಕೊಡುತ್ತದೆಂದು ನಿನ್ನ ತಂದೆಯಾದ ಬ್ರಹ್ಮನು ಹೇಳಿರುವನು.

೯. ಉಕ್ತಮಾಘ ಮುಂತಾದ ಮೂರುತಿಂಗಳುಗಳಲ್ಲಿ ಮಾಡುವ ಸ್ನಾನದಿಂದ ಬರುವಷ್ಟುಫಲವು ಮನ್ವಾದಿ ಯುಗಾದಿಗಳಲ್ಲಿ ಗಂಗೆಯಲ್ಲಿ ಸ್ನಾನಮಾಡುವುದರಿಂದ ಬರುತ್ತದೆ.

ದ್ವಾದಶ್ಯಾಂ ಶ್ರವಣರ್ಕ್ಷೇ ಚ ಅಷ್ಟಮ್ಯಾಂ ಪುಷ್ಯಯೋಗತಃ ।
ಆದ್ರಾರ್ಯಾಂ ಚ ಚತುರ್ದಶ್ಯಾಂ ಗಂಗಾಸ್ನಾನಂ ಸುದುರ್ಲಭಂ ॥ ೧೦ ॥

ಪೂರ್ಣಿಮಾ ಮಾಧವೇ ಪುಣ್ಯಾ ತಥಾ ಕಾರ್ತಿಕಮಾಘಯೋಃ ।
ಅಮಾವಾಸ್ಯಾಸ್ತಥೈತೇಷಾಂ ಗಂಗಾಸ್ನಾನೇ ಸುದುರ್ಲಭಾಃ ॥ ೧೧ ॥

ಕೃಷ್ಣಾಷ್ಟಮ್ಯಾಂ ಸಹಸ್ರಂ ತು ಶತಂ ಸ್ಯಾತ್ ಸರ್ವಪರ್ವಸು ।
ಅಮಾಯಾಂ ಚ ತಥಾಷ್ಟಮ್ಯಾಂ ಮಾಘಾಸಿತದಲೇ ಸತಿ ॥ ೧೨ ॥

ಅರ್ಧೋದಯಂ ತದಾ ಸರ್ವ ಕಿಂಚಿನ್ನ್ಯೂನಂ ಮಹೋದಯಃ ।
ಮಹೋದಯೇ ಶತಗುಣಂ ಲಕ್ಷಮರ್ಧೋದಯೇ ಸ್ಮೃತಂ ॥ ೧೩ ॥

---

೧೦. ದ್ವಾದಶೀ, ಶ್ರವಣನಕ್ಷತ್ರ, ಪುಷ್ಯಯುಕ್ತವಾದ ಅಷ್ಟಮೀ, ಆದ್ರಾರ್ಸಹಿತವಾದ ಚತುರ್ದಶೀ ಈ ವಿಶೇಷದಿನಗಳಲ್ಲಿ ಗಂಗಾಸ್ನಾನವು ಲಭಿಸುವುದು ಕಷ್ಟ.

೧೧. ವೈಶಾಖ, ಕಾರ್ತೀಕ, ಮಾಘಮಾಸಗಳ ಪೂರ್ಣಿಮಾ ತಿಥಿಯು. ಪುಣ್ಯಕರವಾದುದು. ಈ ಮೂರುತಿಂಗಳುಗಳ ಅಮಾವಾಸ್ಯೆಯೂ ಸಹ ಪುಣ್ಯಕರವಾದುದು. ಈ ತಿಥಿಗಳಲ್ಲಿ ಗಂಗಾಸ್ನಾನವು ಲಭಿಸುವುದು ಕಷ್ಟ

೧೨. ಕೃಷ್ಣಪಕ್ಷದ ಅಷ್ಟಮಿಯಲ್ಲಿ ಸಹಸ್ರಗುಣಿತಫಲವೂ, ಸಕಲ ಪರ್ವಗಳಲ್ಲಿಯೂ ಶತಗುಣಿತಫಲವೂ, ಅಮಾವಾಸ್ಯೆ, ಮಾಘ ಕೃಷ್ಣಾಷ್ಟಮಿಗಳಲ್ಲಿ ಮಹಾಫಲವೂ ಗಂಗಾಸ್ನಾನದಿಂದ ಲಭಿಸುವುದು.

೧೩. ಆ ಅಮಾವಾಸ್ಯೆಯು ಭಾನುವಾರ, ವ್ಯತೀಪಾತ, ಶ್ರವಣನಕ್ಷತ್ರಗಳು ಸಂಭವಿಸಿದರೆ ಅದು ಅರ್ಧೋದಯ ಪುಣ್ಯಕಾಲವೆನಿಸುವುದು. ಈ ನಾಲ್ಕರಲ್ಲ ಕಿಂಚಿನ್ನ್ಯೂನವಾದರೆ ಎಂದರೆ ಯಾವುದೊಂದಿಲ್ಲದಿದ್ದರೂ ಅದು ಮಹೋದಯವೆನಿಸುವುದು. ಮಹೋದಯ ಪರ್ವಕಾಲದಲ್ಲಿ ನೂರರಷ್ಟು ಫಲವೂ, ಅರ್ಧೋದಯ ಪರ್ವಕಾಲದಲ್ಲಿ ಲಕ್ಷದಷ್ಟು ಫಲವೂ ಸಹ ಗಂಗಾಸ್ನಾನದಿಂದ ಲಭಿಸುವುದು

ಸ್ನಾನಂ ಗಂಗಾಜಲೇ ದೇವಿ ಗ್ರಹಣೇ ಚಂದ್ರಸೂರ್ಯಯೋಃ ।
ಮಾಸತ್ರಯಸ್ನಾನಫಲಂ ಫಾಲ್ಗುನಾಷಾಢಮಾಸಯೋಃ ॥ ೧೪ ॥

ಜನ್ಮರ್ಕ್ಷೇ ತು ಕೃತೇ ಸ್ನಾನೇ ಗಂಗಾಯಾಂ ಭಕ್ತಿಭಾವತಃ ।
ಜನ್ಮಪ್ರಭೃತಿ ಪಾಪಂ ವೈ ಸಂಚಿತಂ ಹಿ ವಿನಶ್ಯತಿ ॥ ೧೫ ॥

ಚತುರ್ದಶ್ಯಾಂ ಮಾಘಕೃಷ್ಣೇ ವ್ಯತೀಪಾತಶ್ಚ ದುರ್ಲಭಃ ।
ಕೃಷ್ಣಾಷ್ಟಮ್ಯಾಂ ವಿಶೇಷೇಣ ವೈಧೃತಿರ್ಜಾಹ್ನವೀಜಲೇ ॥ ೧೬ ॥

ಮಾಘಂ ಸಕಲಮೇವಾಪಿ ನರೋ ಯೋ ವಿಧಿಪೂರ್ವಕಂ ।
ಅರುಣೋದಯಕೇ ಸ್ನಾಯೀ ಸ ತು ಜಾತಿಸ್ಮರೋ ಭವೇತ್ ॥ ೧೭ ॥

ಸರ್ವಶಾಸ್ತ್ರಾರ್ಥವಿಜ್ಞಾನೀ ನೀರೋಗಶ್ಚ ಭವೇದ್ಧ್ರುವಂ ।
ಸಂಕ್ರಾಂತ್ಯಾಂ ಪಕ್ಷಯೋರಂತೇ ಗ್ರಹಣೇ ಚಂದ್ರಸೂರ್ಯಯೋಃ॥ ೧೮॥

---

೧೪. ದೇವಿಯೇ! ಚಂದ್ರಸೂರ್ಯ ಗ್ರಹಣಕಾಲಗಳಲ್ಲಿಯೂ, ಫಾಲ್ಗುಣ ಆಷಾಢಮಾಸಗಳಲ್ಲಿಯೂ, ಗಂಗಾಜಲದಲ್ಲಿ ಸ್ನಾನವು ಮಾಸತ್ರಯ ಸ್ನಾನಫಲ ಪ್ರದವಾಗುವುದು.

೧೫. ಗಂಗೆಯಲ್ಲಿ ಭಕ್ತಿಭಾವನೆಯಿಂದ ಜನ್ಮನಕ್ಷತ್ರದಲ್ಲಿ ಸ್ನಾನಮಾಡಿದರೆ ಹುಟ್ಟಿದಾಗಿನಿಂದ ಮಾಡಿದ ಪಾಪವೆಲ್ಲವೂ ಹೋಗುತ್ತದೆ.

೧೬. ಮಾಘ ಕೃಷ್ಣಪಕ್ಷದ ಚತುರ್ದಶಿಯ ದಿನದಲ್ಲಿ ವ್ಯತೀಪಾತಯೋಗವಿದ್ದಾಗ ಮತ್ತು ಕೃಷ್ಣಾಷ್ಟಮಿಯಲ್ಲಿ ವೈಧೃತಿಯೋಗವಿದ್ದಾಗಲೂ ಸಹ ಗಂಗಾಜಲದಲ್ಲಿ ಸ್ನಾನವು ಲಭಿಸುವುದು ಕಷ್ಟ.

೧೭. ಮಾಘಮಾಸದಲ್ಲಿ ಸಂಪೂರ್ಣವಾಗಿ ಪ್ರತಿದಿನವೂ ಅರುಣೋದಯಕಾಲದಲ್ಲಿ ಸ್ನಾನಮಾಡುವ ಮನುಷ್ಯನು ಜನ್ಮಾಂತರ ಸ್ಮರಣೆಯುಳ್ಳವನಾಗುವನು.

೧೮-೧೯. ಅವನು ಸಕಲಶಾಸ್ತ್ರಾರ್ಥವನ್ನೂ ತಿಳಿದ ಜ್ಞಾನಿಯೂ, ರೋಗರಹಿತನೂ ಆಗುವನು.

ಗಂಗಾಸ್ನಾತೋ ನರಃ ಕಾಮಾದ್ಬ್ರಹ್ಮಣಃ ಸದನಂ ಲಭೇತ್ ।
ಇಂದೋರ್ಲಕ್ಷಗುಣಂ ಪ್ರೋಕ್ತಂ ರವೇರ್ದಶಗುಣಂ ತತಃ　　॥ ೧೯ ॥

ಗಂಗಾತೀರೇ ತು ಸಂಪ್ರಾಪ್ತಾ ಇಂದೋಃ ಕೋಟೀ ರವೇರ್ದಶ ।
ವಾರುಣೇನ ಸಮಾಯುಕ್ತಾ ಮಧೌ ಕೃಷ್ಣಾ ತಯೋದಶೀ ।
ಗಂಗಾಯಾಂ ಯದಿ ಲಭ್ಯೇತ ಸೂರ್ಯಗ್ರಹಶತೈಃ ಸಮಾ　　॥ ೨೦ ॥

ಜ್ಯೇಷ್ಠೇ ಮಾಸಿ ಕ್ಷಿತಿಸುತದಿನೇ ಶುಕ್ಲಪಕ್ಷೇ ದಶಮ್ಯಾಂ ।
ಹಸ್ತೇ ಶೈಲಾದವತರದಸೌ ಜಾಹ್ನವೀ ಮರ್ತ್ಯಲೋಕಂ ।
ಪಾಪಾನ್ಯಸ್ಯಾಂ ಹರತಿ ಹಿ ತಿಥೌ ಸಾ ದಶೈಷಾದ್ಯ ಗಂಗಾ
ಪುಣ್ಯಂ ದದ್ಯಾದಪಿ ಶತಗುಣಂ ವಾಜಿಮೇಧಕ್ರತೋಶ್ಚ　　॥ ೨೧ ॥

---

ಸಂಕ್ರಮಣ, ಪೂರ್ಣಿಮಾ, ಅಮಾವಾಸ್ಯೆ, ಚಂದ್ರ ಸೂರ್ಯ ಗ್ರಹಣ ಇವುಗಳಲ್ಲಿ ಸ್ವೇಚ್ಛೆಯಿಂದ ಗಂಗಾಸ್ನಾನಮಾಡಿದ ಮನುಷ್ಯನು ಬ್ರಹ್ಮಸದನವನ್ನು ಹೊಂದುವನು.

ಚಂದ್ರಗ್ರಹಣಸ್ನಾನಕ್ಕೆ ಲಕ್ಷಗುಣಫಲವೂ, ಸೂರ್ಯಗ್ರಹಣಸ್ನಾನಕ್ಕೆ ಅದಕ್ಕಿಂತ ದಶಗುಣಾಧಿಕಫಲವೂ ಉಕ್ತವಾಗಿದೆ.

೨೦. ಗಂಗಾತೀರದಲ್ಲಿಯಾದರೋ ಕೋಟಿ ಇಂದುಗಳು, ಹತ್ತು ಸೂರ್ಯರೂ ಸನ್ನಿಹಿತರಾಗಿರುವರು. ವಾರುಣಯುಕ್ತವಾದ ಚೈತ್ರಕೃಷ್ಣ ತ್ರಯೋದಶಿಯು ಗಂಗೆಯ ಸನ್ನಿಧಾನದಲ್ಲಿ ಸಂಭವಿಸಿದರೆ ಅದು ನೂರು ಸೂರ್ಯಗ್ರಹಣಗಳಿಗೆ ಸಮಾನವಾಗುವುದು.

೨೧. ಹಸ್ತನಕ್ಷತ್ರ, ಮಂಗಳವಾರಗಳಿಂದ ಯುಕ್ತವಾದ ಜ್ಯೇಷ್ಠಶುಕ್ಲ ದಶಮಿಯ ದಿನದಲ್ಲಿ ಗಂಗೆಯು ಹಿಮವತ್ಪರ್ವತದಿಂದ ಮನುಷ್ಯಲೋಕಕ್ಕೆ ಬಂದಳು. ಅವಳು ಈದಿನದಲ್ಲಿ ಪಾಪಗಳನ್ನು ಪರಿಹರಿಸುತ್ತಾಳೆ. ಅಂತಹ ಈ ಗಂಗೆಯು ಈಗ ಅಶ್ವಮೇಧಯಜ್ಞಕಿಂತ ನೂರರಷ್ಟು ಅಧಿಕವಾದ ಪುಣ್ಯವನ್ನು ಕೊಡಲಿ !

ಮಹಾಪಾತಕಸಂಘಾನಿ ಯಾನಿ ಪಾಪಾನಿ ಸಂತಿ ಮೇ |
ಗೋವಿಂದದ್ವಾದಶೀಂ ಪ್ರಾಪ್ಯ ತಾನಿ ಮೇ ಹನ ಜಾಹ್ನವಿ || ೨೨ ||

ಮಘಾಸಂಜ್ಞೇನ ಋಕ್ಷೇಣ ಚಂದ್ರಃ ಸಂಪೂರ್ಣಮಂಡಲಃ |
ಗುರುಣಾ ಯಾತಿ ಸಂಯೋಗಂ ತನ್ಮಹತ್ವಂ ತಿಥೇಃ ಸ್ಮೃತಂ || ೨೩ ||

ಗಂಗಾಯಾಂ ಯದಿ ಲಭ್ಯೇತ ಸೂರ್ಯಗ್ರಹಶತೈಃ ಸಮಾ |
ಅಥ ದೇಶವಿಶೇಷೇಣ ಸ್ನಾನಸ್ಯ ಫಲಮುಚ್ಯತೇ || ೨೪ ||

ಕುರುಕ್ಷೇತ್ರಾದ್ದಶಗುಣಾ ಯತ್ರ ತತ್ರಾವಗಾಹಿತಾ |
ಕುರುಕ್ಷೇತಾಚ್ಛತಗುಣಾ ಯತ್ರ ವಿಂಧ್ಯೇನ ಸಂಯುತಾ || ೨೫ ||

ವಿಂಧ್ಯಾಚ್ಛತಗುಣಾ ಪ್ರೋಕ್ತಾ ಕಾಶೀಪುರ್ಯಾಂ ತು ಜಾಹ್ನವೀ |
ಸರ್ವತ್ರ ದುರ್ಲಭಾ ಗಂಗಾ ತ್ರಿಷು ಸ್ಥಾನೇಷು ಚಾಧಿಕಾ || ೨೬ ||

---

೨೨. ಗಂಗೆಯೇ! ನಾನು ಮಾಡಿರುವ ಮಹಾಪಾಪಸಮೂಹಗಳನ್ನೂ ಇತರ ಪಾಪಗಳನ್ನೂ ಸಹ ಗೋವಿಂದ ದ್ವಾದಶಿಯಲ್ಲಿ ಸನ್ನಿಹಿತಳಾಗಿ ಪರಿಹರಿಸು !

೨೩. ಮಘಾನಕ್ಷತ್ರಯುಕ್ತವಾದ ಪೂರ್ಣಚಂದ್ರನು ಗುರು ಸಂಯೋಗವನ್ನು ಹೊಂದುವುದು ತಿಥಿಯ ಮಹತ್ವವೆಂದು ಉಕ್ತವಾಗಿದೆ.

೨೪. ಅಂತಹ ಮಹತ್ವವುಳ್ಳ ತಿಥಿಯು ಗಂಗೆಯಸನ್ನಿಧಿಯಲ್ಲಿ ಪ್ರಾಪ್ತವಾದರೆ ಅದು ನೂರು ಸೂರ್ಯಗ್ರಹಣಗಳಿಗೆ ಸಮಾನವೆಂದು ತಿಳಿಯಬೇಕು. ಈಗ ದೇಶವಿಶೇಷದಲ್ಲಿ ಮಾಡುವ ಗಂಗಾಸ್ನಾನದ ಫಲವನ್ನು ಹೇಳುವೆನು.

೨೫. ಗಂಗಾನದಿಯಲ್ಲಿ ಎಲ್ಲಿಸ್ನಾನಮಾಡಿದರೂ ಅದು ಕುರುಕ್ಷೇತ್ರದ ಹತ್ತರಷ್ಟು ಫಲದಾಯಕವು. ಗಂಗೆಯು ವಿಂಧ್ಯಪರ್ವತ ಸಹಿತವಾದರೆ ಕುರುಕ್ಷೇತ್ರದ ನೂರರಷ್ಟು ಮಹಿಮೆಯುಳ್ಳದಾಗುವುದು.

೨೬-೨೭. ಗಂಗೆಯು ಕಾಶೀಪಟ್ಟಣದಲ್ಲಿ ವಿಂಧ್ಯೆಯ ನೂರರಷ್ಟು ಗುಣ ಉಳ್ಳದು. ಗಂಗೆಯು ಎಲ್ಲಾಕಡೆಗಳಲ್ಲಿಯೂ ದುರ್ಲಭವೇ ಸರಿ. ಆದರೆ ಗಂಗಾ ದ್ವಾರ, ಪ್ರಯಾಗ, ಗಂಗಾಸಾಗರ ಸಂಗಮಸ್ಥಾನವೆಂಬ ಮೂರು ಸ್ಥಾನಗಳಲ್ಲಿ ಸ್ನಾನವು ಲಭಿಸುವುದು ಅತ್ಯಂತ ದುರ್ಲಭವು.

**ಗಂಗಾದ್ವಾರೇ ಪ್ರಯಾಗೇ ಚ ಗಂಗಾಸಾಗರಸಂಗಮೇ ।**
**ಏಷು ಸ್ನಾತಾ ದಿವಂ ಯಾಂತಿ ಯೇ ಮೃತಾಸ್ತೇಽಪುನರ್ಭವಾಃ ॥ ೨೭ ॥**
**ಗಂಗಾದ್ವಾರೇ ಕುಶಾವರ್ತೇ ಸ್ನಾನೇ ಪುಣ್ಯಫಲಂ ಶೃಣು ।**
**ಸಪ್ತಾನಾಂ ರಾಜಸೂಯಾನಾಂ ಫಲಂ ಸ್ಯಾದಶ್ವಮೇಧಯೋಃ ॥ ೨೮ ॥**
**ಉಷಿತ್ವಾ ತತ್ರ ಮಾಸಾರ್ಧಂ ಷಣ್ಣಾಂ ವಿಶ್ವಜಿತಾಂ ಫಲಂ ।**
**ದಶಾಯುತಾನಾಂ ತು ಗವಾಂ ದಾನಪುಣ್ಯಂ ವಿದುರ್ಬುಧಾಃ ॥ ೨೯ ॥**
**ಸರೋತ್ತಮೇಥ ಗೋವಿಂದಂ ರುದ್ರಂ ಕನಖಲೇ ಸ್ಥಿತಂ ।**
**ಸ್ನಾತ್ವಾ ವಾಪ್ಯೇಷು ಗಂಗಾಯಾಂ ಪುಣ್ಯಮಕ್ಷಯಮವಾಪ್ನುಯಾತ್ ॥೩೦॥**
**ತೀರ್ಥಂ ಚ ಸೌಕರಂ ನಾಮ ಮಹಾಪುಣ್ಯಂ ಶುಭೇ ಶೃಣು ।**
**ಯಸ್ಮಿನ್ನಾವಿರಭೂತ್ಪೂರ್ವಂ ವಾರಾಹಾಕೃತಿರಚ್ಯುತಃ ॥ ೩೧ ॥**

---

ಈ ಮೂರುಸ್ಥಳಗಳಲ್ಲಿ ಗಂಗಾಸ್ನಾನ ಮಾಡಿದವರು ಸ್ವರ್ಗಕ್ಕೆ ಹೋಗುವರು. ಇಲ್ಲಿ ಸತ್ತವರು ಪುನಃ ಜನ್ಮವನ್ನು ತಾಳುವುದಿಲ್ಲ.

೨೮. ಗಂಗಾದ್ವಾರದಲ್ಲಿ ಮತ್ತು ಕುಶಾವರ್ತದಲ್ಲಿ ಸ್ನಾನಮಾಡಿದರೆ ಬರುವ ಪುಣ್ಯಫಲವನ್ನು ಹೇಳುತ್ತೇನೆ ಕೇಳು. ಅಲ್ಲಿ ಸ್ನಾನಮಾಡಿದರೆ ಏಳು ರಾಜಸೂಯಯಾಗಗಳು ಮತ್ತು ಎರಡು ಅಶ್ವಮೇಧಯಜ್ಞಗಳ ಫಲವು ಬರುತ್ತದೆ.

೨೯. ಅಲ್ಲಿ ಹದಿನೈದು ದಿನಗಳು ವಾಸಮಾಡಿದರೆ ಆರು ವಿಶ್ವಜಿದ್ಯಾಗಗಳ ಫಲವೂ, ಒಂದುಲಕ್ಷ ಗೋದಾನಮಾಡಿದ ಪುಣ್ಯವೂ ಸಹ ಬರುತ್ತದೆಂದು ಜ್ಞಾನಿಗಳು ಹೇಳಿರುವರು.

೩೦. ಈ ಕ್ಷೇತ್ರಗಳಲ್ಲಿ ಗಂಗಾಸ್ನಾನಮಾಡಿ ಸರೋತ್ತಮದಲ್ಲಿರುವ ಗೋವಿಂದನನ್ನೂ, ಕನಖಲದಲ್ಲಿರುವ ರುದ್ರನನ್ನೂ ಪೂಜಿಸಿದರೆ ಅಕ್ಷಯ್ಯ ಪುಣ್ಯವು ಬರುವುದು.

೩೧. ಶುಭಾಂಗಿಯೇ! ಪೂರ್ವದಲ್ಲಿ ಅಚ್ಯುತನು ವರಾಹರೂಪಿಯಾಗಿ ಅವತರಿಸಿದ ಸೌಕರವೆಂಬ ಮಹಾಪುಣ್ಯಕರವಾದ ತೀರ್ಥವನ್ನು ಹೇಳುವೆನು ಕೇಳು.

ಶತಸ್ಯಾಗ್ನಿಚಿತಾಂ ಪುಣ್ಯಂ ಜ್ಯೋತಿಷ್ಟೋಮದ್ವಯಸ್ಯ ಚ ।
ಅಗ್ನಿಷ್ಟೋಮಸಹಸ್ರಸ್ಯ ಫಲಮಾಪ್ನೋತಿ ಮಾನವಃ ॥ ೩೨ ॥
ತತ್ರೈವ ಬ್ರಹ್ಮಣಸ್ತೀರ್ಥೇ ಜ್ಯೋತಿಷ್ಟೋಮಾಯುತಸ್ಯ ಚ ।
ಅಶ್ವಮೇಧತ್ರಯಸ್ಯಾಪಿ ಸ್ನಾತಃ ಪುಣ್ಯಂ ಲಭೇನ್ನರಃ ॥ ೩೩ ॥
ಕುಬ್ಜಾಖ್ಯಂ ತೀರ್ಥಮನಘಂ ಯತ್ರ ಚ ವ್ಯಾಧಯೋಽಖಿಲಾಃ ।
ನಶ್ಯಂತಿ ಸರ್ವಜನ್ಮೋತ್ಥಂ ಪಾತಕಂ ಚಾಪಿ ಮೋಹಿನಿ ॥ ೩೪ ॥
ಅತ್ರಾನ್ಯತ್ಕಾಪಿಲಂ ತೀರ್ಥಂ ಯತ್ರ ಸ್ನಾತೋ ನರಃ ಶುಭೇ ।
ಕಪಿಲಾಷ್ಟಾಯುತಸ್ಯಾಪಿ ದಾನತುಲ್ಯಫಲಂ ಲಭೇತ್ ॥ ೩೫ ॥
ಗಂಗಾಸಂದರ್ಶನಾತ್ತದ್ವತ್ಸರ್ವಪಾಪೈಃ ಪ್ರಮುಚ್ಯತೇ ।
ಸಪ್ತಾವರಾನ್ ಸಪ್ತ ಪರಾನ್ಪಿತ್ರ್ಯಾಂಸ್ತೇಭ್ಯಶ್ಚ ಯೇ ಪರೇ ॥ ೩೬ ॥

---

೩೨. ಆ ತೀರ್ಥದಲ್ಲಿ ಸ್ನಾನಮಾಡುವ ಮನುಷ್ಯನು ನೂರು ಅಗ್ನಿಚಯನ, ಎರಡು ಜ್ಯೋತಿಷ್ಟೋಮ ಮತ್ತು ಸಾವಿರ ಅಗ್ನಿಷ್ಟೋಮಗಳ ಫಲವನ್ನೂ ಹೊಂದುವನು.

೩೩. ಅಲ್ಲಿಯೇ ಇರುವ ಬ್ರಹ್ಮತೀರ್ಥದಲ್ಲಿ ಸ್ನಾನಮಾಡಿದ ಮನುಷ್ಯನು ಹತ್ತುಸಾವಿರ ಜ್ಯೋತಿಷ್ಟೋಮಗಳು ಮತ್ತು ಮೂರು ಅಶ್ವಮೇಧಗಳ ಪುಣ್ಯವನ್ನು ಪಡೆಯುವನು.

೩೪. ಮೋಹಿನೀ! ಕುಬ್ಜವೆಂಬ ಅನರ್ಘ್ಯತೀರ್ಥವಿದೆ. ಅದರಲ್ಲಿ ಸ್ನಾನಮಾಡಿದರೆ ಸಕಲ ರೋಗಗಳೂ ನಾಶವಾಗುವುದಲ್ಲದೆ ಸಕಲ ಜನ್ಮಗಳಲ್ಲಿ ಮಾಡಿದ ಪಾಪಗಳೂ ಹೋಗುವುವು.

೩೫. ಇಲ್ಲಿಯೇ ಕಾಪಿಲತೀರ್ಥವೆಂಬ ಇನ್ನೊಂದು ತೀರ್ಥವಿದೆ. ಶುಭಾಂಗೀ! ಅದರಲ್ಲಿ ಸ್ನಾನಮಾಡಿದ ಮನುಷ್ಯನು ಎಂಬತ್ತುಸಾವಿರ ಕಪಿಲ ಗೋದಾನಮಾಡಿದ ಫಲವನ್ನು ಹೊಂದುವನು

---

೩೬ನೆಯ ಶ್ಲೋಕದಿಂದ ೭೮ನೆಯ ಶ್ಲೋಕದ ಪೂರ್ತಿ ೪೩ ಶ್ಲೋಕಗಳು ಇದರ ಹಿಂದಿನ ೬೪ನೆಯ ಅಧ್ಯಾಯದಲ್ಲಿಯೂ ಸೇರಿವೆ. ಇವುಗಳ ಭಾಷಾಂತರವನ್ನು ಅಲ್ಲಿಯೇ ತಿಳಿಯಬಹುದು.

ಪುಮಾಂಸ್ತಾರಯತೇ ಗಂಗಾಂ ವೀಕ್ಷ್ಯ ಸ್ಪೃಷ್ಟ್ವಾವಗಾಹ್ಯ ಚ |
ದರ್ಶನಾತ್ಸ್ಪರ್ಶನಾತ್ಸ್ನಾನಾತ್ತಥಾ ಗಂಗೇತಿ ಕೀರ್ತನಾತ್ || ೩೭ ||

ಪುನಾತಿ ಪುನಾತಿ ಪುರುಷಾಂಚ್ಛತಶೋಥ ಸಹಸ್ರಶಃ |
ಜ್ಞಾನಮೈಶ್ವರ್ಯಮತುಲಂ ಪ್ರತಿಷ್ಠಾಯುರ್ಯಶಸ್ತಥಾ || ೩೮ ||

ಶುಭಾನಾಮಾಶ್ರಮಾಣಾಂ ಚ ಗಂಗಾದರ್ಶನಜಂ ಫಲಂ |
ಸರ್ವೇಂದ್ರಿಯಾಣಾಂ ಚಾಂಚಲ್ಯಂ ವ್ಯಸನಾನಿ ಚ ಪಾತಕಂ || ೩೯ ||

ನಿರ್ಘೃಣತ್ವಂ ಚ ನಶ್ಯಂತಿ ಗಂಗಾದರ್ಶನಮಾತ್ರತಃ |
ಪರಹಿಂಸಾ ಚ ಕೌಟಿಲ್ಯಂ ಪರದೋಷಾದ್ಯವೇಕ್ಷಣಂ || ೪೦ ||

ದಾಂಭಿಕತ್ವಂ ತಥಾ ಗಂಗಾದರ್ಶನಾದೇವ ನಶ್ಯತಿ |
ಮುಹುರ್ಮುಹುಸ್ತಥಾ ಪಶ್ಯೇತ್ಸ್ಪೃಶೇದ್ವಾಪಿ ಮುಹುಸ್ತಥಾ || ೪೧ ||

ಯದೀಚ್ಛತಿ ನರಃ ಶಶ್ವಚ್ಛಾಶ್ವತಂ ಪದಮವ್ಯಯಂ |
ವಾಪೀಕೂಪತಡಾಗಾದಿಪ್ರಪಾಸತ್ರಾದಿಭಿಸ್ತಥಾ || ೪೨ ||

ಅನ್ಯತ್ರ ಯದ್ಭವೇತ್ಪುಣ್ಯಂ ತದ್ಗಂಗಾದರ್ಶನಾದ್ಭವೇತ್ |
ಯತ್ಫಲಂ ಜಾಯತೇ ಪುಂಸಾಂ ದರ್ಶನೇ ಪರಮಾತ್ಮನಃ || ೪೩ ||

ತದ್ಭವೇದೇವ ಗಂಗಾಯಾ ದರ್ಶನಾದ್ಭಕ್ತಿಭಾವತಃ |
ನೈಮಿಷೇ ಚ ಕುರುಕ್ಷೇತ್ರೇ ನರ್ಮದಾಯಾಂ ಚ ಪುಷ್ಕರೇ || ೪೪ ||

ಸ್ನಾನಾತ್ಪಾನಾತ್ಸ್ಪರ್ಶನಾಚ್ಚ ಯತ್ಫಲಂ ಲಭತೇ ನರಃ |
ತದ್ಗಂಗಾದರ್ಶನಾದೇವ ಕಲೌ ಪ್ರಾಹುರ್ಮಹರ್ಷಯಃ || ೪೫ ||

ಅಥ ತೇ ಸ್ಮರಣಸ್ಯಾಪಿ ಗಂಗಾಯಾ ಭೂಪಭಾಮಿನಿ |
ಪ್ರವಕ್ಷ್ಯಾಮಿ ಫಲಂ ಯತ್ತು ಪುರಾಣೇಷು ಪ್ರಕೀರ್ತಿತಂ || ೪೬ ||

ಅಶುಭೈಃ ಕರ್ಮಭಿರ್ಯುಕ್ತಾನ್ ಮಜ್ಜಮಾನಾನ್ ಭವಾರ್ಣವೇ |
ಪತತೋ ನರಕೇ ಗಂಗಾ ಸ್ಮೃತಾ ದೂರಾತ್ಸಮುದ್ಧರೇತ್ || ೪೭ ||

ಯೋಜನಾನಾಂ ಸಹಸ್ರೇಷು ಗಂಗಾಂ ಸ್ಮರತಿ ಯೋ ನರಃ ।
ಅವಿದ್ವತ್ಕೃತಕರ್ಮಾಪಿ ಲಭತೇ ಪರಮಾಂ ಗತಿಂ ॥ ೪೮ ॥

ಸ್ಮರಣಾದೇವ ಗಂಗಾಯಾಃ ಪಾಪಸಂಘಾತಪಂಜರಂ ।
ಭೇದಂ ಸಹಸ್ರಧಾ ಯಾತಿ ಗಿರಿರ್ವಜ್ರಹತೋ ಯಥಾ ॥ ೪೯ ॥

ಗಚ್ಛಂಸ್ತಿಷ್ಠನ್ ಸ್ವಪನ್ ಧ್ಯಾಯಞ್ಜಾಗ್ರದ್ಭುಂಜಞ್ಛ್ವಸನ್ಬ್ರುವನ್ ।
ಯಃ ಸ್ಮರೇತ್ ಸತತಂ ಗಂಗಾಂ ಸ ಚ ಮುಚ್ಯೇತ ಬಂಧನಾತ್ ॥ ೫೦ ॥

ಸಹಸ್ರಯೋಜನಸ್ಥಾಶ್ಚ ಗಂಗಾಂ ಭಕ್ತ್ಯಾ ಸ್ಮರಂತಿ ಯೇ ।
ಗಂಗಾಗಂಗೇತಿ ವಾ ಬ್ರೂಯುರ್ಮುಚ್ಯಂತೇ ತೇಽಪಿ ಪಾತಕಂ ॥ ೫೧ ॥

ಯೇ ಚ ಸ್ಮರಂತಿ ವೈ ಗಂಗಾಂ ಗಂಗಾಭಕ್ತಿಪರಾಶ್ಚ ಯೇ ।
ತೇಽಪ್ಯಶೇಷೈರ್ಮಹಾಪಾಪೈರ್ಮುಚ್ಯಂತೇ ನಾತ್ರ ಸಂಶಯಃ ॥ ೫೨ ॥

ಭವನಾನಿ ವಿಚಿತ್ರಾಣಿ ವಿಚಿತ್ರಾಭರಣಾಃ ಸ್ತ್ರಿಯಃ ।
ಆರೋಗ್ಯಂ ವಿತ್ತಸಂಪತ್ತಿರ್ಗಂಗಾಸ್ಮರಣಜಂ ಫಲಂ ॥ ೫೩ ॥

ಮನಸಾ ಸಂಸ್ಮರೇದ್ಯಸ್ತು ಗಂಗಾಂ ದೂರಸ್ಥಿತೋ ನರಃ ।
ಚಾಂದ್ರಾಯಣಸಹಸ್ರಸ್ಯ ಸ ಫಲಂ ಲಭತೇ ಧ್ರುವಂ ॥ ೫೪ ॥

ಗಂಗಾ ಗಂಗಾ ಜಪನ್ನಾಮ ಯೋಜನಾನಾಂ ಶತೇ ಸ್ಥಿತಃ ।
ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಚ ಗಚ್ಛತಿ ॥ ೫೫ ॥

ಕೀರ್ತನಾನ್ಮುಚ್ಯತೇ ಪಾಪಾದ್ದರ್ಶನಾನ್ಮಂಗಲಂ ಲಭೇತ್ ।
ಅವಗಾಹ್ಯ ತಥಾ ಪೀತ್ವಾ ಪುನಾತ್ಯಾಸಪ್ತಮಂ ಕುಲಂ ॥ ೫೬ ॥

ಸಪ್ತಾವರಾನ್ ಪರಾನ್ ಸಪ್ತ ಸಪ್ತಾಥ ಪರತಃ ಪರಾನ್ ।
ಗಂಗಾ ತಾರಯತೇ ಪುಂಸಾಂ ಪ್ರಸಂಗೇನಾಪಿ ಕೀರ್ತಿತಾ ॥ ೫೭ ॥

ಅಶ್ರದ್ಧಯಾಪಿ ಗಂಗಾಯಾ ಯಸ್ತು ನಾಮಾನುಕೀರ್ತನಂ ।
ಕರೋತಿ ಪುಣ್ಯವಾಹಿನ್ಯಾಃ ಸೋಽಪವರ್ಗಸ್ಯ ಭಾಜನಂ ॥ ೫೮ ॥

ಸರ್ವಾವಸ್ಥಾಗತೋ ವಾಪಿ ಸರ್ವಧರ್ಮವಿವರ್ಜಿತಃ |
ಗಂಗಾಯಾಃ ಕೀರ್ತನೇನೈವ ಶುಭಾಂ ಗತಿಮವಾಪ್ನುಯಾತ್ || ೫೯ ||

ಬ್ರಹ್ಮಹಾ ಗುರುಹಾ ಗೋಘ್ನಃ ಸ್ಪೃಷ್ಟೋ ವಾ ಸರ್ವಪಾತಕೈಃ |
ಗಂಗಾತೋಯಂ ನರಃ ಸ್ಪೃಷ್ಟ್ವಾ ಮುಚ್ಯತೇ ಸರ್ವಪಾತಕೈಃ || ೬೦ ||

ಕದಾ ದ್ರಕ್ಷ್ಯಾಮಿ ತಾಂ ಗಂಗಾಂ ಕದಾ ಸ್ನಾನಂ ಲಭೇ ಹ್ಯಹಂ |
ಇತಿ ಪುಂಸಾಭಿಲಷಿತಕುಲಾನಾಂ ತಾರಯೇಚ್ಛತಂ || ೬೧ ||

ಅಥ ಸ್ನಾನಫಲಂ ದೇವಿ ಗಂಗಾಯಾಃ ಪ್ರವದಾಮಿ ತೇ |
ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾತ್ರಸಂಶಯಃ || ೬೨ ||

ಸ್ನಾತಸ್ಯ ಗಂಗಾಸಲಿಲೇ ಸದ್ಯಃ ಪಾಪಂ ಪ್ರಣಶ್ಯತಿ |
ಅಪೂರ್ವಪುಣ್ಯಪ್ರಾಪ್ತಿಶ್ಚ ಸದ್ಯೋ ಮೋಹಿನಿ ಜಾಯತೇ || ೬೩ ||

ಸ್ನಾತಾನಾಂ ಶುಚಿಭಿಸ್ತೋಯೈರ್ಗಾಂಗೇಯೈಃ ಪ್ರಯತಾತ್ಮನಾಂ |
ವ್ಯುಷ್ಟಿರ್ಭವತಿ ಯಾ ಪುಂಸಾಂ ನ ಸಾ ಕ್ರತುಶತೈರಪಿ || ೬೪ ||

ಅಪಹತ್ಯ ತಮಸ್ತೀವ್ರಂ ಯಶ್ಚಾಭಾತ್ಯುದಯೇ ರವಿಃ |
ತಥಾಪಹತ್ಯ ಪಾಪ್ಮಾನಂ ಭಾತಿ ಗಂಗಾಜಲೋಕ್ಷಿತಃ || ೬೫ ||

ಏಕೇನೈವಾಪಿ ವಿಧಿನಾ ಸ್ನಾನೇನ ನೃಪಸುಂದರಿ |
ಅಶ್ವಮೇಧಫಲಂ ಮರ್ತ್ಯೋ ಗಂಗಾಯಾಂ ಲಭತೇ ಧ್ರುವಂ || ೬೬ ||

ಅನೇಕಜನ್ಮಸಂಭೂತಂ ಪುಂಸಾಂ ಪಾಪಂ ಪ್ರಣಶ್ಯತಿ |
ಸ್ನಾನಮಾತ್ರೇಣ ಗಂಗಾಯಾಃ ಸದ್ಯಃ ಸ್ಯಾತ್ಪುಣ್ಯಭಾಜನಂ || ೬೭ ||

ಅನ್ಯಸ್ಥಾನಕೃತಂ ಪಾಪಂ ಗಂಗಾತೀರೇ ವಿನಶ್ಯತಿ |
ಗಂಗಾತೀರೇ ಕೃತಂ ಪಾಪಂ ಗಂಗಾಸ್ನಾನೇನ ನಶ್ಯತಿ || ೬೮ ||

ರಾತ್ರೌ ದಿವಾ ಚ ಸಂಧ್ಯಾಯಾಂ ಗಂಗಾಯಾಂ ತು ಪ್ರಯತ್ನತಃ |
ಸ್ನಾತ್ವಾಶ್ವಮೇಧಜಂ ಪುಣ್ಯಂ ಗೃಹೇ ಶುಧ್ಯತಿ ತಜ್ಜಲೈಃ || ೬೯ ||

ಸರ್ವತೀರ್ಥೇಷು ಯತ್ಪುಣ್ಯಂ ಸರ್ವೇಷ್ವಾಯತನೇಷು ಚ ।
ತತ್ಫಲಂ ಲಭತೇ ಮರ್ತ್ಯೋ ಗಂಗಾಸ್ನಾನಾನ್ನ ಸಂಶಯಃ ॥ ೭೦ ॥

ಮಹಾಪಾತಕಸಂಯುಕ್ತೋ ಯುಕ್ತೋ ವಾ ಸರ್ವಪಾತಕೈಃ ।
ಗಂಗಾಸ್ನಾನೇನ ವಿಧಿವನ್ಮುಚ್ಯತೇ ಸರ್ವಪಾತಕೈಃ ॥ ೭೧ ॥

ಗಂಗಾಸ್ನಾನಾತ್ಪರಂ ಸ್ನಾನಂ ನ ಭೂತಂ ನ ಭವಿಷ್ಯತಿ ।
ವಿಶೇಷತಃ ಕಲಿಯುಗೇ ಪಾಪಂ ಹರತಿ ಜಾಹ್ನವೀ ॥ ೭೨ ॥

ನಿಹತ್ಯ ಕಾಮಜಾನ್ ದೋಷಾನ್ ಕಾಯವಾಕ್ಚಿತ್ತಸಂಭವಾನ್ ।
ಗಂಗಾಸ್ನಾನೇನ ಭಕ್ತ್ಯಾ ತು ಮೋದತೇ ದಿವಿ ದೇವವತ್ ॥ ೭೩ ॥

ವರ್ಷಂ ಸ್ನಾತಿ ಚ ಗಂಗಾಯಾಂ ಯೋ ನರೋ ಭಕ್ತಿಸಂಯುತಃ ।
ತಸ್ಯ ಸ್ಯಾದ್ವೈಷ್ಣವೇ ಲೋಕೇ ಸ್ಥಿತಿಃ ಕಲ್ಪಂ ನ ಸಂಶಯಃ ॥ ೭೪ ॥

ಆಮೃತ್ಯುಂ ಸ್ನಾತಿ ಗಂಗಾಯಾಂ ಯೋ ನರೋ ನಿತ್ಯಮೇವ ಚ ।
ಸಮಸ್ತಪಾಪನಿರ್ಮುಕ್ತಃ ಸಮಸ್ತಕುಲಸಂಯುತಃ ॥ ೭೫ ॥

ಸಮಸ್ತಭೋಗಸಂಯುಕ್ತೋ ವಿಷ್ಣುಲೋಕೇ ಮಹೀಯತೇ ।
ಪರಾರ್ಧದ್ವಿತಯಂ ಯಾವನ್ನಾತ್ರ ಕಾರ್ಯಾ ವಿಚಾರಣಾ ॥ ೭೬ ॥

ಗಂಗಾಯಾಂ ಸ್ನಾತಿ ಯೋ ಮರ್ತ್ಯೋ ನೈರಂತರ್ಯೇಣ ನಿತ್ಯದಾ ।
ಜೀವನ್ಮುಕ್ತಃ ಸ ಚಾತ್ರೈವ ಮೃತೋ ವಿಷ್ಣುಪದಂ ವ್ರಜೇತ್ ॥ ೭೭ ॥

ಪ್ರಾತಃ ಸ್ನಾನಾದ್ದಶಗುಣಂ ಪುಣ್ಯಂ ಮಧ್ಯಂದಿನೇ ಸ್ಮೃತಂ ।
ಸಾಯಂಕಾಲೇ ಶತಗುಣಂ ಸದಾನಲ್ಪಫಲಂ ಲಭೇತ್ ॥ ೭೮ ॥

ಗಂಗಾದ್ವಾರೇ ಕುಶಾವರ್ತೇ ಬಿಲ್ವಕೇ ನೀಲಪರ್ವತೇ ।
ತೀರ್ಥೇ ಕನಖಲೇ ಸ್ನಾತ್ವಾ ಧೂತಪಾಪ್ಮೋ ವ್ರಜೇದ್ದಿವಂ ॥ ೭೯ ॥

ಪವಿತ್ರಾರ್ಥಂ ತತಸ್ತೀರ್ಥಂ ಸರ್ವತೀರ್ಥೋತ್ತಮೋತ್ತಮಂ ।
ದ್ವಯೋರ್ವಿಶ್ವಜಿತೋಸ್ತತ್ರ ಸ್ನಾನಾತ್ಪುಣ್ಯಂ ಲಭೇನ್ನರಃ ॥ ೮೦ ॥

ವೇಣೀರಾಜ್ಯಂ ತತಸ್ತೀರ್ಥಂ ಸರಯೂರ್ಯತ್ರ ಗಂಗಯಾ ।
ಸುಪುಣ್ಯಯಾ ಮಹಾಪುಣ್ಯಂ ಸ್ವಸಾ ಸ್ವಸ್ರೇವ ಸಂಗತಾ ॥ ೮೧ ॥

ಹರೇರ್ದಕ್ಷಿಣಪಾದಾಬ್ಜಕ್ಷಾಲನಾದಮರಾಪಗಾ ।
ವಾಮಪಾದೋದ್ಭವಾ ವಾಪಿ ಸರಯೂರ್ಮಾನಸಪ್ರಸೂಃ ॥ ೮೨ ॥

ತೀರ್ಥೇ ತತ್ರಾರ್ಚಯನ್ ರುದ್ರಂ ವಿಷ್ಣುಂ ವಿಷ್ಣುತ್ವಮಾಪ್ನುಯಾತ್ ।
ಪಂಚಾಶ್ವಮೇಧಫಲದಂ ಸ್ನಾನಂ ತತ್ರ ಪ್ರಕೀರ್ತಿತಂ ॥ ೮೩ ॥

---

೭೯. ಗಂಗಾದ್ವಾರ, ಕುಶಾವರ್ತ, ಬಿಲ್ವಕ, ನೀಲಪರ್ವತ ಮತ್ತು ಕನಖಲತೀರ್ಥಗಳಲ್ಲಿ ಸ್ನಾನಮಾಡಿದರೆ ಪಾಪಗಳನ್ನು ಹೋಗಲಾಡಿಸಿಕೊಂಡು ಸ್ವರ್ಗಕ್ಕೆ ಹೋಗುವನು.

೮೦. ಪವಿತ್ರವೆಂಬ ಸರ್ವೋತ್ತಮ ತೀರ್ಥವಿದೆ. ಅದರಲ್ಲಿ ಸ್ನಾನ ಮಾಡುವ ಮನುಷ್ಯನು ಎರಡು ವಿಶ್ವಜಿದ್ಯಾಗಗಳ ಪುಣ್ಯವನ್ನು ಹೊಂದುವನು.

೮೧. ತರುವಾಯ ಸೋದರಿಯರು ಸೇರುವಂತೆ ಸರಯೂನದಿಯು ಅತ್ಯಂತ ಪುಣ್ಯಕರವಾದ ಗಂಗೆಯೊಡನೆ ಸಂಗವಾದೆಡೆಯಲ್ಲಿ ವೇಣೀ ರಾಜ್ಯ ವೆಂಬ ತೀರ್ಥವಿದೆ.

೮೨. ದೇವಗಂಗೆಯು ಹರಿಯ ಬಲಗಾಲನ್ನು ತೊಳೆದುದರಿಂದು ದ್ಭವಿಸಿತು. ಇನ್ನೊಂದು ಕಲ್ಪದಲ್ಲಿ ಎಡಗಾಲಿನಿಂದಲೂ ಉದ್ಭವಿಸಿದೆ. ಸರಯೂನದಿಯು ಹರಿಯ ಮನಸ್ಸಿನಿಂದ ಉದ್ಭವಿಸಿದುದು.

೮೩. ಆ ಸಂಗಮತೀರ್ಥದಲ್ಲಿ ರೋಗಪರಿಹಾರಕನಾದ ಹರಿಯನ್ನು ಪೂಜಿಸಿದರೆ ವಿಷ್ಣುಪದವನ್ನು ಹೊಂದುವನು. ಅಲ್ಲಿ ಮಾಡುವ ಸ್ನಾನವು ಐದು ಅಶ್ವಮೇಧಗಳ ಫಲವನ್ನು ಕೊಡುತ್ತದೆಂದು ಹೇಳಿದೆ.

**ತತಸ್ತು ಗಾಂಡವಂ ತೀರ್ಥಂ ಗಂಡಕೀ ಯತ್ರ ಸಂಗತಾ।**
**ಗೋಸಹಸ್ರಸ್ಯ ದಾನಂ ಚ ತತ್ರ ಸ್ನಾನಂ ಸಮಂ ದ್ವಯಂ ॥ ೭೪ ॥**

**ರಾಮತೀರ್ಥಂ ತತಃ ಪುಣ್ಯಂ ವೈಕುಂಠಂ ಯತ್ರ ಸನ್ನಿಧೌ ।**
**ಸೋಮತೀರ್ಥಂ ತತಃ ಪುಣ್ಯಂ ಯತ್ರಾಸೂರ್ಯಕುಲೋ ಮುನಿಃ ॥೭೫॥**

**ಸಮಭ್ಯರ್ಚ್ಯ ಶಿವಂ ಧ್ಯಾಯನ್ಗಣತಾಂ ತು ಸಮಾಯಯೌ ।**
**ಚಂಪಕಾಖ್ಯಂ ಪುಣ್ಯತೀರ್ಥಂ ಯದ್ಗಂಗೋತ್ತರವಾಹಿನೀ ॥ ೭೬ ॥**

**ಮಣಿಕರ್ಣಿಕಯಾ ತುಲ್ಯಂ ಮಹಾಪಾತಕನಾಶನಂ ।**
**ಕಲಶಾಖ್ಯಂ ತತಸ್ತೀರ್ಥಂ ಕಲಶಾದುತ್ಥಿತೋ ಮುನಿಃ ॥ ೭೭ ॥**

**ಆಗಸ್ತ್ಯಃ ಪೂಜಯನ್ನತ್ರ ರುದ್ರಂ ಮುನಿವರೋಽಭವತ್ ।**
**ಸೋಮದ್ವೀಪಂ ಮಹಾಪುಣ್ಯಂ ತೀರ್ಥಂ ವಾರಾಣಸೀಸಮಂ ॥ ೭೮ ॥**

---

೭೪. ಅನಂತರ ಗಂಡಕೀನದಿಯ ಸಂಗಮಸ್ಥಾನದಲ್ಲಿ ಗಾಂಡವತೀರ್ಥವೆಂಬ ತೀರ್ಥವಿದೆ. ಅಲ್ಲಿ ಸ್ನಾನಮಾಡುವುದು ಮತ್ತು ಸಾವಿರ ಗೋದಾನ ಇವೆರಡೂ ಸಮಾನವು.

೭೫-೭೬. ಅನಂತರ ರಾಮತೀರ್ಥವು, ಅದರ ಸಮೀಪದಲ್ಲಿ ಪುಣ್ಯಕರ ವೈಕುಂಠವೂ, ಬಳಿಕ ಸೋಮತೀರ್ಥವೂ ಇವೆ.

ಅಲ್ಲಿ ಸೂರ್ಯಕುಲೋತ್ಪನ್ನಮುನಿಯು ಶಿವನನ್ನು ಆರಾಧಿಸಿ, ಧ್ಯಾನಿಸುತ್ತಾ ಗಣ್ಯತೆಯನ್ನು ಹೊಂದಿದನು.

ಗಂಗೆಯು ಉತ್ತರವಾಹಿನಿಯಾಗಿರುವೆಡೆಯಲ್ಲಿ ಚಂಪಕವೆಂಬ ಪುಣ್ಯತೀರ್ಥವಿದೆ.

೭೭-೭೮. ಅದು ಕಾಶಿಯಲ್ಲಿರುವ ಮಹಾಪಾತಕನಾಶಕವಾದ ಮಣಿಕರ್ಣಿಕೆಗೆ ಸಮಾನವು. ಅನಂತರ ಕಲಶವೆಂಬ ತೀರ್ಥವಿದೆ.

ಅಲ್ಲಿ ಕುಂಭ ಸಂಭವನಾದ ಅಗಸ್ತ್ಯಮುನಿಯು ರುದ್ರದೇವರನ್ನು ಪೂಜಿಸಿ ಮುನಿಶ್ರೇಷ್ಠನಾದನು. ಸೋಮದ್ವೀಪವೆಂಬುದು ಮಹಾಪುಣ್ಯಕರ ತೀರ್ಥ. ಅದು ಕಾಶಿಗೆ ಸಮಾನವಾದುದು.

ಸೋಮೋ ಯತ್ರಾರ್ಚಯನ್ನೀಶಂ ರುದ್ರೇಣ ಶಿರಸಾ ಧೃತಃ |
ವಿಶ್ವಾಮಿತ್ರಸ್ಯ ಭಗಿನೀ ಗಂಗಯಾ ಯತ್ರ ಸಂಗತಾ || ೮೯ ||

ತತ್ರಾಪ್ಲುತೋ ನರೋ ಭೂಯೋದ್ವಾಸವಸ್ಯ ಪ್ರಿಯಾತಿಥಿಃ |
ಜಹ್ನುಹ್ರದೇ ಮಹಾತೀರ್ಥೇ ಸ್ನಾತೋ ಮರ್ತ್ಯೋ ಹಿ ಮೋಹಿನಿ ||೯೦||

ಏಕವಿಂಶತಿಕುಲ್ಯಾನಾಂ ತಾರಕೋ ಭವತಿ ಧ್ರುವಂ |
ತಸ್ಮಾದದಿತಿತೀರ್ಥಂ ಚ ಯತ್ರೈಷಾ ಯಾದಿತಿರ್ಹರಿಂ || ೯೧ ||

ಕಶ್ಯಪಾತ್ತತ್ರ ಸುಭಗೇ ಸ್ನಾನಮಾಹುರ್ಮಹೋದಯಂ |
ಶಿಲೋಚ್ಚಯಂ ಮಹಾತೀರ್ಥಂ ಯತ್ರ ತಪ್ತ್ವಾ ತಪಃ ಪ್ರಜಾಃ || ೯೨ ||

ತೃಣಾದಿಭಿಃ ಸಹ ಸ್ವರ್ಗಂ ಯಾಂತಿ ತೀರ್ಥಗಣಾಶ್ರಯಾತ್ |
ಇಂದ್ರಾಣೀನಾಮತೀರ್ಥಂ ಸ್ಯಾದ್ಯತ್ರೇಂದ್ರಾಣೀ ತು ವಾಸವಂ || ೯೩ ||

---

೮೯-೯೪. ಅಲ್ಲಿ ರುದ್ರನಿಂದ ಶಿರಸ್ಸಿನಲ್ಲಿ ಧರಿಸಲ್ಪಟ್ಟ ಚಂದ್ರನು ಈಶ್ವರನನ್ನು ಪೂಜಿಸುತ್ತಿರುವನು. ವಿಶ್ವಾಮಿತ್ರಭಗಿನಿಯು ಗಂಗೆಯೊಡನೆ ಸಂಗಮವಾದೆಡೆಯಲ್ಲಿ ಸ್ನಾನಮಾಡಿದ ಮನುಷ್ಯನು ಇಂದ್ರನಿಗೆ ಪ್ರಿಯನಾದ ಅತಿಥಿಯಾಗಿ ಇಂದ್ರಲೋಕದಲ್ಲಿ ವಾಸಿಸುವನು.

ಮೋಹಿನೀ! ಜನ್ಹುಹ್ರದವೆಂಬ ಮಹಾತೀರ್ಥದಲ್ಲಿ ಸ್ನಾನಮಾಡಿದ ಮನುಷ್ಯನು ಖಂಡಿತವಾಗಿಯೂ ಇಪ್ಪತ್ತೊಂದು ಕುಲಗಳನ್ನುದ್ಧರಿಸುವನು.

ಆದರಿಂದ ಮುಂದೆ ಅದಿತಿಯು ಕಶ್ಯಪನೊಂದಿಗೆ ಹರಿಯನ್ನು ಪೂಜಿಸಿದ ಅದಿತಿ ತೀರ್ಥವಿದೆ. ಸುಂದರೀ! ಅದರಲ್ಲಿ ಸ್ನಾನಮಾಡಿದರೆ ಮಹಾ ಶ್ರೇಯಸ್ಸಾಗುವುದೆಂದು ಹೇಳುವರು.

ಅನಂತರ ಶಿಲೋಚ್ಚಯವೆಂಬ ಮಹಾತೀರ್ಥವು ಪ್ರಸಿದ್ಧವಾಗಿದೆ. ಅದರಲ್ಲಿ ಜನರು ತಪಸ್ಸನ್ನು ಮಾಡಿದರೆ ತೀರ್ಥಸಮೂಹವನ್ನಾಶ್ರಯಿಸಿದಂತಾಗಿ ತೃಣಾದಿಗಳೊಡನೆ ಸ್ವರ್ಗಕ್ಕೆ ಹೋಗುವರು.

ಇಂದ್ರಾಣಿ ಎಂಬ ತೀರ್ಥವಿದೆ. ಅಲ್ಲಿ ಶಚಿಯು ತಪಸ್ಸುಮಾಡಿ ಇಂದ್ರನನ್ನು ಪತಿಯನ್ನಾಗಿ ಮಾಡಿಕೊಂಡಳು. ಈ ತೀರ್ಥವನ್ನು ವಿಧಾನೋಕ್ತಪ್ರಕಾರವಾಗಿ ಸೇವಿಸಬೇಕು.

ಸ್ನಾತಕವೆಂಬ ಇನ್ನೊಂದು ಪುಣ್ಯಕರ ತೀರ್ಥವಿದೆ ಅಲ್ಲಿ ವಿಶ್ವಾಮಿತ್ರನು ತಪಸ್ಸುಮಾಡಿದನು.

ತಪಸ್ತಪ್ತ್ವಾ ಪತಿಂ ಲೇಭೇ ಸೇವ್ಯಮೇತತ್ ಪ್ರಯೋಗವತ್ ।
ಪುಣ್ಯದಂ ಸ್ನಾತಕಂ ತೀರ್ಥಂ ವಿಶ್ವಾಮಿತ್ರಸ್ತಪಶ್ಚರ ॥ ೯೪ ॥
ಯತ್ರ ಬ್ರಹ್ಮರ್ಷಿತಾಂ ಲೇಭೇ ಕ್ಷತ್ರಿಯಸ್ತೀರ್ಥಸೇವಯಾ ।
ಪ್ರದ್ಯುಮ್ನತೀರ್ಥಂ ತಪಸಾ ಖ್ಯಾತಿಂ ಯತ್ರ ಸ್ಮರೋ ಹರೇಃ ॥ ೯೫ ॥
ಪ್ರದ್ಯುಮ್ನನಾಮಾ ಪುತ್ರೋಽಭೂತ್ಪರಂ ತತ್ರ ಮಹೋದಯಂ ।
ತತೋ ದಕ್ಷಪ್ರಯಾಗಂ ತು ಗಂಗಾತೋ ಯಮುನಾ ಗತಾ ॥ ೯೬ ॥
ಸ್ನಾತಸ್ಯೈವಾಕ್ಷಯಂ ಪುಣ್ಯಂ ಪ್ರಯಾಗ ಇವ ಲಭ್ಯತೇ। ॥ ೯೭ ॥

ಇತಿ ಶ್ರೀನಾರದೀಯಮಹಾಪುರಾಣೋತ್ತರಭಾಗೇ ಮೋಹಿನೀ
ವಸುಸಂವಾದೇ ಗಂಗಾಮಾಹಾತ್ಮ್ಯೇ ಸ್ಥಲವಿಶೇಷಸ್ನಾನಫಲ
ಕಥನಂ ನಾಮ ಚತ್ವಾರಿಂಶತ್ತಮೋಽಧ್ಯಾಯಃ

---

೯೫-೯೭. ಆ ತೀರ್ಥಸೇವೆಯಿಂದ ಕ್ಷತ್ರಿಯನಾದ ವಿಶ್ವಾಮಿತ್ರನು ಬ್ರಹ್ಮರ್ಷಿಯಾದನು. ಪ್ರದ್ಯುಮ್ನತೀರ್ಥವೆಂಬುದು ಪ್ರಸಿದ್ಧವಾಗಿದೆ. ಅಲ್ಲಿ ಮನ್ಮಥನು ತಪಸ್ಸುಮಾಡಿ ಪ್ರದ್ಯುಮ್ನನೆಂಬ ಹೆಸರಿನಿಂದ ಹರಿಗೆ ಪುತ್ರನಾಗಿ ಹುಟ್ಟಿದನು. ಅದರ ಸೇವನೆಯು ಅತ್ಯಂತ ಶ್ರೇಯಸ್ಕರವು.

ಬಳಿಕ ಗಂಗೆಯಿಂದ ಯಮುನೆಯು ಹೊರಟ ಸ್ಥಳವಾದ ದಕ್ಷಪ್ರಯಾಗ ವಿದೆ. ಅಲ್ಲಿ ಸ್ನಾನಮಾಡಿದವನಿಗೆ ಪ್ರಯಾಗದಂತೆ ಅಕ್ಷಯ್ಯ ಪುಣ್ಯವು ಲಭಿಸುತ್ತದೆ.

ಇಂತು ಶ್ರೀ ನಾರದೀಯಪುರಾಣೋತ್ತರಭಾಗದ ಮೋಹಿನೀ ವಸು
ಸಂಭಾಷಣೆಯಲ್ಲಿನ ಗಂಗೆಯ ಮಾಹಾತ್ಮ್ಯೆಯಲ್ಲಿ ಸ್ಥಲವಿಶೇಷ
ಸ್ನಾನಫಲ ಕಥನೆಯೆಂಬ ನಲವತ್ತನೆಯ
ಅಧ್ಯಾಯವು ಮುಗಿದುದು.

## ವಿಷಯಸಂಗ್ರಹ

ವಿಶೇಷ ದಿವಸಗಳಲ್ಲಿ ಮತ್ತು ಪುಣ್ಯಸ್ಥಳಗಳಲ್ಲಿ ಮಾಡಿದ ಗಂಗಾಸ್ನಾನದ ಮಾಹಾತ್ಮ್ಯೆಯನ್ನು ಗಂಗಾತೀರದಲ್ಲಿನ ಅನೇಕ ತೀರ್ಥಗಳ ವರ್ಣನೆ ಸಹಿತವಾಗಿ ನಿರೂಪಿಸಿದೆ.

# ಏಕಚತ್ವಾರಿಂಶತ್ತಮೋऽಧ್ಯಾಯಃ

ವಸುರುವಾಚ

ಅಥಾವಗಾಹನಾದೀನಾಂ ಕರ್ಮಣಾಂ ಫಲಮುಚ್ಯತೇ ।
ಸಾವಧಾನಾ ಶೃಣುಷ್ವ ತ್ವಂ ಬ್ರಹ್ಮಪುತ್ರಿ ನೃಪಪ್ರಿಯೇ ॥ ೧ ॥

ಯೈಃ ಪುಣ್ಯವಾಹಿನೀ ಗಂಗಾ ಸಕೃದ್ಭಕ್ತ್ಯಾವಗಾಹಿತಾ ।
ತೇಷಾಂ ಕುಲಾನಾಂ ಲಕ್ಷಂ ತು ಭವಂ ತಾರಯತೇ ಶಿವಾ ॥ ೨ ॥

ಸಾಮಾನ್ಯಸ್ನಾನತೋ ದೇವಿ ತತ್ರ ಸಂಧ್ಯಾ ಹ್ಯುಪಾಸಿತಾ ।
ಪುಣ್ಯಂ ಲಕ್ಷಗುಣಂ ಕರ್ತುಂ ಸಮರ್ಥಾ ದ್ವಿಜಪಾವನೀ ॥ ೩ ॥

---

## ನಲವತ್ತೊಂದನೆಯ ಅಧ್ಯಾಯ

೧. ವಸುವು ಹೇಳಿದನು:—ರುಕ್ಮಾಂಗದ ಪತ್ನಿಯಾದ ಬ್ರಹ್ಮಕುಮಾರಿಯೇ ! ಈಗ ಗಂಗಾಸ್ನಾನ ಮುಂತಾದ ಕರ್ಮಗಳ ಫಲವನ್ನು ಹೇಳುವೆನು ಸಾವಧಾನವಾಗಿ ಕೇಳು.

೨. ಪುಣ್ಯವಾಹಿನಿಯಾದ ಗಂಗೆಯಲ್ಲಿ ಒಂದಾವರ್ತಿ ಭಕ್ತಿಯಿಂದ ಮುಳುಗಿ ಸ್ನಾನಮಾಡಿದವರ ಲಕ್ಷ ಕುಲಗಳನ್ನು ಗಂಗೆಯು ಸಂಸಾರದಿಂದ ದಾಟಿಸುವುದು.

೩. ದೇವಿಯೇ ! ಆ ಗಂಗೆಯಲ್ಲಿ ಸ್ನಾನ ಮಾತ್ರ ಮಾಡುವುದಕ್ಕಿಂತಲೂ ಸಂಧ್ಯಾವಂದನೆಯನ್ನು ಮಾಡಿದವನಿಗೆ ದ್ವಿಜಪಾವನಿಯಾದ ಗಂಗೆಯು ಒಂದುಲಕ್ಷದಷ್ಟು ಹೆಚ್ಚುಫಲ ಕೊಡಲು ಸಮರ್ಥಳು.

ದತ್ತಾಃ ಪಿತೃಭ್ಯೋ ಯತ್ರಾಪಸ್ತನಯೈಃ ಶ್ರದ್ಧಯಾನ್ವಿತೈಃ ।
ಅಕ್ಷಯಾಂ ತು ಪ್ರಕುರ್ವಂತಿ ತೃಪ್ತಿಂ ಮೋಹಿನಿ ದುರ್ಲಭಾಂ ॥ ೪ ॥

ಯಾವಂತಶ್ಚ ತಿಲಾ ಮರ್ತ್ಯೈರ್ಗೃಹೀತಾಃ ಪಿತೃಕರ್ಮಣಿ ।
ತಾವದ್ವರ್ಷಸಹಸ್ರಾಣಿ ಪಿತರಃ ಸ್ವರ್ಗವಾಸಿನಃ ॥ ೫ ॥

ಪಿತೃಲೋಕೇಷು ಯೇ ಕೇಚಿತ್ ಸರ್ವೇಷಾಂ ಪಿತರಃ ಸ್ಥಿತಾಃ ।
ತರ್ಪ್ಯಮಾಣಾಃ ಪರಾಂ ತೃಪ್ತಿಂ ಯಾಂತಿ ಗಂಗಾಜಲೈಃ ಶುಭೈಃ ॥ ೬ ॥

ಯ ಇಚ್ಛೇತ್ಸಫಲಂ ಜನ್ಮ ಸಂತತಿಂ ವಾ ಶುಭಾನನೇ ।
ಸ ಪಿತ್ರ್ಯಾಂಸ್ತರ್ಪಯೇದ್ಗಂಗಾಮಭಿಗಮ್ಯ ಸುರಾಂಸ್ತಥಾ ॥ ೭ ॥

ಯೇ ಮೃತಾ ದುರ್ಗತಾ ಮರ್ತ್ಯಾಸ್ತರ್ಪಿತಾಸ್ತತ್ಕುಲೋದ್ಭವೈಃ ।
ಕುಶೈಸ್ತಿಲೈರ್ಗಾಂಗಜಲೈಸ್ತೇ ಪ್ರಯಾಂತಿ ಹರೇಃ ಪದಂ ॥ ೮ ॥

---

೪. ಮೋಹಿನಿಯೇ! ಅಲ್ಲಿ ಶ್ರದ್ಧೆಯಿಂದ ಮಕ್ಕಳು ಪಿತೃಗಳಿಗೆ ತರ್ಪಣ ಕೊಟ್ಟರೆ ಅದು ಅತ್ಯಂತ ದುರ್ಲಭವಾದ ಅಕ್ಷಯ್ಯ ತೃಪ್ತಿಯನ್ನುಂಟು ಮಾಡುವುದು.

೫. ಅಲ್ಲಿ ತರ್ಪಣಕೊಡುವಾಗ ಜನರು ಎಷ್ಟು ಎಳ್ಳುಕಾಳುಗಳನ್ನು ಉಪಯೋಗಿಸುವರೋ ಅವರ ಪಿತೃಗಳು ಅಷ್ಟು ಸಾವಿರವರ್ಷಗಳು ಸ್ವರ್ಗದಲ್ಲಿ ವಾಸಿಸುವರು.

೬. ಶುಭವಾದ ಗಂಗಾಜಲಗಳಿಂದ ತರ್ಪಣಕೊಟ್ಟರೆ ಪಿತೃಲೋಕದಲ್ಲಿರುವ ಸಕಲ ಪಿತೃಗಳೂ ಚೆನ್ನಾಗಿ ತೃಪ್ತಿಯನ್ನು ಹೊಂದುತ್ತಾರೆ.

೭. ಶುಭಾನನೇ! ಜನ್ಮಸಾಫಲ್ಯ ಮತ್ತು ಸಂತಾನವನ್ನು ಬಯಸುವವನು ಗಂಗೆಗೆ ಹೋಗಿ ಪಿತೃ ಮತ್ತು ದೇವತೆಗಳಿಗೆ ತರ್ಪಣ ಕೊಡಬೇಕು.

೮. ಮೃತರಾಗಿ ದುರ್ಗತಿಯನ್ನು ಹೊಂದಿರುವ ಪಿತೃಗಳೂ ಸಹ ಅವರ ವಂಶದಲ್ಲಿ ಜನಿಸಿದವರಾರಾದರೂ ದರ್ಭೆ, ಎಳ್ಳು ಮತ್ತು ಗಂಗಾಜಲಗಳಿಂದ ತರ್ಪಣಕೊಟ್ಟರೆ ವೈಕುಂಠಕ್ಕೆ ಹೋಗುವರು.

ಸ್ವರ್ಗಸಂಸ್ಥಾಶ್ಚ ಯೇ ಕೇಚಿತ್ಪಿತರಃ ಪುಣ್ಯಶೀಲಿನಃ ।
ತೇ ತರ್ಪಿತಾ ಗಾಂಗಜಲೈರ್ಮೋಕ್ಷಂ ಯಾಂತಿ ವಿಧೇರ್ವಚಃ ॥ ೯ ॥

ಮಾಸಂ ತರ್ಪಣಮಾತ್ರೇಣ ಪಿಂಡಸಂಪಾತನೇನ ಚ ।
ಗಂಗಾಯಾಂ ಪಿತರಃ ಸರ್ವೇ ಸುಪ್ರೀತಾಃ ಸೂರ್ಯವರ್ಚಸಃ ॥ ೧೦ ॥

ಅಪ್ಸರೋಗಣಸಂಯುಕ್ತಾನ್ ಹೇಮರತ್ನವಿಭೂಷಿತಾನ್ ।
ಮುಕ್ತಾಜಾಲಪರಿಚ್ಛನ್ನಾನ್ವೇಣುವೀಣಾನಿನಾದಿತಾನ್ ॥ ೧೧ ॥

ಭೇರೀಶಂಖಮೃದಂಗಾದಿನಿರ್ಘೋಷಾನ್ ಸ್ರಗ್ವಿಭೂಷಿತಾನ್ ।
ಗಂಧರ್ವದೇಹರುಚಿರಾನ್ ದಿವ್ಯಭೋಗಸಮನ್ವಿತಾನ್ ॥ ೧೨ ॥

ಆರುಹ್ಯ ತು ವಿಮಾನಾಗ್ರ್ಯಾನ್ ಬ್ರಹ್ಮಲೋಕಂ ಪ್ರಯಾಂತಿ ಹಿ ।
ಗಂಗಾಯಾಂ ತು ನರಃ ಸ್ನಾತ್ವಾ ಯೋ ನಿತ್ಯಂ ಲಿಂಗಮರ್ಚಯೇತ್ ॥

---

೯. ಗಂಗಾಜಲಗಳಿಂದ ತರ್ಪಣಕೊಟ್ಟರೆ ಸ್ವರ್ಗದಲ್ಲಿರತಕ್ಕ ಪುಣ್ಯಶಾಲಿಗಳಾದ ಪಿತೃಗಳೂ ಸಹ ಮೋಕ್ಷಕ್ಕೆ ಹೋಗುವರು ಎಂಬುದಾಗಿ ಬ್ರಹ್ಮನು ಹೇಳಿರುವನು.

೧೦-೧೬. ಗಂಗೆಯಲ್ಲಿ ಒಂದು ತಿಂಗಳುಕಾಲ ತರ್ಪಣಮಾಡುವುದು ಮತ್ತು ಪಿಂಡಹಾಕುವುದರಿಂದ ಪಿತೃಗಳೆಲ್ಲರೂ ಅತ್ಯಂತ ಪ್ರೀತರಾಗಿ ಸೂರ್ಯನಂತೆ ತೇಜಸ್ವಿಗಳಾಗಿ ಅಪ್ಸರಸ್ತ್ರೀಸಮೂಹಗಳಿಂದ ಕೂಡಿದ, ಸುವರ್ಣ ಮತ್ತು ರತ್ನಗಳಿಂದಲಂಕೃತಗಳಾದ, ಮುತ್ತಿನಗೊಂಚಲುಗಳಿಂದ ಪರಿಚ್ಛಿನ್ನಗಳಾದ, ವೇಣು ವೀಣಾಧ್ವನಿಯಿಂದ ಕೂಡಿರುವ, ನಗಾರಿ ಶಂಖ ಮೃದಂಗ ಮುಂತಾದುವುಗಳ ಘೋಷಣದಿಂದ ಯುಕ್ತವಾದ, ಮಾಲಿಕೆಗಳಿಂದಲಂಕರಿಸಲ್ಪಟ್ಟಿರುವ, ಗಂಧರ್ವದೇಹಗಳಿಂದ ಮನೋಹರಗಳಾದ, ದಿವ್ಯ ಭೋಗಗಳುಳ್ಳ ಉತ್ತಮ ವಿಮಾನಗಳಲ್ಲಿ ಕುಳಿತು ಬ್ರಹ್ಮಲೋಕಕ್ಕೆ ಹೋಗುವರು.

ಗಂಗೆಯಲ್ಲಿ ಸ್ನಾನಮಾಡಿ ನಿರಂತರವೂ ಲಿಂಗವನ್ನು ಪೂಜಿಸುವ ಮನುಷ್ಯನು ಒಂದೇ ಜನ್ಮದಲ್ಲಿ ಖಂಡಿತವಾಗಿಯೂ ಉತ್ತಮ ಮೋಕ್ಷವನ್ನು ಹೊಂದುವನು.

ಏಕೇನ ಜನ್ಮನಾ ಮೋಕ್ಷಂ ಪರಮಾಪ್ನೋತಿ ಸ ಧ್ರುವಂ ।
ಅಗ್ನಿಹೋತ್ರಾಣಿ ವೇದಾಶ್ಚ ಯಜ್ಞಾಶ್ಚ ಬಹುದಕ್ಷಿಣಾಃ ॥ ೧೪ ॥

ಗಂಗಾಯಾಂ ಲಿಂಗಪೂಜಾಯಾಃ ಕೋಟ್ಯಂಶೇನಾಪಿ ನೋ ಸಮಾಃ ।
ಪಿತೄನುದ್ದಿಶ್ಯ ವಾ ದೇವಾನ್ ಗಂಗಾಂಭೋಭಿಃ ಪ್ರಸಿಂಚಯೇತ್ ॥ ೧೫ ॥

ತೃಪ್ತಾಃ ಸ್ಯುಸ್ತಸ್ಯ ಪಿತರೋ ನರಕಸ್ಥಾಶ್ಚ ತತ್ಕ್ಷಣಾತ್ ।
ಮೃತ್ಕುಂಭಾತ್ತಾಮ್ರಕುಂಭೈಸ್ತು ಸ್ನಾನಂ ದಶಗುಣಂ ಸ್ಮೃತಂ ॥ ೧೬ ॥

ರೌಪ್ಯೈಃ ಶತಗುಣಂ ಪುಣ್ಯಂ ಹೈಮೈಃ ಕೋಟಿಗುಣಂ ಸ್ಮೃತಂ ।
ಏವಮರ್ಘ್ಯೇ ಚ ನೈವೇದ್ಯೇ ಬಲಿಪೂಜಾದಿಷು ಕ್ರಮಾತ್ ॥ ೧೭ ॥

ಪಾತ್ರಾಂತರವಿಶೇಷೇಣ ಫಲಂ ಚೈವೋತ್ತರೋತ್ತರಂ ।
ವಿಭವೇ ಸತಿ ಯೋ ಮೋಹಾನ್ನ ಕುರ್ಯಾದ್ವಿಧಿವಿಸ್ತರಂ ॥ ೧೮ ॥

---

ಅಗ್ನಿಹೋತ್ರಗಳು, ವೇದಗಳು, ಬಹುದಕ್ಷಿಣೆಗಳನ್ನು ಕೊಡತಕ್ಕ ಯಜ್ಞಗಳೂ ಸಹ ಗಂಗೆಯ ಸನ್ನಿಧಾನದಲ್ಲಿ ಮಾಡುವ ಲಿಂಗಪೂಜೆಗೆ ಕೋಟ್ಯಂಶದಿಂದಲೂ ಸಮವಾಗಲಾರವು. ಪಿತೃಗಳ ಅಥವಾ ದೇವತೆಗಳ ಉದ್ದೇಶದಿಂದ ಗಂಗಾಜಲಗಳಿಂದ ಪ್ರೋಕ್ಷಿಸಿದರೆ ಅವನ ಪಿತೃಗಳು ನರಕದಲ್ಲಿದ್ದರೂ ತಕ್ಷಣದಲ್ಲಿ ತೃಪ್ತರಾಗುವರು. ಮಣ್ಣಿನ ಗಡಿಗೆಗಳಿಗಿಂತಲೂ ತಾಮ್ರದ ಬಿಂದಿಗೆಗಳಿಂದ ಸ್ನಾನಮಾಡುವುದು ದಶಗುಣಾಧಿಕ ಪುಣ್ಯಪ್ರದವೆಂದು ವಿಹಿತವಾಗಿದೆ.

೧೭. ಬೆಳ್ಳಿಯ ಕೊಡಗಳಿಂದ ಗಂಗಾಜಲ ಸ್ನಾನಮಾಡುವುದು ತಾಮ್ರಕುಂಭಸ್ನಾನಕ್ಕಿಂತಲೂ ನೂರರಷ್ಟು ಹೆಚ್ಚು ಪುಣ್ಯವನ್ನೂ, ಬಂಗಾರದ ತಂಬಿಗೆಯಿಂದ ಸ್ನಾನಮಾಡುವುದು ಅದಕ್ಕಿಂತ ಕೋಟಿಯಷ್ಟು ಅಧಿಕ ಪುಣ್ಯವನ್ನೂ ಕೊಡುತ್ತದೆ. ಇದೇರೀತಿಯಾಗಿ ಅರ್ಘ್ಯ, ನೈವೇದ್ಯ, ಬಲಿಪೂಜೆ ಮುಂತಾದುವುಗಳಲ್ಲಿಯೂ ಕ್ರಮವಾಗಿ ಪಾತ್ರೆಯ ಭೇದದಿಂದ ಫಲಾಧಿಕ್ಯವನ್ನು ತಿಳಿಯಬೇಕು.

ನ ಸ ತತ್ಕರ್ಮಫಲಭಾಗ್ದೇವದ್ರೋಹೀ ಪ್ರಕೀರ್ತ್ಯತೇ ।
ದೇವಾನಾಂ ದರ್ಶನಂ ಪುಣ್ಯಂ ದರ್ಶನಾತ್ ಸ್ಪರ್ಶನಂ ವರಂ ॥ ೧೯ ॥

ಸ್ಪರ್ಶನಾದರ್ಚನಂ ಶ್ರೇಷ್ಠಂ ಘೃತಸ್ನಾನಮತಃ ಪರಂ ।
ಪ್ರಾಹುರ್ಗಂಗಾಜಲೈಃ ಸ್ನಾನಂ ಘೃತಸ್ನಾನಸಮಂ ಬುಧಾಃ ॥ ೨೦ ॥

ಅರ್ಘ್ಯಂ ದ್ರವ್ಯವಿಶೇಷೇಣ ಗಂಗಾತೋಯೇನ ಯಃ ಸಕೃತ್ ।
ಮಾಗಧಪ್ರಸ್ಥಮಾತ್ರೇಣ ತಾಮ್ರಪಾತ್ರಸ್ಥಿತೇನ ಚ ॥ ೨೧ ॥

ದೇವತಾಭ್ಯಃ ಪ್ರದದ್ಯಾತ್ತು ಸ್ವಕೀಯಪಿತೃಭಿಃ ಸಹ ।
ಪುತ್ರಪೌತ್ರೈಶ್ಚ ಸಂಯುಕ್ತಃ ಸ ಚ ವೈ ಸ್ವರ್ಗಮಾಪ್ನುಯಾತ್ ।
ವಿಷ್ಣೋಃ ಶಿವಸ್ಯ ಸೂರ್ಯಸ್ಯ ದುರ್ಗಾಯಾ ಬ್ರಹ್ಮಣಸ್ತಥಾ ॥ ೨೨ ॥

ಗಂಗಾತೀರೇ ಪ್ರತಿಷ್ಠಾಂ ತು ಯಃ ಕರೋತಿ ನರೋತ್ತಮಃ ।
ತಥೈವಾಯುತನಾನ್ಯೇಷಾಂ ಕಾರಯಂತ್ಯಪಿ ಶಕ್ತಿತಃ ॥ ೨೩ ॥

---

೧೮-೧೯. ಪಾತ್ರಾಂತರ ವಿಶೇಷಾನುಸಾರವಾಗಿ ಮೇಲುಮೇಲಿನ ಫಲವೂ ಲಭಿಸುವುದು. ಐಶ್ವರ್ಯವಿದ್ದರೂ ಮೋಹದಿಂದ ವಿಹಿತವಾದುದನ್ನು ಉತ್ತಮರೀತಿಯಲ್ಲಿ ನಡೆಯಿಸದಿರುವವನು ಆ ಕರ್ಮಫಲಕ್ಕೆ ಭಾಗಿಯಾಗುವುದಿಲ್ಲ. ಅಂತಹವನು ದೇವದ್ರೋಹಿಯೆಂದು ಹೇಳಿದೆ. ದೇವತೆಗಳ ದರ್ಶನವು ಪುಣ್ಯದಾಯಕವು. ಅದಕ್ಕಿಂತಲೂ ಸ್ಪರ್ಶವು ಉತ್ತಮ.

೨೦. ಸ್ಪರ್ಶಕ್ಕಿಂತಲೂ ಪೂಜೆಯು ಶ್ರೇಷ್ಠ. ಅದಕ್ಕಿಂತಲೂ ಘೃತಾಭಿಷೇಕವು ಹೆಚ್ಚಿನದು. ಅಂತಹ ಘೃತಾಭಿಷೇಕಕ್ಕೆ ಗಂಗಾಜಲಾಭಿಷೇಕವು ಸಮಾನವೆಂದು ಜ್ಞಾನಿಗಳು ಹೇಳಿರುವರು.

೨೧-೨೯. ತಾಮ್ರಪಾತ್ರೆಯಲ್ಲಿರಿಸಿದ, ಮಗಧದೇಶದ ಬಳ್ಳದಷ್ಟು ಗಂಗಾಜಲದಿಂದ ದ್ರವ್ಯ ವಿಶೇಷಸಹಿತವಾಗಿ ದೇವತೆಗಳಿಗೂ, ತನ್ನ ಪಿತೃಗಳಿಗೂ ಸಹ ಒಂದಾವರ್ತಿ ಅರ್ಘ್ಯೆಯನ್ನು ಕೊಡುವವನು ಮಕ್ಕಳು ಮೊಮ್ಮಕ್ಕಳು ಸಹಿತವಾಗಿ ಸ್ವರ್ಗವನ್ನು ಹೊಂದುವನು.

ಅನ್ಯತೀರ್ಥೇಷು ಕರಣಾತ್ಕೋಟಿಕೋಟಿಗುಣಂ ಭವೇತ್ ।
ಗಂಗಾತೀರಸಮುದ್ಭೂತಮೃದಾ ಲಿಂಗಾನಿ ಶಕ್ತಿತಃ ॥ ೨೪ ॥

ಸಲಕ್ಷಣಾನಿ ಕೃತ್ವಾ ತು ಪ್ರತಿಷ್ಠಾಪ್ಯ ದಿನೇದಿನೇ ।
ಮಂತ್ರೈಶ್ಚ ಪತ್ರಪುಷ್ಪಾದ್ಯೈಃ ಪೂಜಯಿತ್ವಾ ಚ ಶಕ್ತಿತಃ ॥ ೨೫ ॥

ಗಂಗಾಯಾಂ ನಿಕ್ಷಿಪೇನ್ನಿತ್ಯಂ ತಸ್ಯ ಪುಣ್ಯಮನಂತಕಂ ।
ಸರ್ವಾನಂದಪ್ರದಾಯಿನ್ಯಾಂ ಗಂಗಾಯಾಂ ಯೋ ನರೋತ್ತಮಃ ॥ ೨೬ ॥

ಅಷ್ಟಾಕ್ಷರಂ ಜಪೇದ್ಭಕ್ತ್ಯಾ ಮುಕ್ತಿಸ್ತಸ್ಯ ಕರೇ ಸ್ಥಿತಾ ।
ನಮೋ ನಾರಾಯಣಾಯೇತಿ ಪ್ರಣವಾದ್ಯಂ ನಿಯಮ್ಯ ಚ ॥ ೨೭ ॥

ಷಣ್ಮಾಸಂ ಜಪತಃ ಸರ್ವಾ ಹ್ಯುಪತಿಷ್ಠಂತಿ ಸಿದ್ಧಯಃ ।
ನಮಃ ಶಿವಾಯೇತಿ ಮಂತ್ರಂ ಸತಾರಂ ವಿಧಿನಾ ತು ಯಃ ॥ ೨೮ ॥

---

ವಿಷ್ಣು, ಶಿವ, ಸೂರ್ಯ, ದುರ್ಗೆ ಮತ್ತು ಬ್ರಹ್ಮ ಇವರ ಪ್ರತಿಮೆಗಳನ್ನು ಗಂಗಾತೀರದಲ್ಲಿ ಪ್ರತಿಷ್ಠೆಮಾಡುವ ಮನುಜೋತ್ತಮನು ಮತ್ತು ಈ ವಿಷ್ಣು ಮುಂತಾದವರ ಆಯತನಗಳನ್ನು ತನ್ನ ಶಕ್ತ್ಯನುಸಾರವಾಗಿ ಕಟ್ಟಿಸುವವನೂ ಸಹ ಇತರ ತೀರ್ಥಗಳಲ್ಲಿ ಮಾಡುವುದಕ್ಕಿಂತ ಕೋಟ್ಯಂತರ ಗುಣಾಧಿಕ ಪುಣ್ಯವನ್ನು ಪಡೆಯುವನು.

ಗಂಗಾತೀರದಲ್ಲಿನ ಮಣ್ಣಿನಿಂದ ತನ್ನ ಶಕ್ತ್ಯನುಸಾರ ಸಲಕ್ಷಣವಾದ ಲಿಂಗಗಳನ್ನು ಮಾಡಿ, ಪ್ರತಿದಿನವೂ ಅದನ್ನು ಪ್ರತಿಷ್ಠೆಮಾಡಿ, ಪತ್ರ, ಹೂವು ಮುಂತಾದುವುಗಳಿಂದ ಮಂತ್ರಹೇಳುತ್ತಾ ಪೂಜೆಮಾಡಿ, ಅದನ್ನು ನಿತ್ಯವೂ ಗಂಗೆಯಲ್ಲಿ ಸ್ಥಾಪಿಸುವವನಿಗೆ ಅನಂತಪುಣ್ಯವು ಬರುತ್ತದೆ.

ಸರ್ವಾನಂದಪ್ರದಾಯಕವಾದ ಗಂಗೆಯ ಸನ್ನಿಧಿಯಲ್ಲಿ ಭಕ್ತಿಯಿಂದ ಅಷ್ಟಾಕ್ಷರಮಂತ್ರವನ್ನು ಜಪಿಸುವವನಿಗೆ ಮುಕ್ತಿಯು ಕರಗತವಾಗುವುದು.

ಆದಿಯಲ್ಲಿ ಪ್ರಣವವನ್ನು ಸೇರಿಸಿ "ನಮೋ ನಾರಾಯಣಾಯ" ಎಂಬ ಮಂತ್ರವನ್ನು ಆರುತಿಂಗಳು ಜಪಿಸುವವನಿಗೆ ಸಕಲಸಿದ್ಧಿಗಳೂ ಲಭಿಸುವುವು.

ಚತುರ್ವಿಂಶತಿಲಕ್ಷಂ ವೈ ಜಪೇತ್ಸಾಕ್ಷಾತ್ಸ ಶಂಕರಃ ।
ಪಂಚಾಕ್ಷರೀ ಸಿದ್ಧವಿದ್ಯಾ ಶಿವ ಏವ ನ ಸಂಶಯಃ ॥ ೨೯ ॥

ಅಪವಿತ್ರಃ ಪವಿತ್ರೋ ವಾ ಜಪನ್ನಿಷ್ಪಾತಕೋ ಭವೇತ್ ।
ಪೂಜಿತಾಯಾಂ ತು ಗಂಗಾಯಾಂ ಪೂಜಿತಾಃ ಸರ್ವ ದೇವತಾಃ ॥ ೩೦ ॥

ತಸ್ಮಾತ್ಸರ್ವಪ್ರಯತ್ನೇನ ಪೂಜಯೇದಮರಾಪಗಾಂ ।
ಚತುರ್ಭುಜಾಂ ತ್ರಿನೇತ್ರಾಂ ಚ ಸರ್ವಾವಯವಶೋಭಿತಾಂ ॥ ೩೧ ॥

ರತ್ನಕುಂಭಸಿತಾಂಭೋಜವರಾಭಯಕರಾಂ ಶುಭಾಂ ।
ಶ್ವೇತವಸ್ತ್ರಪರೀಧಾನಾಂ ಮುಕ್ತಾಮಣಿವಿಭೂಷಿತಾಂ ॥ ೩೨ ॥

ಸುಪ್ರಸನ್ನಾಂ ಸುವದನಾಂ ಕರುಣಾರ್ದ್ರಹೃದಂಬುಜಾಂ ।
ಸುಧಾಪ್ಲಾವಿತಭೂಯಿಷ್ಠಾಂ ತ್ರೈಲೋಕ್ಯನಮಿತಾಂ ಸದಾ ॥ ೩೩ ॥

---

ತಾರ ಎಂದರೆ ಪ್ರಣವಸಹಿತವಾದ "ನಮಃ ಶಿವಾಯ" ಎಂಬ ಮಂತ್ರವನ್ನು ವಿಧಾನೋಕ್ತಪ್ರಕಾರವಾಗಿ ಇಪ್ಪತ್ತುನಾಲ್ಕು ಲಕ್ಷ ಜಪಿಸುವವನು ಸಾಕ್ಷಾಚ್ಛಂಕರನೇ ಆಗುವನು ಎಂದರೆ ಉತ್ತಮವಾದ ಶಂಕರಾನುಗ್ರಹವನ್ನು ಹೊಂದುವನೆಂದು ಭಾವ. ಸಿದ್ಧವಿದ್ಯೆಯಾದ ಪಂಚಾಕ್ಷರಿಯು ಶಿವಸ್ವರೂಪವೇ ಆಗಿದೆ ಸಂದೇಹವಿಲ್ಲ.

೩೦. ಅಶುದ್ಧನಾಗಿರಲಿ ಅಥವಾ ಶುದ್ಧನಾಗಿರಲಿ ಈ ಮಂತ್ರವನ್ನು ಜಪಿಸುವವನು ಪಾಪರಹಿತನಾಗುವನು. ಗಂಗೆಯನ್ನು ಪೂಜೆಮಾಡಿದರೆ ಸಕಲದೇವತೆಗಳನ್ನೂ ಪೂಜೆಮಾಡಿದಂತೆಯೇ ಸರಿ.

೩೧-೩೬. ಆದಕಾರಣ ಸಕಲಪ್ರಯತ್ನಗಳಿಂದಲೂ ದೇವನದಿಯಾದ ಗಂಗೆಯನ್ನು ಪೂಜಿಸಬೇಕು. ನಾಲ್ಕು ಭುಜಗಳು ಮತ್ತು ಮೂರುಕಣ್ಣುಗಳುಳ್ಳ ಸಕಲಾವಯವಗಳಿಂದಲಂಕೃತಳಾದ, ಕೈಗಳಲ್ಲಿ ರತ್ನಕುಂಭ, ಬಿಳಿಯ ಕಮಲ, ವರ, ಅಭಯಮುದ್ರೆಗಳನ್ನು ಧರಿಸಿರುವ, ಮಂಗಳಕರಳಾದ, ಬಿಳಿಯ ವಸ್ತ್ರವನ್ನುಟ್ಟು, ಮುತ್ತುಮಣಿಗಳಿಂದ ಅಲಂಕೃತಳಾಗಿ, ಅತ್ಯಂತ ಪ್ರಸನ್ನಳಾದ, ಸುಂದರಮುಖವುಳ್ಳ, ದಯೆಯಿಂದ ಕರಗಿದ ಹೃದಯಕಮಲವುಳ್ಳ, ಅಮೃತ

ಧ್ಯಾತ್ವಾ ಜಲಮಯೀಂ ಗಂಗಾಂ ಪೂಜಯರ್ನ್ ಪುಣ್ಯಭಾಗ್ಭವೇತ್ |
ಮಾಸಾರ್ಧಮಪಿ ಯಸ್ತ್ವೇವಂ ನೈರಂತರ್ಯೇಣ ಪೂಜಯೇತ್ || ೩೪ ||

ಸ ಏವ ದೇವಸದೃಶೋ ಬಹುಕಾಲಫಲಾಧಿಕಃ |
ವೈಶಾಖಶುಕ್ಲಸಪ್ತಮ್ಯಾಂ ಜಹ್ನುನಾ ಜಾಹ್ನವೀ ಪುರಾ || ೩೫ ||

ಕ್ರೋಧಾತ್ಪೀತಾ ಪುನಸ್ತ್ಯಕ್ತಾ ಕರ್ಣರಂಧ್ರಾತ್ತು ದಕ್ಷಿಣಾತ್ |
ತಾಂ ತತ್ರ ಪೂಜಯೇದ್ದೇವೀಂ ಗಂಗಾಂ ಗಗನಮೇಖಲಾಂ || ೩೬ ||

ಅಕ್ಷಯಾಯಾಂ ತು ವೈಶಾಖೇ ಕಾರ್ತಿಕೇಪಿ ಶುಭಾನನೇ |
ರಾತ್ರೌ ಜಾಗರಣಂ ಕೃತ್ವಾ ಯವಾನ್ನೈಶ್ಚ ತಿಲೈಸ್ತಥಾ || ೩೭ ||

ವಿಷ್ಣುಂ ಗಂಗಾಂ ಚ ಶಂಭುಂ ಚ ಪೂಜಯೇದ್ಭಕ್ತಿಭಾವತಃ |
ತಥಾ ಸುಗಂಧೈಃ ಕುಸುಮೈಃ ಕುಂಕುಮಾಗರುಚಂದನೈಃ || ೩೮ ||

---

ಭೂಯಿಷ್ಠಳಾದ, ಮೂರುಲೋಕಗಳಿಂದಲೂ ಸರ್ವದಾ ನಮಸ್ಕರಿಸಲ್ಪಡುತ್ತಿರುವ, ಜಲಮಯಳಾದ, ಗಂಗಾದೇವಿಯನ್ನು ಧ್ಯಾನಿಸಿ ಪೂಜೆಮಾಡುವವನು ಪುಣ್ಯಭಾಗಿಯಾಗುವನು.

ಈರೀತಿಯಾಗಿ ಹದಿನೈದು ದಿನಗಳಾದರೂ ನಿರಂತರ ಪೂಜೆಮಾಡುವವನು ದೇವಸದೃಶನಾಗಿ ಬಹುಕಾಲ, ಪೂಜೆಗಿಂತಲೂ ಅಧಿಕಫಲಭಾಗಿಯಾಗುವನು.

ಪೂರ್ವದಲ್ಲಿ ವೈಶಾಖ ಶುಕ್ಲ ಸಪ್ತಮಿಯ ದಿವಸ ಕೋಪದಿಂದ ಜನ್ಹುವು ಗಂಗೆಯನ್ನು ಪಾನಮಾಡಿ ಪುನಃ ಬಲಗಿವಿಯ ರಂಧ್ರದಿಂದ ಹೊರಕ್ಕೆ ಬಿಟ್ಟನು. ಆದಕಾರಣ ಅಲ್ಲಿ ಗಗನವನ್ನೇ ಡಾಬಾಗಿ ಉಳ್ಳ, ಆ ಗಂಗಾದೇವಿಯನ್ನು ಪೂಜಿಸಬೇಕು.

೩೭.೩೯. ಶುಭಾನನೇ! ವೈಶಾಖ ಮತ್ತು ಕಾರ್ತಿಕಮಾಸಗಳ ಅಕ್ಷ ತೃತೀಯಾದಿನದಲ್ಲಿ ರಾತ್ರಿ ಜಾಗರಣೆಮಾಡಿ, ಯವಾನ್ನ, ಎಳ್ಳು, ಸುವಾಸನೆ ಹೂವುಗಳು, ಕುಂಕುಮಾಗರುಗಂಧಗಳು, ತಲಸೀ, ಬಿಲ್ವಪತ್ರೆ ಮುಂತಾದುವುಗಳು, ಮಾದಾಳದ ಹಣ್ಣು ಮುಂತಾದ ಫಲಗಳು, ಧೂಪ ,ದೀಪ ಮತ್ತು ವಿಧ

ತುಲಸೀಬಿಲ್ವಪತ್ರಾದ್ಯೈರ್ಮಾತುಲುಂಗಫಲಾದಿಭಿಃ ।
ಧೂಪೈರ್ದೀಪೈಶ್ಚ ನೈವೇದ್ಯೈರ್ಯಥಾ ವಿಭವವಿಸ್ತರೈಃ ॥ ೩೯ ॥

ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿಶತಾನಿ ಚ ।
ದಿವ್ಯಂ ವಿಮಾನಮಾಸ್ಥಾಯ ವಿಷ್ಣುಲೋಕೇ ಮಹೀಯತೇ ॥ ೪೦ ॥

ತತೋ ಮಹೀತಲಂ ಪ್ರಾಪ್ಯ ರಾಜಾ ಭವತಿ ಧಾರ್ಮಿಕಃ ।
ಭುಕ್ತ್ವಾ ವಿವಿಧಸೌಖ್ಯಾನಿ ರೂಪಶೀಲಗುಣಾನ್ವಿತಃ ॥ ೪೧ ॥

ದೇಹಾಂತೇ ಜ್ಞಾನವಾನ್ ಭೂತ್ವಾ ಶಿವಸಾಯುಜ್ಯಮಾಪ್ನುಯಾತ್ ।
ಯಜ್ಞೋ ದಾನಂ ತಪೋ ಜಪ್ಯಂ ಶ್ರಾದ್ಧಂ ಚ ಸುರಪೂಜನಂ ॥ ೪೨ ॥

ಗಂಗಾಯಾಂ ತು ಕೃತಂ ಸರ್ವಂ ಕೋಟಿಕೋಟಿಗುಣಂ ಭವೇತ್ ।
ಯಸ್ತ್ವಕ್ಷಯತೃತೀಯಾಯಾಂ ಗಂಗಾತೀರೇ ದದಾತಿ ವೈ ॥ ೪೩ ॥

---

ನಾನುಸಾರವಾದ ಬಹುನೈವೇದ್ಯ ಪದಾರ್ಥಗಳು ಇವುಗಳಿಂದ ಭಕ್ತಿಪೂರ್ವಕವಾಗಿ ವಿಷ್ಣು, ಗಂಗೆ ಮತ್ತು ಈಶ್ವರರನ್ನೂ ಸಹ ಪೂಜಿಸಬೇಕು.

೪೦. ಹೀಗೆ ಪೂಜೆಮಾಡಿದ ಮನುಜನು ನೂರಾರು, ಸಾವಿರಾರು ಕೋಟಿ ಕಲ್ಪಗಳಕಾಲ ದಿವ್ಯವಿಮಾನದಲ್ಲಿ ತೆರಳಿ ವಿಷ್ಣುಲೋಕದಲ್ಲಿ ಸತ್ಕರಿಸಲ್ಪಡುವನು.

೪೧,೪೨. ತರುವಾಯ ಅವನು ಭೂಲೋಕಕ್ಕೆ ಬಂದು ಧರ್ಮಿಷ್ಠನಾದ ರಾಜನಾಗುವನು. ಇಲ್ಲಿ ಸೌಂದರ್ಯ, ಸದಾಚಾರಾದಿ ಸುಗುಣಗಳಿಂದ ಯುಕ್ತನಾಗಿ ನಾನಾವಿಧ ಸೌಖ್ಯಗಳನ್ನನುಭವಿಸಿ ಅಂತ್ಯಕಾಲದಲ್ಲಿ ಜ್ಞಾನಿಯಾಗಿ ಶಿವಸಾಯುಜ್ಯವನ್ನು ಪಡೆಯುವನು.

ಗಂಗೆಯಸನ್ನಿಧಿಯಲ್ಲಿ ಮಾಡಿದ ಯಜ್ಞ, ದಾನ, ತಪಸ್ಸು, ಜಪ, ಶ್ರಾದ್ಧ ಮತ್ತು ದೇವಪೂಜೆಗಳೆಲ್ಲವೂ ಕೋಟಿಕೋಟಿಪಾಲು ಹೆಚ್ಚುಫಲ ಕೊಡುವುದು.

ಅಕ್ಷಯ ತೃತೀಯೆದಿನದಲ್ಲಿ ವಿಧಾನೋಕ್ತಪ್ರಕಾರವಾಗಿ ಘೃತಧೇನುವನ್ನು ಗಂಗಾತೀರದಲ್ಲಿ ದಾನಮಾಡುವವನಿಗೆ ಬರುವ ಪುಣ್ಯಫಲವನ್ನು ಹೇಳುವೆನು

ಘೃತಧೇನುಂ ವಿಧಾನೇನ ತಸ್ಯ ಪುಣ್ಯಫಲಂ ಶೃಣು ।
ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿಶತಾನಿ ಚ ॥ ೪೪ ॥

ಸಹಸ್ರಾದಿತ್ಯಸಂಕಾಶಃ ಸರ್ವಕಾಮಸಮನ್ವಿತಃ ।
ಹೇಮರತ್ನಮಯೇ ಚಿತ್ರೇ ವಿಮಾನೇ ಹಂಸಭೂಷಿತೇ ॥ ೪೫ ॥

ಸ್ವಕೀಯಪಿತೃಭಿಃ ಸಾರ್ಧಂ ಬ್ರಹ್ಮಲೋಕೇ ಮಹೀಯತೇ ।
ತತಸ್ತು ಜಾಯತೇ ವಿಪ್ರೋ ಗಂಗಾತೀರೇ ಧನಾನ್ವಿತಃ ॥ ೪೬ ॥

ಅಂತೇ ತು ಬ್ರಹ್ಮವಿದ್ಭೂತ್ವಾ ಮೋಕ್ಷಮಾಪ್ನೋತ್ಯಸಂಶಯಃ ।
ತೀರ್ಥೇ ಚ ಗೋಪ್ರದಾನಂ ಚ ವಿಧಿನಾ ಕುರುತೇ ತು ಯಃ ॥ ೪೭ ॥

ಗೋರೋಮಸಂಖ್ಯವರ್ಷಾಣಿ ಸ್ವರ್ಗಲೋಕೇ ಮಹೀಯತೇ ।
ಜಾಯತೇ ಚ ಕುಲೇ ಪಶ್ಚಾದ್ಧನಧಾನ್ಯಸಮಾಕುಲೇ ॥ ೪೮ ॥

---

ಕೇಳು :—ಅವನು ಸಾವಿರಕೋಟಿ ಮತ್ತು ನೂರುಕೋಟಿ ಕಲ್ಪಗಳಕಾಲ ಸಾವಿರ ಸೂರ್ಯರಂತೆ ಹೊಳೆಯುತ್ತಾ ಸಕಲೇಷ್ಟಾರ್ಥಯುಕ್ತನಾಗಿ ಸುವರ್ಣರತ್ನಮಯವಾದ ಹಂಸದಿಂದಲಂಕರಿಸಲ್ಪಟ್ಟ ಚಿತ್ರವಿಮಾನದಲ್ಲಿ ತನ್ನ ಪಿತೃಗಳೊಡನೆ ಇದ್ದು ಬ್ರಹ್ಮಲೋಕದಲ್ಲಿ ಸತ್ಕರಿಸಲ್ಪಡುವನು. ಅನಂತರ ಅವನು ಗಂಗಾತೀರದಲ್ಲಿ ಶ್ರೀಮಂತನಾದ ಬ್ರಾಹ್ಮಣನಾಗಿ ಹುಟ್ಟುವನು.

೪೭-೪೮. ಕೊನೆಗೆ ಬ್ರಹ್ಮಜ್ಞಾನಿಯಾಗಿ ಮೋಕ್ಷವನ್ನು ಹೊಂದುವನು ಸಂದೇಹವಿಲ್ಲ. ತೀರ್ಥಸನ್ನಿಧಿಯಲ್ಲಿ ವಿಧಿವತ್ತಾಗಿ ಗೋದಾನಮಾಡುವವನು ಆ ಗೋವಿನ ಮೈಮೇಲಿನ ಕೂದಲುಗಳಷ್ಟು ವರ್ಷಗಳು ಸ್ವರ್ಗಲೋಕದಲ್ಲಿ ಭೋಗಿಸುವನು. ಅನಂತರ ಧನಧಾನ್ಯಪರಿಪೂರ್ಣವಾದ, ರತ್ನಕಾಂಚನ, ಭೂಮಿಗಳಿಂದ ಸಮೃದ್ಧಿಹೊಂದಿರುವ, ಒಳ್ಳೆಯ ನಡತೆ, ವಿದ್ಯೆ ಮತ್ತು ಯಶಸ್ಸುಗಳಿಂದ ಯುಕ್ತವಾದ ವಂಶದಲ್ಲಿ ಜನ್ಮತಾಳುವನು.

ರತ್ನಕಾಂಚನಭೂಪೂರ್ಣೇ ಶೀಲವಿದ್ಯಾಯಶೋನ್ವಿತೇ ।
ಸ ಭುಕ್ತ್ವಾ ವಿಪುಲಾನ್ ಭೋಗಾನ್ ಪುತ್ರಪೌತ್ರಸಮನ್ವಿತಃ ॥ ೪೯ ॥

ಮೋಕ್ಷಭಾಗೀ ಭವೇತ್ತತ್ರ ನಾತ್ರ ಕಾರ್ಯಾ ವಿಚಾರಣಾ ।
ಕಪಿಲಾ ಯದಿ ದತ್ತಾ ಸ್ಯಾದ್ವಿಧಿನಾ ವೇದಪಾರಗೇ ॥ ೫೦ ॥

ನರಕಸ್ಥಾನ್ ಪಿತೄನ್ ಸರ್ವಾನ್ ಸ್ವರ್ಗಂ ನಯತಿ ವೈ ತದಾ ।
ಭೂಮಿಂ ನಿವರ್ತನಮಿತಾಂ ಗಂಗಾತೀರೇ ದದಾತಿ ಯಃ ॥ ೫೧ ॥

ಭೂಮಿರೇಣುಪ್ರಮಾಣಾಬ್ದಂ ಬ್ರಹ್ಮವಿಷ್ಣುಶಿವಾತಿಗಃ ।
ಜಾಯತೇ ಚ ಪುನರ್ಭೂಮೌ ಸಪ್ತದ್ವೀಪಪತಿರ್ಭವೇತ್ ॥ ೫೨ ॥

ಭೇರೀಶಂಖಾದಿನಿರ್ಘೋಷೈರ್ಗೀತವಾದಿತ್ರನಿಃಸ್ವನೈಃ ।
ಸ್ತುತಿಭಿರ್ಮಾಗಧಾನಾಂ ಚ ಸುಪ್ತೋಽಸೌ ಪ್ರತಿಬುಧ್ಯತೇ ॥ ೫೩ ॥

---

೪೯-೫೦. ಆ ಜನ್ಮದಲ್ಲಿ ಅವನು ಪುತ್ರಪೌತ್ರ ಸಹಿತವಾಗಿ ಬಹುಭೋಗಗಳನ್ನನುಭವಿಸಿ ಬಳಿಕ ಮೋಕ್ಷಭಾಗಿಯಾಗುವನು. ಈ ವಿಷಯದಲ್ಲಿ ಸಂಶಯ ಪಡಬಾರದು.

೫೦-೫೧. ಅಲ್ಲಿ ವಿಧಾನೋಕ್ತರೀತಿಯಾಗಿ ವೇದಪಾರಂಗತನಿಗೆ ಕಪಿಲ ಗೋದಾನಮಾಡಿದರೆ ಕೂಡಲೇ ನರಕದಲ್ಲಿಬಿದ್ದಿದ್ದ ಅವನ ಪಿತೃಗಳಿಗೆಲ್ಲಾ ಸ್ವರ್ಗ ಪ್ರಾಪ್ತಿಯಾಗುತ್ತದೆ.

೫೧-೫೨. ಗಂಗೆಯತೀರದಲ್ಲಿ ನಿವರ್ತನ ಪರಿಮಿತವಾದ ಭೂಮಿಯನ್ನು ದಾನಮಾಡುವವನು, ಆ ಭೂಮಿಯಲ್ಲಿನ ಧೂಳಿಯ ಕಣಗಳಷ್ಟು ವರ್ಷಗಳವರೆಗೆ ಬ್ರಹ್ಮ ವಿಷ್ಣು ಶಿವಲೋಕಗಳಲ್ಲಿ ಭೋಗಿಸಿ ಪುನಃ ಭೂಲೋಕದಲ್ಲಿ ಜನಿಸಿ ಸಪ್ತದ್ವೀಪಾಧಿಪತಿಯಾಗುವನು.

೫೩. ಇವನು ರಾತ್ರಿ ಮಲಗಿದಮೇಲೆ ಪ್ರಾತಃಕಾಲದಲ್ಲಿ ನಗಾರಿ, ಶಂಖಗಳ ಧ್ವನಿ, ಗಾನವಾದ್ಯಗಳ ಧ್ವನಿ, ಮತ್ತು ಸ್ತುತಿಪಾಠಕರ ಸ್ತೋತ್ರಪಾಠ ಇವುಗಳಿಂದ ಎಚ್ಚರಗೊಳಿಸಲ್ಪಡುವನು.

ಸರ್ವಸೌಖ್ಯಾನ್ಯವಾಪ್ಯೇಹ ಸರ್ವಧರ್ಮಪರಾಯಣಃ |
ನರಕಸ್ಥಾನ್ ಪಿತೄನ್ ಸರ್ವಾನ್ ಪ್ರಾಪಯಿತ್ವಾ ದಿವಂ ತಥಾ || ೫೪ ||

ಸ್ವರ್ಗಸ್ಥಿತಾನ್ಮೋಕ್ಷಯಿತ್ವಾ ಸ್ವಯಂ ಜ್ಞಾನೀ ಚ ಮೋಹಿನಿ |
ಅಂತೇ ಜ್ಞಾನಾಸಿನಾ ಛಿತ್ವಾ ಅವಿದ್ಯಾಂ ಪಂಚಪರ್ವಿಕಾಂ || ೫೫ ||

ಪರಂ ವೈರಾಗ್ಯಮಾಪನ್ನಃ ಪರಂಬ್ರಹ್ಮಾಧಿಗಚ್ಛತಿ |
ಸಪ್ತಹಸ್ತೇನ ದಂಡೇನ ತ್ರಿಂಶದ್ದಂಡಾ ನಿವರ್ತನಂ || ೫೬ ||

ತ್ರಿಭಾಗಹೀನಂ ಗೋಚರ್ಮ ಮಾನಮಾಹ ವಿಧಿಃ ಸ್ವಯಂ |
ಗ್ರಾಮಂ ಗಂಗಾತಟೇ ಯೋ ವೈ ಬ್ರಾಹ್ಮಣೇಭ್ಯಃ ಪ್ರಯಚ್ಛತಿ || ೫೭ ||

ಬ್ರಹ್ಮವಿಷ್ಣುಶಿವಪ್ರೀತ್ಯೈ ದುರ್ಗಾಯಾ ಭಾಸ್ಕರಸ್ಯ ಚ |
ಸರ್ವದಾನೇಷು ಯತ್ಪುಣ್ಯಂ ಸರ್ವಯಜ್ಞೇಷು ಯತ್ಫಲಂ || ೫೮ ||

---

೫೪-೫೬. ಮೋಹಿನೀ! ಇವನು ಸಕಲಧರ್ಮನಿರತನಾಗಿ ಇಲ್ಲಿ ಸಕಲ ಸೌಖ್ಯಗಳನ್ನೂ ಹೊಂದಿ, ನರಕದಲ್ಲಿದ್ದ ಸಕಲಪಿತೃಗಳನ್ನೂ ಸ್ವರ್ಗಕ್ಕೆ ಹೋಗುವಂತೆಮಾಡಿ, ಸ್ವರ್ಗದಲ್ಲಿದ್ದ ಪಿತೃಗಳಿಗೆ ಮೋಕ್ಷವನ್ನು ಕೊಡಿಸಿ ತಾನೂ ಜ್ಞಾನವನ್ನು ಪಡೆದು, ಜ್ಞಾನವೆಂಬ ಖಡ್ಗದಿಂದ ಪಂಚಪರ್ವಯುಕ್ತವಾದ ಅವಿದ್ಯೆಯನ್ನು ಹೋಗಲಾಡಿಸಿಕೊಂಡು ಉತ್ತಮವೈರಾಗ್ಯವನ್ನು ಹೊಂದಿ ಪರಬ್ರಹ್ಮನನ್ನು ಹೊಂದುವನು.

ಏಳು ಹಸ್ತಗಳಷ್ಟು ಅಳತೆಯುಳ್ಳ ದಂಡದ ಮೂವತ್ತರಷ್ಟು ಎಂದರೆ ಇನ್ನೂರ ಹತ್ತು ಹಸ್ತ ಪರಿಮಾಣಕ್ಕೆ ನಿವರ್ತನವೆಂದು ಹೆಸರು.

೫೭-೫೯. ಅದರಲ್ಲಿ ಮೂರು ಭಾಗ ಕಮ್ಮಿಯಾಗಿ ಎಂದರೆ ಕಾಲು ಭಾಗದಷ್ಟನ್ನು ಗೋಚರ್ಮಪರಿಮಾಣವೆಂದು ಬ್ರಹ್ಮನು ಸಾಕ್ಷಾತ್ತಾಗಿ ಹೇಳಿರುವನು.

ಗಂಗೆಯ ತೀರದಲ್ಲಿ ಬ್ರಹ್ಮ, ವಿಷ್ಣು, ಶಿವ, ದುರ್ಗಾದೇವಿ ಮತ್ತು ಸೂರ್ಯ ಇವರುಗಳ ಪ್ರೀತ್ಯರ್ಥವಾಗಿ ಬ್ರಾಹ್ಮಣರಿಗೆ ಗ್ರಾಮದಾನ ಮಾಡುವವನು

ತಪೋವ್ರತೇಷು ಪುಣ್ಯೇಷು ಯತ್ಫಲಂ ಪರಿಕೀರ್ತಿತಂ ।
ಸಹಸ್ರಗುಣಿತಂ ತತ್ತು ವಿಜ್ಞೇಯಂ ಗ್ರಾಮದಾಯಿನಃ ॥ ೫೯ ॥

ಸೂರ್ಯಕೋಟಿಪ್ರತೀಕಾಶೇ ವಿಮಾನೇ ವೈಷ್ಣವೇ ಪುರೇ ।
ಕ್ರೀಡತೇ ಶಾಂಕರೇ ವಾಽಪಿ ಸ್ತುತೋ ದೇವಾದಿಭಿರ್ಮುದಾ ॥ ೬೦ ॥

ಭೂಮಿರೇಣೋಶ್ಚ ಸಂಖ್ಯಾಕಂ ಕಾಲಂ ಸ್ಥಿತ್ವಾ ಚ ತತ್ರ ಸಃ ।
ಅಣಿಮಾದಿಗುಣೈರ್ಯುಕ್ತೋ ಯೋಗಿನಾಂ ಜಾಯತೇ ಕುಲೇ ॥ ೬೧ ॥

ಅಕ್ಷಯಾಯಾಂ ತು ಯೋ ದೇವಿ ಸ್ವರ್ಣಂ ಷೋಡಶಮಾಷಕಂ ।
ದದಾತಿ ದ್ವಿಜಮುಖ್ಯಾಯ ಸೋಽಪಿ ಲೋಕೇಷು ಪೂಜ್ಯತೇ ॥ ೬೨ ॥

ಅನ್ನದಾನಾದ್ವಿಷ್ಣುಲೋಕಂ ಶೈವಂ ವೈ ತಿಲದಾನತಃ ।
ಬ್ರಾಹ್ಮ್ಯಂ ರತ್ನಪ್ರದಾನೇನ ಗೋಹಿರಣ್ಯೇನ ವಾಸವಂ ॥ ೬೩ ॥

---

ಸಕಲದಾನಗಳು, ಸಮಸ್ತ ಯಜ್ಞಗಳು, ತಪಸ್ಸು ಮತ್ತು ವ್ರತಗಳಿಂದ ಲಭಿಸುವ ಪುಣ್ಯ ಫಲಕ್ಕಿಂತ ಸಾವಿರಾರುಪಾಲು ಹೆಚ್ಚು ಫಲವನ್ನು ಹೊಂದುತಾನೆಂದು ತಿಳಿಯಬೇಕು.

೬೦. ಅವನು ವಿಷ್ಣುಲೋಕ ಅಥವಾ ಶಿವಲೋಕದಲ್ಲಿ ದೇವತೆಗಳು ಮುಂತಾದವರಿಂದ ಸ್ತುತಿಸಲ್ಪಟ್ಟವನಾಗಿ ಕೋಟಿ ಸೂರ್ಯರಂತೆ ಹೊಳೆಯುತ್ತಿರುವ ವಿಮಾನದಲ್ಲಿ ಸಂತೋಷದಿಂದ ಕ್ರೀಡಿಸುತ್ತಾನೆ.

೬೧. ಅಲ್ಲಿ ತಾನು ದಾನಮಾಡಿದ ಭೂಮಿಯರೇಣುಗಳಷ್ಟು ವರ್ಷಗಳ ಕಾಲ ಭೋಗಿಸಿ, ಅಣಿಮಾದಿ ಐಶ್ವರ್ಯಯುಕ್ತವಾದ ಯೋಗಿಕುಲದಲ್ಲಿ ಹುಟ್ಟುವನು.

೬೨. ದೇವಿಯೇ ! ಅಕ್ಷಯತೃತೀಯಾ ದಿನದಲ್ಲಿ ಹದಿನಾರು ಮಾಷ ಪರಿಮಿತವಾದ ಬಂಗಾರವನ್ನು ದ್ವಿಜವರ್ಯನಿಗೆ ದಾನಮಾಡುವ ಮನುಷ್ಯನೂ ಸಹ ಉತ್ತಮಲೋಕಗಳಲ್ಲಿ ಪೂಜಿಸಲ್ಪಡುವನು.

೬೩-೬೪. ಅನ್ನದಾನದಿಂದ ವಿಷ್ಣುಲೋಕ, ತಿಲದಾನದಿಂದ ಶಿವಲೋಕ, ರತ್ನದಾನದಿಂದ ಬ್ರಹ್ಮಲೋಕ, ಗೋವು ಮತ್ತು ಸುವರ್ಣಗಳ ದಾನದಿಂದ

ಗಾಂಧರ್ವಂ ಸ್ವರ್ಣವಾಸೋಭಿಃ ಕೀರ್ತಿಂ ಕನ್ಯಾಪ್ರದಾನತಃ ।
ವಿದ್ಯಯಾ ಮುಕ್ತಿದಂ ಜ್ಞಾನಂ ಪ್ರಾಪ್ಯ ಯಾಯಾನ್ನಿರಂಜನಂ ॥ ೬೪ ॥

ಗಂಗಾತೀರೇ ನರೋ ಯಸ್ತು ನಾನಾವೃಕ್ಷೈಃ ಸಮನ್ವಿತಂ ।
ಆರಾಮಂ ಕಾರಯೇದ್ಭಕ್ತ್ಯಾ ಗೃಹಂ ಚೋಪವನಾನ್ವಿತಂ ॥ ೬೫ ॥

ಕದಲೀನಾರಿಕೇಳೈಶ್ಚ ಕಪಿತ್ಥಾಶೋಕಚಂಪಕೈಃ ।
ಪನಸೈರ್ಬಿಲ್ವವೃಕ್ಷೈಶ್ಚ ಕದಂಬಾಶ್ವತ್ಥಪಾಟಲೈಃ ॥ ೬೬ ॥

ಆಮ್ರೈಸ್ತಾಲೈರ್ನಾಗರಂಗೈರ್ವೃಕ್ಷೈರನ್ಯೈಶ್ಚ ಸಂಯುತಂ ।
ಜಾತೀವಿಜಯಸಂಯುಕ್ತಂ ತಥಾ ಪಾಟಲರಾಜಿತಂ ।
ನಿಚಿತಂ ಕಾರಯಿತ್ವೈವಮಾವಾಸಂ ಪುಷ್ಪಶೋಭಿತಂ ॥ ೬೭ ॥

ಶಿವಾಯ ವಿಷ್ಣವೇ ವಾಪಿ ದುರ್ಗಾಯೈ ಭಾಸ್ಕರಾಯ ಚ ।
ಪ್ರಯಚ್ಛತಿ ತಥಾ ಭಕ್ತ್ಯಾ ಸರ್ವಾರ್ಥಂ ಪರಿಕಲ್ಪ್ಯ ಚ ॥ ೬೮ ॥

---

ಇಂದ್ರಲೋಕ, ಸುವರ್ಣ ಮತ್ತು ವಸ್ತ್ರಗಳಿಂದ ಗಂಧರ್ವಲೋಕ, ಕನ್ಯಾದಾನ ದಿಂದ ಕೀರ್ತಿ, ವಿದ್ಯಾದಾನದಿಂದ ಮುಕ್ತಿದಾಯಕವಾದ ಜ್ಞಾನ ಇವುಗಳನ್ನು ಹೊಂದಿ ನಿರ್ದೋಷವಾದ ಮುಕ್ತಿಯನ್ನು ಹೊಂದುವನು.

೬೫-೬೯. ಗಂಗಾತೀರದಲ್ಲಿ ಬಾಳೆ, ತೆಂಗು, ಬೇಲ, ಅಶೋಕ, ಸಂಪಿಗೆ, ಹಲಸು, ಬಿಲ್ವ, ಈಚಲು, ಅರಳಿ, ಪಾದರಿ, ಮಾವು, ತಾಳೆ, ಹೇರಳೆ ಮುಂತಾದ ನಾನಾವೃಕ್ಷಗಳಿಂದ ಸಹಿತವಾದ ತೋಟ ಮತ್ತು ಉಪವನಸಹಿತವಾದ ಗೃಹಗ ಳನ್ನು ಭಕ್ತಿಯಿಂದ ಮಾಡಿಸಿ ಅಲ್ಲಿ ಜಾಜಿ, ವಿಜಯ, ಪಾದರಿ ಮುಂತಾದ ಹೂವುಗಳಿಂದ ಅಲಂಕರಿಸಲ್ಪಟ್ಟ ಮಂಟಪವನ್ನು ಮಾಡಿಸಿ ಅಲ್ಲಿ ಸಕಲಪೂಜಾ ಸಾಮಗ್ರಿಯನ್ನೂ ಸಿದ್ಧಗೊಳಿಸಿ ಶಿವ ಅಥವಾ ವಿಷ್ಣು ಇಲ್ಲವೇ ದುರ್ಗೆ ಅಥವಾ ಸೂರ್ಯ ಈ ದೇವತೆಗಳಿಗೆ ಸಮರ್ಪಿಸುವವನ ಪುಣ್ಯಫಲವನ್ನು ಸಂಕ್ಷೇಪವಾಗಿ ಹೇಳುತ್ತೇನೆ, ವಿಸ್ತರಿಸುವುದಿಲ್ಲ.

ತಸ್ಯ ಪುಣ್ಯಫಲಂ ವಕ್ಷ್ಯೇ ಸಂಕ್ಷೇಪಾನ್ನ ತು ವಿಸ್ತರಾತ್ ।
ಯಾವಂತಿ ತೇಷಾಂ ವೃಕ್ಷಾಣಾಂ ಪುಷ್ಪಮೂಲಫಲಾನಿ ಚ ॥ ೬೯ ॥

ಬೀಜಾನಿ ಚ ವಿಚಿತ್ರಾಣಿ ತೇಷಾಂ ಮೂಲಾನಿ ವೈ ತಥಾ ।
ತಾವತ್ಕಲ್ಪಸಹಸ್ರಾಣಿ ತೇಷಾಂ ಲೋಕೇಷು ಸಂಸ್ಥಿತಿಃ ॥ ೭೦ ॥

ಇತಿ ಶ್ರೀನಾರದೀಯಮಹಾಪುರಾಣೋತ್ತರಭಾಗೇ ಮೋಹಿನೀ
ವಸುಸಂವಾದೇ ಗಂಗಾಮಾಹಾತ್ಮ್ಯೇ ದಾನಾದಿವಿಧಿವರ್ಣನಂ
ನಾಮೈಕಚತ್ವಾರಿಂಶತ್ತಮೋಽಧ್ಯಾಯಃ

---

೬೯-೭೦. ಅಂತಹವನಿಗೆ ಆ ತೋಟದಲ್ಲಿ ಹಾಕಿರುವ ವೃಕ್ಷಗಳ ಹೂವು, ಗೆಡ್ಡೆ, ಹಣ್ಣು, ನಾನಾವಿಧ ಬೀಜ ಮತ್ತು ಮೂಲಗಳು ಎಷ್ಟಿವೆಯೋ ಅಷ್ಟುಸಾವಿರ ಕಲ್ಪ ವರ್ಷಗಳು ಆಯಾಯಾ ದೇವತೆಗಳ ಲೋಕಗಳಲ್ಲಿ ಭೋಗವು ದೊರಕುವುದು.

ಇಂತು ಶ್ರೀನಾರದೀಯಪುರಾಣೋತ್ತರಭಾಗದೊಳು ಮೋಹಿನೀ ವಸುಸಂವಾದ
ದೊಳು ಗಂಗಾಮಾಹಾತ್ಮ್ಯೆಯ ಪ್ರಕರಣದಲ್ಲಿ ದಾನಾದಿಗಳ ವಿಧಾನ
ಕಥನೆಯೆಂಬ ನಲವತ್ತೊಂದನೆಯ ಅಧ್ಯಾಯವು
ಮುಗಿದುದು.

## ಕಥಾಸಾರಾಂಶ

ಗಂಗೆಯಲ್ಲಿ ಅವಗಾಹನಸ್ನಾನ ಮುಂತಾದ ಸ್ನಾನಗಳಫಲ, ತರ್ಪಣ, ಮಂತ್ರ ಜಪ ಮುಂತಾದುವುಗಳ ಫಲ, ಅಲ್ಲಿ ಮಾಡುವ ನಾನಾವಿಧ ದಾನಗಳ ಫಲ ಇವುಗಳು ಉಕ್ತವಾಗಿವೆ.

# ದ್ವಿಚತ್ವಾರಿಂಶೋಽಧ್ಯಾಯಃ

---

### ಮೋಹಿನ್ಯುವಾಚ

ಧನ್ಯಾಹಂ ಕೃತಕೃತ್ಯಾಹಂ ಸಫಲಂ ಜೀವಿತಂ ಮಮ ।
ಯಚ್ಛ್ರುತಂ ತ್ವನ್ಮುಖಾಂಭೋಜಾದ್ಗಂಗಾಮಾಹಾತ್ಮ್ಯಮುತ್ತಮಂ ॥೧॥

ಅಹೋ ಗಂಗಾಸಮಂ ತೀರ್ಥಂ ನಾಸ್ತಿ ಕಿಂಚಿದ್ಧರಾತಲೇ ।
ಯಸ್ಯಾಃ ಸಂದರ್ಶನಾದೀನಾಮೀದೃಶಂ ಪುಣ್ಯಮೀರಿತಂ ॥ ೨ ॥

ಗುಡಧೇನ್ವಾದಿಧೇನೂನಾಂ ವಿಧಾನಂ ಚ ಯಥಾಕ್ರಮಂ !
ತಥಾ ಕಥಯ ವಿಪ್ರೇಂದ್ರ ಭಕ್ತಾಹಂ ತವ ಸರ್ವದಾ ॥ ೩ ॥

---

## ನಲವತ್ತೆರಡನೆಯ ಅಧ್ಯಾಯ

೧. ಮೋಹಿನಿಯು ಹೇಳಿದಳು—ಬ್ರಾಹ್ಮಣನೇ ! ನಿನ್ನ ಮುಖ ಕಮಲದಿಂದ ಉತ್ತಮವಾದ ಗಂಗಾಮಾಹಾತ್ಮ್ಯೆಯನ್ನು ಕೇಳಿದುದರಿಂದ ನಾನು ಧನ್ಯಳಾದೆನು ! ಕೃತಕೃತ್ಯಳಾದೆನು ! ನನ್ನಜೀವಿತವು ಸಾರ್ಥಕವಾಯಿತು !

೨. ಆಶ್ಚರ್ಯ ! ಭೂಮಂಡಲದಲ್ಲಿ ಗಂಗೆಗೆ ಸಮಾನವಾದ ತೀರ್ಥವಾವುದೂ ಇಲ್ಲ ! ಅದರ ದರ್ಶನಾದಿಗಳಿಗೇ ಇಂತಹ ಪುಣ್ಯಫಲವು ಉಕ್ತವಾಗಿದೆ !

೩. ಬ್ರಾಹ್ಮಣವರ್ಯನೇ ! ನಾನು ಯಾವಾಗಲೂ ನಿನ್ನ ಭಕ್ತಳಾಗಿರುವೆನು. ಗುಡ ಧೇನು ಮುಂತಾದ ಧೇನುಗಳ ವಿಧಾನವನ್ನು ಕ್ರಮವಾಗಿ ನನಗೆ ಹೇಳು !

ವಸಿಷ್ಠ ಉವಾಚ

ತಚ್ಛ್ರುತ್ವಾ ಮೋಹಿನೀವಾಕ್ಯಂ ವಸುಸ್ತಸ್ಯಾಃ ಪುರೋಹಿತಃ ।
ವೇದಾಗಮಾನಾಂ ತತ್ವಜ್ಞಃ ಸ್ಮಯಮಾನ ಉವಾಚ ಹ ॥ ೪ ॥

ವಸುರುವಾಚ

ಶೃಣು ಮೋಹಿನಿ ವಕ್ಷ್ಯಾಮಿ ಯತ್ಪೃಷ್ಟಂ ಹಿ ತ್ವಯಾ ಮಮ ।
ಗುಡಧೇನುವಿಧಾನಂ ಚ ಯಥಾ ಶಾಸ್ತ್ರೇ ಪ್ರಕೀರ್ತಿತಂ ॥ ೫ ॥

ಕೃಷ್ಣಾಜಿನಂ ಚತುರ್ಹಸ್ತಂ ಪ್ರಾಗ್ಗ್ರೀವಂ ವಿನ್ಯಸೇದ್ಭುವಿ ।
ಗೋಮಯೇನೋಪಲಿಪ್ತಾಯಾಂ ಕುಶಾನಾಸ್ತೀರ್ಯ ಯತ್ನತಃ ॥ ೬ ॥

ಪ್ರಾಙ್ಮುಖೀಂ ಕಲ್ಪಯೇದ್ಧೇನುಮುದಕ್ಪಾದಾಂ ಸವತ್ಸಕಾಂ ।
ಉತ್ತಮಾ ಗುಡಧೇನುಸ್ತು ಚತುರ್ಭಾರೈಃ ಪ್ರಕೀರ್ತಿತಾ ॥ ೭ ॥

---

೪. ವಸಿಷ್ಠನು ಹೇಳಿದನು:—ಆ ಮೋಹಿನಿಯ ವಾಕ್ಯವನ್ನು ಕೇಳಿ ವೇದಾಗಮ ತತ್ವಜ್ಞನಾದ ಅವಳ ಪುರೋಹಿತನು ಆಶ್ಚರ್ಯಚಕಿತನಾಗಿ ಮಾತನಾಡಿದನು.

೫. ವಸುವು ಹೇಳಿದನು:—ಮೋಹಿನಿಯೇ! ನೀನು ಕೇಳಿದ ಗುಡಧೇನುವಿಧಾನವನ್ನು ಶಾಸ್ತ್ರೋಕ್ತಪ್ರಕಾರವಾಗಿ ಹೇಳುವೆನು ಕೇಳು.

೬. ಗೋಮಯದಿಂದ ಸಾರಿಸಿದ ನೆಲದಮೇಲೆ ದರ್ಭೆಗಳನ್ನು ಹರಡಿ ಅದರಮೇಲೆ ನಾಲ್ಕುಹಸ್ತ ಪರಿಮಿತಿಯುಳ್ಳ ಕೃಷ್ಣಾಜಿನವನ್ನು ಪೂರ್ವದಿಕ್ಕಿಗೆ ಕಂಠಭಾಗವು ಬರುವಂತೆ ಹಾಸಬೇಕು.

೭. ಅದರಮೇಲೆ ಉತ್ತರದಿಕ್ಕಿಗೆ ಪಾದಗಳು, ಪೂರ್ವಕ್ಕೆ ಮುಖವು ಬರುವಂತೆ ಕರುಸಹಿತವಾದ ಗೋವನ್ನು ಗುರ್ತಿಸಬೇಕು. ನಾಲ್ಕುಭಾರ (ಇಪ್ಪತ್ತು ತೊಲೆಗಳಿಗೆ ಒಂದು ಭಾರವೆಂದೂ, ನೂರು ಪಲಗಳಿಗೆ ಒಂದು ತೊಲೆಯೆಂದೂ ಹೆಸರು) ದಷ್ಟು ಗುಡದಿಂದ ಮಾಡಿದಗೋವು ಉತ್ತಮವು.

ವತ್ಸಂ ಭಾರೇಣ ಕುರ್ವೀತ ಭಾರಾಭ್ಯಾಂ ಮಧ್ಯಮಾ ಸ್ಮೃತಾ ।
ಅರ್ಧಭಾರೇಣ ವತ್ಸಃ ಸ್ಯಾತ್ಕನಿಷ್ಠಾ ಭಾರಕೇಣ ತು ॥ ೮ ॥

ಚತುರ್ಥಾಂಶೇನ ವತ್ಸಃ ಸ್ಯಾದ್ಗೃಹವಿತ್ತಾನುಸಾರತಃ ।
ಪ್ರಭುಃ ಪ್ರಥಮಕಲ್ಪಸ್ಯ ಯೋಽನುಕಲ್ಪೇನ ವರ್ತಯೇತ್ ॥ ೯ ॥

ನ ಸಾಂಪರಾಯಿಕಂ ತಸ್ಯ ದುರ್ಮತೇರ್ಜಾಯತೇ ಫಲಂ ।
ಧೇನುವತ್ಸೌ ಘೃತಸ್ಯೈತೌ ಸಿತಶ್ಲಕ್ಷ್ಣಾಂಬರಾವೃತೌ ॥ ೧೦ ॥

ಶುಕ್ತಿಕರ್ಣಾವಿಕ್ಷುಪಾದೌ ಶುದ್ಧಮುಕ್ತಾಫಲೇಕ್ಷಣೌ ।
ಸಿತಸೂತ್ರಸಿರಾಲೌ ಚ ಸಿತಕಂಬಲಕಂಬಲೌ ॥ ೧೧ ॥

ತಾಮ್ರಗಂಡೂಕಪೃಷ್ಠೌ ತೌ ಸಿತಚಾಮರಲೋಮಕೌ ।
ವಿದ್ರುಮಕ್ರಮುಕೋಪೇತೌ ನವನೀತಸ್ತನಾನ್ವಿತೌ ॥ ೧೨ ॥

---

೮-೯. ಒಂದುಭಾರ ಗುಡದಿಂದ ಕರುವನ್ನು ಮಾಡಬೇಕು. ಎರಡು ಭಾರ ಗುಡದಿಂದ ಗೋವನ್ನೂ, ಅರ್ಧಭಾರ ಗುಡದಿಂದ ಕರುವನ್ನೂ ಮಾಡುವುದು ಮಧ್ಯಮ ಕಲ್ಪ. ಒಂದುಭಾರ ಗುಡದ ಗೋವು ಮತ್ತು ಕಾಲುಭಾರ ಗುಡದ ಕರುಗಳು ಅಧಮಕಲ್ಪವೆಂದು ಉಕ್ತವಾಗಿದೆ. ಇವುಗಳಲ್ಲಿ ಅವನವನ ಐಶ್ವರ್ಯಾನುಸಾರವಾಗಿ ಉತ್ತಮ ಮಧ್ಯಮ ಅಧಮಕಲ್ಪಗಳನ್ನಾಶ್ರಯಿಸಬೇಕು.

೯-೧೪. ಉತ್ತಮಕಲ್ಪದಲ್ಲಿ ಮಾಡಲು ಯೋಗ್ಯತೆಯಿರುವವನು ಮಧ್ಯಮಾಧಮಕಲ್ಪಗಳನ್ನೂ, ಮಧ್ಯಮಕಲ್ಪಯೋಗ್ಯನು ಅಧಮಕಲ್ಪವನ್ನೂ ಆಶ್ರಯಿಸಿದರೆ ಅಂತಹ ದುರ್ಮತಿಗೆ ಮೋಕ್ಷಫಲವಾಗುವುದಿಲ್ಲ.

ಕಪ್ಪೇಚಿಪ್ಪಿನಿಂದ ಕಿವಿಗಳು, ಕಬ್ಬಿನಿಂದ ಪಾದಗಳು, ಶುದ್ಧ ಮುತ್ತುಗಳಿಂದ ಕಣ್ಣುಗಳು, ಸಕ್ಕರೆಯಿಂದ ಸೂತ್ರಸಿರಾಳಗಳು, ಸಕ್ಕರೆಯಿಂದ ಗಂಗೆ ತೊಗಲುಗಳು, ತಾಮ್ರದ ಗಂಡೂಕ ಹಿಂಭಾಗಗಳು, ಸಿತದ ಚಾಮರಲೋಮಗಳು, ಹವಳ ಅಡಿಕೆಗಳಿಂದ ಸಹಿತವಾದ ಬೆಣ್ಣೆಯ ಸ್ತನಗಳು, ಕಂಚಿನಕೆಚ್ಚಲು,

ಕಾಂಸ್ಯದೋಹಾವಿಂದ್ರನೀಲಮಣಿಕಲ್ಪಿತತಾರಕಾ |
ಸುವರ್ಣಶೃಂಗಾಭರಣೌ ಶುದ್ಧರೌಪ್ಯಖುರಾವುಭೌ || ೧೩ ||

ನಾನಾಫಲಸಮಾಯುಕ್ತೌ ಘ್ರಾಣಗಂಧಕರಂಡಕೌ |
ಇತ್ಯೇವಂ ರಚಯಿತ್ವಾ ತು ಧೂಪದೀಪೈರಥಾರ್ಚಯೇತ್ || ೧೪ ||

ಯಾ ಲಕ್ಷ್ಮೀಃ ಸರ್ವಭೂತಾನಾಂ ಯಾ ಚ ದೇವೇಷ್ವವಸ್ಥಿತಾ |
ಧೇನುರೂಪೇಣ ಸಾ ದೇವೀ ಮಮ ಶಾಂತಿಂ ಪ್ರಯಚ್ಛತು || ೧೫ ||

ದೇಹಸ್ಥಾ ಯಾ ಚ ರುದ್ರಾಣಾಂ ಶಂಕರಸ್ಯ ಸದಾ ಪ್ರಿಯಾ |
ಧೇನುರೂಪೇಣ ಸಾ ದೇವೀ ಮಮ ಪಾಪಂ ವ್ಯಪೋಹತು || ೧೬ ||

ವಿಷ್ಣೋರ್ವಕ್ಷಸಿ ಯಾ ಲಕ್ಷ್ಮೀಃ ಸ್ವಾಹಾರೂಪಾ ವಿಭಾವಸೋಃ |
ಚಂದ್ರಾರ್ಕಶಕ್ರಶಕ್ತಿರ್ಯಾ ಧೇನುರೂಪಾ ತು ಸಾ ಶ್ರಿಯೇ || ೧೭ ||

---

ಇಂದ್ರನೀಲಮಣಿಯಿಂದ ರಚಿತವಾದ ಕಣ್ಣುಗುಡ್ಡೆಗಳು, ಬಂಗಾರದ ಶೃಂಗಾಭರಣ, ಶುದ್ಧ ಬೆಳ್ಳಿಯ ಗೊರಸುಗಳು, ನಾನಾಫಲಸಮಾಯುಕ್ತವಾದ ನಾಸಾಪುಟದ್ವಯ ಇವುಗಳುಳ್ಳ ಘೃತದ ಗೋವು ಮತ್ತು ಕರುಗಳನ್ನು ಈರೀತಿಯಾಗಿ ಮಾಡಿಸಿ ಧೂಪದೀಪಗಳಿಂದ ಪೂಜಿಸಬೇಕು.

೧೫. ಸಕಲಪ್ರಾಣಿಗಳಿಗೂ ಐಶ್ವರ್ಯಪ್ರದಳಾದ, ದೇವತೆಗಳಲ್ಲಿ ಸನ್ನಿಹಿತಳಾಗಿರುವ ದೇವಿಯು ಗೋರೂಪದಿಂದ ನನಗೆ ಶಾಂತಿಯನ್ನು ಕೊಡಲಿ!

೧೬. ರುದ್ರರ ದೇಹದಲ್ಲಿರುವ, ಯಾವಾಗಲೂ ಶಂಕರನಿಗೆ ಪ್ರಿಯಳಾದ ದೇವಿಯು ಧೇನುರೂಪದಿಂದ ನನ್ನ ಪಾಪವನ್ನು ಪರಿಹರಿಸಲಿ!

೧೭. ವಿಷ್ಣುವಿನ ವಕ್ಷಸ್ಥಳದಲ್ಲಿರುವ ಲಕ್ಷ್ಮೀದೇವಿಯು, ಅಗ್ನಿಪತ್ನಿಯಾದ ಸ್ವಾಹಾದೇವಿಯು, ಚಂದ್ರ ಸೂರ್ಯ ಮತ್ತು ಇಂದ್ರರ ಶಕ್ತಿಗಳು ಇವರೆಲ್ಲರೂ ಗೋರೂಪರಾಗಿ ನನಗೆ ಸಂಪತ್ಪ್ರದರಾಗಲಿ!

ಅಯನೇ ವಿಷುವೇ ಪುಣ್ಯೇ ವ್ಯತೀಪಾತೇಥವಾ ಪುನಃ ।
ಯುಗಾದೌ ಚೈವ ಮನ್ವಾದೌ ಚೋಪರಾಗಾದಿಪರ್ವಸು ॥ ೨೮ ॥

ಗುಡಧೇನ್ವಾದಯೋ ದೇಯಾ ಭಕ್ತಿಶ್ರದ್ಧಾಸಮನ್ವಿತೈಃ ।
ತೀರ್ಥೇಷು ಸ್ವಗೃಹೇ ವಾಪಿ ಗಂಗಾತೀರೇ ವಿಶೇಷತಃ ॥ ೨೯ ॥

ಏವಂ ದತ್ವಾ ವಿಧಾನೇನ ಧೇನುಂ ದ್ವಿಜವರಾಯ ಚ ।
ಪ್ರದಕ್ಷಿಣೀಕೃತ್ಯ ವಿಪ್ರಂ ದಕ್ಷಿಣಾಭಿಃ ಪ್ರತೋಷ್ಯ ಚ ॥ ೩೦ ॥

ಋತ್ವಿಜಃ ಪ್ರೀತಿಸಂಯುಕ್ತೋ ನಮಸ್ಕೃತ್ಯ ವಿಸರ್ಜಯೇತ್ ।
ತತಃ ಸಂಪೂಜಯೇದ್ಗಂಗಾಂ ವಿಧಿನಾ ಸುಸಮಾಹಿತಃ ॥ ೩೧ ॥

---

ಲೋಕದಲ್ಲಿ ಭೋಗ, ಪರಲೋಕದಲ್ಲಿ ಮೋಕ್ಷಗಳನ್ನೂ, ಅನೇಕ ಯಜ್ಞಫಲಗಳನ್ನೂ ಕೊಡುತ್ತವೆ. ಮತ್ತು ಸಕಲಪಾಪಗಳನ್ನೂ ಪರಿಹರಿಸಿ ಮಂಗಳದಾಯಕಗಳಾಗುತ್ತವೆ.

೨೮-೨೯. ದಕ್ಷಿಣಾಯನ, ವಿಷುವಪುಣ್ಯಕಾಲ, ವ್ಯತೀಪಾತ ಅಥವಾ ಯುಗಾದಿ, ಮನ್ವಾದಿ ಮತ್ತು ಗ್ರಹಣ ಮುಂತಾದ ಪರ್ವಕಾಲಗಳಲ್ಲಿ ತೀರ್ಥಗಳಲ್ಲಿ ಅಥವಾ ಸ್ವಗೃಹದಲ್ಲಿ ವಿಶೇಷವಾಗಿ ಗಂಗಾತೀರದಲ್ಲಿ ಭಕ್ತಿಶ್ರದ್ಧಾಯುಕ್ತರಾಗಿ ಗುಡಧೇನ್ವಾದಿಗಳನ್ನು ದಾನಮಾಡಬೇಕು.

೩೦-೩೧. ಈರೀತಿ ವಿಧಾನೋಕ್ತಪ್ರಕಾರವಾಗಿ ಶ್ರೇಷ್ಠನಾದ ಬ್ರಾಹ್ಮಣನಿಗೆ ಗೋವನ್ನು ಕೊಟ್ಟು, ಆ ಬ್ರಾಹ್ಮಣನನ್ನು ದಕ್ಷಿಣೆ ಮುಂತಾದುವುಗಳಿಂದ ಸಂತೋಷಪಡಿಸಿ, ಪ್ರದಕ್ಷಿಣೆಮಾಡಿ ಭಕ್ತಿಯಿಂದ ನಮಸ್ಕರಿಸಿ ಋತ್ವಿಕ್ಕುಗಳನ್ನು ವಿಸರ್ಜನೆಮಾಡಬೇಕು. ಅನಂತರ ಮನಸ್ಸನ್ನು ಒಂದೆಡೆಯಲ್ಲಿರಿಸಿ ಗಂಗೆಯನ್ನು ವಿಧಿವತ್ತಾಗಿ ಪೂಜಿಸಬೇಕು.

ಅಷ್ಟಮೂರ್ತಿಧರಾಂ ದೇವೀಂ ದಿವ್ಯರೂಪಾಂ ನಿರೀಕ್ಷ್ಯ ಚ ।
ಶಾಲಿತಂಡುಲಪ್ರಸ್ಥೇನ ದ್ವಿಪ್ರಸ್ಥಪಯಸಾ ತಥಾ ॥ ೩೨ ॥

ಪಾಯಸಂ ಕಾರಯಿತ್ವಾ ಚ ದತ್ವಾ ಮಧು ಘೃತಂ ತಥಾ ।
ಪ್ರತ್ಯೇಕಂ ಪಲಮಾತ್ರಂ ಚ ಭಕ್ತಿಭಾವೇನ ಸಂಯುತಃ ॥ ೩೩ ॥

ತತ್ಪಾಯಸಮಪೂಪಾಂಶ್ಚ ಮೋದಕಾ ಮಂಡಲಾನಿ ಚ ।
ತಥಾ ಗುಂಜಾರ್ಧಮಾತ್ರಂ ಚ ಸುವರ್ಣಂ ರೂಪ್ಯಮೇವ ಚ ॥ ೩೪ ॥

ಚಂದನಾಗರುಕರ್ಪೂರಕುಂಕುಮಾನಿ ಚ ಗುಗ್ಗುಲಂ ।
ಬಿಲ್ವಪತ್ರಾಣಿ ದೂರ್ವಾಂ ಚ ರೋಚನಾಂ ಸಿತಚಂದನಂ ॥ ೩೫ ॥

ನೀಲೋತ್ಪಲಾನಿ ಚಾನ್ಯಾನಿ ಪುಷ್ಪಾಣಿ ಸುರಭೀಣಿ ಚ ।
ಯಥಾಶಕ್ತ್ಯಾ ಮಹಾಭಕ್ತ್ಯಾ ಗಂಗಾಯಾಂ ಚೈವ ನಿಕ್ಷಿಪೇತ್ ॥ ೩೬ ॥

ಮಂತ್ರೇಣಾನೇನ ಸುಭಗೇ ಪುರಾಣೋಕ್ತೇನ ಚಾಪಿ ಹಿ ।
ಗಂಗಾಯೈ ನಾರಾಯಣ್ಯೈ ಶಿವಾಯೈ ಚ ನಮೋ ನಮಃ ॥ ೩೭ ॥

---

೩೨-೩೭. ಅಷ್ಟಮೂರ್ತಿಗಳನ್ನು ಧರಿಸುವ ದಿವ್ಯರೂಪಿಯಾದ ದೇವಿಯನ್ನು ಪರೀಕ್ಷಿಸಿ, ಒಂದುಬಳ್ಳ ಅಕ್ಕಿ ಮತ್ತು ಎರಡುಬಳ್ಳ ಹಾಲುಗಳಿಂದ ಪಾಯಸವನ್ನು ಮಾಡಿಸಿ, ಅದನ್ನೂ, ಜೇನುತುಪ್ಪ ಮತ್ತು ತುಪ್ಪಗಳನ್ನೂ ಸಹ ದಾನಮಾಡಿ, ಭಕ್ತಿಭಾವದಿಂದ ಒಂದುಪಲ ಪಾಯಸ, ಅಪೂಪಗಳು, ಕಡುಬುಗಳು, ಚಕ್ಕುಲಿಗಳು, ಅರ್ಧಗುಲಗಂಜಿಯ ತೂಕ ಬಂಗಾರ, ಬೆಳ್ಳಿ, ಗಂಧ, ಅಗರು, ಕರ್ಪೂರ, ಕುಂಕುಮ, ಗುಗ್ಗುಲ, ಬಿಲ್ವಪತ್ರೆ, ಗರಿಕೆ, ಗೋರೋಜನ, ಶುಕ್ಲಗಂಧ, ಕನ್ನೈದಿಲೆ ಪುಷ್ಪಗಳು ಮತ್ತು ಇತರ ಸುಗಂಧಪುಷ್ಪ ಇವುಗಳನ್ನು ಅತ್ಯಂತ ಭಕ್ತಿಪೂರ್ವಕವಾಗಿ “ಗಂಗಾಯೈ, ನಾರಾಯಣ್ಯೈ, ಶಿವಾಯೈಚ ನಮೋನಮಃ” (ನಾರಾಯಣ ಮತ್ತು ಶಿವಸಂಬಂಧಿಯಾದ ಗಂಗೆಗೆ ನಮಸ್ಕಾರ!) ಎಂಬ ಪುರಾಣೋಕ್ತವಾದ ಮಂತ್ರದಿಂದ ತನ್ನ ಶಕ್ತ್ಯನುಸಾರವಾಗಿ ಗಂಗೆಯಲ್ಲಿ ಹಾಕಬೇಕು.

ಏತದೇವ ವಿಧಾನಂ ತು ಮಾಸಿ ಮಾಸಿ ಚ ಮೋಹಿನಿ ।
ಪೌರ್ಣಮಾಸ್ಯಾಮಮಾಯಾಂ ವಾ ಕಾರ್ಯಂ ಪ್ರಾತಃ ಸಮಾಹಿತೈಃ ॥೩೮॥

ವರ್ಷಂ ಯಸ್ತು ನರೋ ಭಕ್ತ್ಯಾ ಯಥಾಶಕ್ತ್ಯರ್ಚಯನ್ಮುದಾ ।
ಹವಿಷ್ಯಾಶೀ ಮಿತಾಹಾರೋ ಬ್ರಹ್ಮಚರ್ಯಸಮನ್ವಿತಃ ॥ ೩೯ ॥

ದಿನೇ ವಾಪಿ ತಥಾ ರಾತ್ರೌ ನಿಯಮೇನ ಚ ಮೋಹಿನಿ ।
ಸಂವತ್ಸರಾಂತೇ ತಸ್ಯೈಷಾ ಗಂಗಾ ದಿವ್ಯವಪುರ್ಧರಾ ॥ ೪೦ ॥

ದಿವ್ಯಮಾಲ್ಯಾಂಬರಾ ಚೈವ ದಿವ್ಯರತ್ನವಿಭೂಷಿತಾ ।
ಪ್ರತ್ಯಕ್ಷರೂಪಾ ಪುರತಸ್ತಿಷ್ಠತ್ಯೇವ ವರಪ್ರದಾ ॥ ೪೧ ॥

ಏವಂ ಪ್ರತ್ಯಕ್ಷರೂಪಾಂ ತಾಂ ಗಂಗಾಂ ದಿವ್ಯವಪುರ್ಧರಾಂ ।
ದೃಷ್ಟ್ವಾ ಸ್ವಚಕ್ಷುಷಾ ಮರ್ತ್ಯಃ ಕೃತಕೃತ್ಯೋ ಭವೇಚ್ಛುಭೇ ॥ ೪೨ ॥

---

೩೮. ಮೋಹಿನೀ! ಈ ವಿಧಾನವನ್ನೇ ಪ್ರತಿತಿಂಗಳ ಪೂರ್ಣಿಮಾ ಅಥವಾ ಅಮಾವಾಸ್ಯೆಯ ದಿನಗಳಲ್ಲಿ ಸಮಾಧಾನಮನಸ್ಸಿನಿಂದ ಪ್ರಾತಃಕಾಲದಲ್ಲಿ ಮಾಡಬೇಕು.

೩೯-೪೧. ಮೋಹಿನೀ! ಈರೀತಿ ಭಕ್ತಿಯಿಂದ ಹವಿಷ್ಯಭೋಕ್ತೃವು, ಮಿತಾಹಾರನು, ಬ್ರಹ್ಮಚರ್ಯಯುಕ್ತನೂ ಆಗಿ ಒಂದು ವರ್ಷ ಸಂತೋಷವಾಗಿ ಗಂಗೆಯನ್ನು ಪೂಜಿಸುವ ಮನುಷ್ಯನಿಗೆ ವರ್ಷಾಂತ್ಯದಲ್ಲಿ ಹಗಲು ಅಥವಾ ರಾತ್ರಿ ಕಾಲದಲ್ಲಿ ಈ ಗಂಗಾದೇವಿಯು ದಿವ್ಯರೂಪವನ್ನೂ, ಮನೋಹರ ಮಾಲ್ಯವಸ್ತ್ರಗಳನ್ನೂ ಧರಿಸಿ ಸುಂದರ ರತ್ನಗಳಿಂದಲಂಕೃತಳಾಗಿ ಇದಿರಿಗೆ ಒಂದುನಿಂತು ವರಪ್ರದಳಾಗುವಳು.

೪೨. ಶೋಭನೇ! ಈರೀತಿ ಸುಂದರಶರೀರವನ್ನು ಧರಿಸಿ ಪ್ರತ್ಯಕ್ಷಳಾದ ಆ ಗಂಗಾದೇವಿಯನ್ನು ತನ್ನ ಕಣ್ಣುಗಳಿಂದ ನೋಡಿದ ಮನುಜನು ಕೃತಕೃತ್ಯನಾಗುವನು.

ಯೋನ್ಯಾರ್ಥ ಕಾಮಯತೇ ಮರ್ತ್ಯಃ ಕಾಮಾಂಸ್ತಾಂಸ್ತಾನವಾಪ್ನುಯಾತ್ ।
ನಿಷ್ಕಾಮಸ್ತು ಲಭೇನ್ಮೋಕ್ಷಂ ವಿಪ್ರಸ್ತೇನೈವ ಜನ್ಮನಾ ॥ ೪೩ ॥

ಏತದ್ವಿಧಾನಂ ಚ ಮಯೋದಿತಂ ತೇ
ಪೃಷ್ಟಂ ಹಿ ಸರ್ವಂ ಗುಡಧೇನುಪೂರ್ವಂ ।
ಗಂಗಾರ್ಚನಂ ಮುಕ್ತಿಕರಂ ವ್ರತಂ ಚ
ಸಾಂವತ್ಸರಂ ಶ್ರೀಪತಿತುಷ್ಟಿದಂ ಹಿ ॥ ೪೪ ॥

ಇತಿ ಶ್ರೀನಾರದೀಯಮಹಾಪುರಾಣೋತ್ತರಭಾಗೇ ಮೋಹಿನೀ
ವಸುಸಂವಾದೇ ಗಂಗಾಮಾಹಾತ್ಮ್ಯೇ ಗುಡಧೇನುವಿಧಿಕಥನಂ
ನಾಮ ದ್ವಿಚತ್ವಾರಿಂಶತ್ತಮೋಽಧ್ಯಾಯಃ

---

೪೩. ಅಂತಹ ಮನುಷ್ಯನು ಅದರಿಂದ ತಾನು ಬಯಸುವ ಸಕಲೇಷ್ಟಾರ್ಥಗಳನ್ನೂ ಹೊಂದುವನು. ನಿಷ್ಕಾಮನಾದ ಬ್ರಾಹ್ಮಣನು ಅದೇಜನ್ಮದಲ್ಲಿಯೇ ಮೋಕ್ಷವನ್ನು ಹೊಂದುವನು.

೪೪. ಮೋಹಿನೀ! ನೀನು ಕೇಳಿದುದೆಲ್ಲವನ್ನೂ ಗುಡಧೇನು ವಿಧಾನ ಪೂರ್ವಕವಾಗಿ, ಮುಕ್ತಿಪ್ರದವಾದ, ಶ್ರೀಪತಿಯ ಅನುಗ್ರಹವನುಂಟುಮಾಡುವ, ಒಂದುವರ್ಷಕಾಲ ಆಚರಿಸಬೇಕಾದ ಗಂಗಾರ್ಚನೆಯ ವ್ರತವಿಧಾನವನ್ನೂ ಹೇಳಿರುವೆನು.

ಇಂತು ಶ್ರೀನಾರದೀಯಪುರಾಣೋತ್ತರಭಾಗದಲ್ಲಿ ಮೋಹಿನೀ ವಸುಸಂವಾದ
ದೊಳು ಗಂಗೆಯ ಮಾಹಾತ್ಮ್ಯೆಯ ಪ್ರಕರಣದಲ್ಲಿ ಗುಡಧೇನುವಿಧಾನ
ಕಥನೆಯೆಂಬ ನಲವತ್ತೆರಡನೆಯ ಅಧ್ಯಾಯವು
ಮುಗಿದುದು.

### ಕಥಾಸಾರಾಂಶ

ಗುಡಧೇನು ಮುಂತಾದ ಹತ್ತುವಿಧವಾದ ಧೇನುವಿಧಾನ ಎಂದರೆ ಅವುಗಳನ್ನು ರಚಿಸುವ ಕ್ರಮ ಪೂಜೆ ದಾನ ಇವುಗಳನ್ನೂ, ಸಾಂವತ್ಸರಿಕವಾದ ಗಂಗಾರ್ಚನೆಯ ವ್ರತವನ್ನೂ ಸಹ ಸಪರಿಕರವಾಗಿ ವಿವರಿಸಿದೆ.

# ತ್ರಿಚತ್ವಾರಿಂಶೋಽಧ್ಯಾಯಃ

ವಸಿಷ್ಠ ಉವಾಚ

ವಸೋರ್ವಚಿನಮಾಕರ್ಣ್ಯ ಗಂಗಾಮಾಹಾತ್ಮ್ಯಸೂಚಕಂ ।
ಪುನಃ ಪಪ್ರಚ್ಛ ರಾಜೇಂದ್ರ ತಂ ವಿಪ್ರಂ ಸ್ವಪುರೋಹಿತಂ ॥ ೧ ॥

ಮೋಹಿನ್ಯುವಾಚ

ಶ್ರುತಂ ವಿಪ್ರ ಮಯಾ ಸರ್ವಂ ಗೋದಾನಾದಿ ಶುಭಾವಹಂ ।
ಅಧುನಾ ಶ್ರೋತುಮಿಚ್ಛಾಮಿ ಗಂಗಾವ್ರತಮನುತ್ತಮಂ ॥ ೨ ॥

ಸ್ವರ್ಣದೀನಾಂ ಪೂಜನಂ ಚ ಸ್ಥಾಪನಂ ತತ್ರ ವಾ ದ್ವಿಜ ।
ಕಿಂ ಫಲಂ ವದ ಸರ್ವಜ್ಞ ತ್ವಾಮಹಂ ಶರಣಂ ಗತಾ ॥ ೩ ॥

---

## ನಲವತ್ತುಮೂರನೆಯ ಅಧ್ಯಾಯ

೧. ವಸಿಷ್ಠನು ಹೇಳಿದನು :—ರಾಜೇಂದ್ರನೇ! ಗಂಗಾಮಹಿಮೆಯನ್ನು ತಿಳಿಸಿದ ವಸುವಿನಮಾತನ್ನು ಕೇಳಿ ಮೋಹಿನಿಯು ತನ್ನ ಪುರೋಹಿತನಾದ ಆ ಬ್ರಾಹ್ಮಣನನ್ನು ಕುರಿತು ಪುನಃ ಕೇಳಿದಳು.

೨-೩. ಮೋಹಿನಿಯು ಹೇಳಿದಳು :—ಬ್ರಾಹ್ಮಣನೇ! ಮಂಗಳಕರವಾದ ಗೋದಾನಾದಿ ವಿದಾನವನ್ನೆಲ್ಲಾ ಕೇಳಿದೆನು. ಈಗ ಸರ್ವೋತ್ತಮವಾದ ಗಂಗಾವ್ರತ, ಗಂಗೆಯಪೂಜೆ ಮತ್ತು ಸ್ಥಾಪನೆಗಳ ವಿಧಾನವನ್ನು ತಿಳಿಯಲಿಚ್ಛಿಸುವೆನು. ಸರ್ವಜ್ಞನಾದ ದ್ವಿಜನೇ! ಅವುಗಳಿಗೇನು ಫಲ? ನನಗೆ ತಿಳಿಸು. ನಾನು ನಿನ್ನನ್ನೇ ಶರಣುಹೊಂದಿರುವೆನು.

ಅಧುನಾ ಗತಿದಾತಾ ತ್ವಂ ವರ್ಜಿತಾಯಾಶ್ಚ ಬಂಧುಭಿಃ ।
ಪತ್ಯಾ ವಿರಹಿತಾ ಚಾಹಂ ಪುತ್ರಹೀನಾ ವಿದಾಂವರ ॥ ೪ ॥

ತ್ವಾಮೇವ ಶರಣಂ ಪ್ರಾಪ್ತಾ ಪಿತುರ್ವಚನಗೌರವಾತ್ ।
ತದ್ಭವಾನ್ ಪ್ರಣತಾಯಾ ಮೇ ಗಂಗಾಮಾಹಾತ್ಮ್ಯಸಂಯುತಂ ॥ ೫ ॥

ದೇವತಾರಾಧನಂ ಬ್ರೂಹಿ ಯಚ್ಛ್ರುತ್ವಾ ಮುಚ್ಯತೇ ಹ್ಯಘಾತ್ ।

ವಸಿಷ್ಠ ಉವಾಚ

ತಚ್ಛ್ರುತ್ವಾ ಮೋಹಿನೀವಾಕ್ಯಂ ವಸುರ್ವಿಪ್ರಃ ಪ್ರತಾಪವಾನ್ ॥ ೬ ॥

ಸಭಾಜ್ಯ ಮೋಹಿನೀಂ ಭೂಪ ಪ್ರಾಹ ವೇದವಿದಾಂ ವರಃ ।

ವಸುರುವಾಚ

ಸಾಧು ಪೃಷ್ಟಂ ತ್ವಯಾ ದೇವಿ ಲೋಕಾನಾಂ ಹಿತಕಾಮ್ಯಯಾ ॥ ೭ ॥

---

೪-೫. ಬಂಧುಗಳಿಂದ ಬಿಡಲ್ಪಟ್ಟ ನನಗೆ ಈಗ ನೀನೇ ಗತಿದಾಯಕನು. ಜ್ಞಾನಿಶ್ರೇಷ್ಠನೇ! ನಾನು ಪತಿವಿರಹಿತಳು ಮತ್ತು ಪುತ್ರಹೀನಳೂ ಆಗಿ ತಂದೆಯಮಾತಿನ ಗೌರವದಿಂದ ನಿನ್ನನ್ನೇ ಶರಣುಹೊಂದಿರುವೆನು. ಆದಕಾರಣ ನಮಸ್ಕರಿಸಿ ಪ್ರಾರ್ಥಿಸಿಕೊಳ್ಳುತ್ತಿರುವ ನನಗೆ ಯಾವುದನ್ನು ಶ್ರವಣಮಾಡಿದರೆ ಪಾಪವಿಮೋಚನೆಯಾಗುವುದೋ ಅಂತಹ ಗಂಗಾಮಾಹಾತ್ಮ್ಯ ಸಹಿತವಾದ ದೇವತಾರಾಧನೆಯನ್ನು ಉಪದೇಶಿಸು.

೬. ವಸಿಷ್ಠನು ಹೇಳಿದನು :—ಮೋಹಿನಿಯು ಆ ಮಾತನ್ನು ಕೇಳಿ ವೇದಜ್ಞಾನಿವರೇಣ್ಯನು, ಪ್ರತಾಪಶಾಲಿಯೂ ಆದ ವಸುವೆಂಬ ಬ್ರಾಹ್ಮಣನು ಮೋಹಿನಿಯನ್ನು ಗೌರವಿಸಿ ಹೇಳಿದನು.

೭. ವಸುವು ಹೇಳಿದನು :—ದೇವಿಯೇ! ಲೋಕಕ್ಕೆ ಹಿತವಾಗಲೆಂಬ ಅಭಿಲಾಷೆಯಿಂದ ನೀನು ಮಾಡಿರುವ ಪ್ರಶ್ನೆಯು ಸಾಧುವಾದುದು!

ಗಂಗಾಮಾಹಾತ್ಮ್ಯಮಖಿಲಂ ಮಹಾಪಾಪಪ್ರಣಾಶನಂ ।
ವೃಷಧ್ವಜೇನ ಕಥಿತಂ ಶಿವೇನ ದಯಯಾ ಪುರಾ ॥ ೮ ॥

ಪ್ರೀತ್ಯಾ ದೇವ್ಯಾಭಿಪೃಷ್ಟೇನ ಗಂಗಾತೀರನಿವಾಸಿನಾ ।
ದೇವೈಸ್ತು ಭುಕ್ತಂ ಪೂರ್ವಾಹ್ಣೇ ಮಧ್ಯಾಹ್ನೇ ಋಷಿಭಿಸ್ತಥಾ ॥ ೯ ॥

ಅಪರಾಹ್ಣೇ ಚ ಪಿತೃಭಿಃ ಶರ್ವರ್ಯಾಂ ಗುಹ್ಯಕಾದಿಭಿಃ ।
ಸರ್ವಾ ವೇಲಾ ಅತಿಕ್ರಮ್ಯ ನಕ್ತಭೋಜನಮುತ್ತಮಂ ॥ ೧೦ ॥

ಉಪವಾಸಾದ್ವರಂ ಭೈಕ್ಷ್ಯಂ ಭೈಕ್ಷ್ಯಾದ್ವರಮಯಾಚಿತಂ ।
ಅಯಾಚಿತಾದ್ವರಂ ನಕ್ತಂ ತಸ್ಮಾನ್ನಕ್ತಾಂ ಸಮಾಚರೇತ್ ॥ ೧೧ ॥

ಹವಿಷ್ಯಭೋಜನಂ ಸ್ನಾನಂ ಸತ್ಯಮಾಹಾರಲಾಘವಂ ।
ಅಗ್ನಿಕಾರ್ಯಮಧಃಶಯ್ಯಾಂ ನಕ್ತಾಶೀ ಷಟ್ ಸಮಾಚರೇತ್ ॥ ೧೨ ॥

---

೮-೯. ಪೂರ್ವದಲ್ಲಿ ದೇವಿಯಿಂದ ಪ್ರೀತಿಪೂರ್ವಕವಾಗಿ ಪ್ರಶ್ನಿಸಲ್ಪಟ್ಟ, ಗಂಗಾತೀರನಿವಾಸಿಯಾದ, ವೃಷಧ್ವಜನಾದ ಈಶ್ವರನು ದಯೆಮಾಡಿ ಮಹಾಪಾಪ ನಾಶಕವಾದ ಗಂಗಾಮಾಹಾತ್ಮ್ಯೆಯೆಲ್ಲವನ್ನೂ ಹೇಳಿರುವನು.

೯-೧೦. ದೇವತೆಗಳು ಪೂರ್ವಾಹ್ಣದಲ್ಲಿಯೂ, ಋಷಿಗಳು ಮಧ್ಯಾಹ್ನದಲ್ಲಿಯೂ, ಪಿತೃಗಳು ಅಪರಾಹ್ಣದಲ್ಲಿಯೂ, ಗುಹ್ಯಕಾದಿಗಳು ರಾತ್ರಿಯಲ್ಲಿಯೂ ಭೋಜನ ಮಾಡುವರು. ಆದುದರಿಂದ ಈ ಸಕಲಕಾಲಗಳನ್ನೂ ಬಿಟ್ಟು ನಕ್ತ ಭೋಜನಮಾಡುವುದು ಉತ್ತಮ.

೧೧. ಉಪವಾಸಕ್ಕಿಂತಲೂ ಭೈಕ್ಷಾಶನವು ಉತ್ತಮ. ಅದಕ್ಕಿಂತಲೂ ಅಯಾಚಿತವು ಉತ್ತಮ. ಅಯಾಚಿತಕ್ಕಿಂತಲೂ ನಕ್ತವ್ರತವು ಉತ್ತಮ. ಆದ ಕಾರಣ ನಕ್ತವ್ರತವನ್ನೇ ಆಚರಿಸಬೇಕು.

೧೨. ನಕ್ತಭೋಜನಮಾಡುವವನು ಹವಿಷ್ಯಭೋಜನ, ಸ್ನಾನ, ಸತ್ಯ ವಚನ, ಲಘ್ವಾಹಾರಸೇವನೆ, ಅಗ್ನಿಕಾರ್ಯ, ನೆಲದಮೇಲೆ ಮಲಗುವುದು ಎಂಬೀ ಆರನ್ನೂ ಆಚರಿಸಬೇಕು.

ಗಂಗಾತೀರೇ ಮಾಘಮಾಸೇ ಯಃ ಕುರ್ಯಾನ್ನಕ್ತಭೋಜನಂ ।
ಶಿವಾಯತನಪಾರ್ಶ್ವೇತು ಕೃಶರಂ ಘೃತಸಂಯುತಂ ॥ ೧೩ ॥

ನೈವೇದ್ಯಂ ಚ ನಿವೇದ್ಯೈವ ಕೃಶರಾನ್ನಂ ಶಿವಸ್ಯ ತು ।
ಕಾಷ್ಠಮೌನೇನ ಭುಂಜಾನೋ ಜಿಹ್ವಾಲೌಲ್ಯಂ ವಿವರ್ಜಯೇತ್ ॥ ೧೪ ॥

ಪಲಾಶಪತ್ರೇ ಭುಂಜಾನಃ ಶಿವಂ ಸ್ಮೃತ್ವಾ ಜಿತೇಂದ್ರಿಯಃ ।
ಧರ್ಮರಾಜಸ್ಯ ದೇವ್ಯಾಶ್ಚ ಪೃಥಕ್ಪಿಂಡಂ ಪ್ರಕಲ್ಪಯೇತ್ ॥ ೧೫ ॥

ಸೋಪವಾಸಶ್ಚತುರ್ದಶ್ಯಾಂ ಭವೇದುಭಯಪಕ್ಷಯೋಃ ।
ಪೌರ್ಣಮಾಸ್ಯಾಂ ತು ಗಂಧೈಶ್ಚ ಗಂಗಾಯಾಃ ಸಲಿಲೈಸ್ತಥಾ ॥ ೧೬ ॥

ಶಿವಂ ಸಂಸ್ನಾಪ್ಯ ಪಯಸಾ ಮಧ್ವಾಜ್ಯದಧಿಭಿಃ ಪೃಥಕ್ ।
ತಥೈವ ಹೇಮಪುಷ್ಪಂ ಚ ಲಿಂಗಮೂರ್ಧ್ನಿ ವಿನಿಕ್ಷಿಪೇತ್ ॥ ೧೭ ॥

---

೧೩. ಗಂಗೆಯತೀರದಲ್ಲಿ ಮಾಘಮಾಸದಲ್ಲಿ ಘೃತಯುಕ್ತವಾದ ಕೃಶರಾನ್ನ (ಚಿತ್ರಾನ್ನ) ವನ್ನು ಈಶ್ವರಾಲಯದ ಸನ್ನಿಧಿಯಲ್ಲಿ ನಕ್ತಭೋಜನ ಮಾಡಬೇಕು.

೧೪. ಈಶ್ವರನಿಗೆ ಕೃಶರಾನ್ನನೈವೇದ್ಯವನ್ನು ಅರ್ಪಿಸಿ ಕಾಷ್ಠ ಮೌನ ವ್ರತಧಾರಿಯಾಗಿ ಭೋಜನಮಾಡುವವನಾಗಿ ಜಿಹ್ವಾ ಚಾಪಲ್ಯವನ್ನು ಬಿಡಬೇಕು.

೧೫. ಶಿವಸ್ಮರಣೆಪೂರ್ವಕವಾಗಿ ಜಿತೇಂದ್ರಿಯನಾಗಿ ಮುತ್ತುಗದೆಲೆಯಲ್ಲಿ ಭೋಜನಮಾಡುವವನು ಧರ್ಮರಾಜ ಮತ್ತು ದೇವಿಗೆ ಪ್ರತ್ಯೇಕವಾಗಿ ಪಿಂಡವನ್ನು ಕಲ್ಪಿಸಬೇಕು.

೧೬-೧೭. ಶುಕ್ಲಕೃಷ್ಣಪಕ್ಷಗಳ ಚತುರ್ದಶೀ ದಿನಗಳಲ್ಲಿ ಉಪವಾಸ ಮಾಡಬೇಕು. ಪೂರ್ಣಿಮಾ ದಿನದಲ್ಲಿ ಗಂಧ, ಗಂಗೋದಕ, ಹಾಲು, ಮಧು, ಘೃತ ಮತ್ತು ಮೊಸರುಗಳಿಂದ ಶಿವನಿಗೆ ಪ್ರತ್ಯೇಕವಾಗಿ ಅಭಿಷೇಕಮಾಡಿ ಸುವರ್ಣ ಪುಷ್ಪವನ್ನು ಲಿಂಗದ ಶಿರಸ್ಸಿನಮೇಲೆ ಸಮರ್ಪಿಸಬೇಕು.

ತತೋ ದದ್ಯಾತ್ತು ಶಕ್ತ್ಯೈವಾಪೂಪಂ ಚ ಘೃತಪಾಚಿತಂ ।
ತಿಲಾಢಕಂ ಪ್ರಗೃಹ್ಯಾಥ ಶಿವಲಿಂಗೋಪರಿ ಕ್ಷಿಪೇತ್ ॥ ೧೮ ॥

ನೀಲೋತ್ಪಲೈಶ್ಚ ಸರ್ವೇಶಂ ಪೂಜಯೇತ್ಪಂಕಜೈರಪಿ ।
ತದಲಾಭೇ ತು ಸೌವರ್ಣೈಃ ಪಂಕಜೈಃ ಪೂಜಯೇದ್ವರಂ ॥ ೧೯ ॥

ಪಾಯಸಂ ಚಾತ್ರ ಮಧ್ವಾಕ್ತಂ ಘೃತಯುಕ್ತಂ ಚ ಗುಗ್ಗುಲಂ ।
ಘೃತದೀಪಂ ತಥಾ ಚೈವ ಚಂದನಾದ್ಯೈರ್ವಿಲೇಪನಂ ॥ ೨೦ ॥

ದದ್ಯಾದ್ಭಕ್ತ್ಯಾ ಮಹೇಶಾಯ ತಥಾ ಪತ್ರಫಲಾನಿ ಚ ।
ಕೃಷ್ಣಗೋಮಿಥುನಂ ಚೈವ ಸರೂಪ್ಯಂ ಚ ನಿವೇದಯೇತ್ ॥ ೨೧ ॥

ಭೋಜಯೇದ್ಬ್ರಾಹ್ಮಣಾನಷ್ಟೌ ಮಾಸಾಂತೇ ತು ಸದಕ್ಷಿಣಾನ್ ।
ವರ್ಜಯೇನ್ಮಧು ಮಾಂಸಂ ಚ ತಂ ಮಾಸಂ ಬ್ರಹ್ಮಚರ್ಯವಾನ್ ॥ ೨೨ ॥

---

೧೮. ಅನಂತರ ತನ್ನ ಶಕ್ತ್ಯನುಸಾರವಾಗಿ ತುಪ್ಪದಲ್ಲಿಕರಿದ ಅಪೂಪಗಳನ್ನು ಕೊಡಬೇಕು. ತರುವಾಯ ಒಂದುಕೊಳಗ ಎಳ್ಳನ್ನು ತಂದು ಶಿವಲಿಂಗದಮೇಲೆ ಹಾಕಬೇಕು.

೧೯. ಸರ್ವೇಶ್ವರನನ್ನು ಕನ್ನೈದಿಲೆ ಹೂವುಗಳಿಂದ ಮತ್ತು ಪದ್ಮಪುಷ್ಪಗಳಿಂದಲೂ ಪೂಜಿಸಬೇಕು. ಆ ಹೂವುಗಳು ದೊರಕದಿದ್ದಲ್ಲಿ ಬಂಗಾರದ ಪದ್ಮಗಳಿಂದ ಈಶ್ವರನನ್ನು ಪೂಜಿಸಬೇಕು

೨೦-೨೧. ಈ ಸಂದರ್ಭದಲ್ಲಿ ಮಧುಘೃತಗಳಿಂದ ಸಹಿತವಾದ ಪಾಯಸ, ಗುಗ್ಗುಲಧೂಪ, ತುಪ್ಪದಿಂದ, ಗಂಧಾದಿಗಳಿಂದ ಲೇಪನ, ಪತ್ರೆ, ಹಣ್ಣುಗಳು ಇವುಗಳನ್ನು ಭಕ್ತಿಯಿಂದ ಮಹೇಶ್ವರನಿಗರ್ಪಿಸಬೇಕು. ಕಪ್ಪುಬಣ್ಣದ ಗೋಮಿಥುನವನ್ನು ರಜತಸಹಿತವಾಗಿ ಅರ್ಪಿಸಬೇಕು.

೨೨. ಈ ವ್ರತವನ್ನಾಚರಿಸುತ್ತಿರುವ ಮಾಘಮಾಸದ ಕೊನೆಯಲ್ಲಿ ಎಂಟುಮಂದಿ ಬ್ರಾಹ್ಮಣರಿಗೆ ಭೋಜನಮಾಡಿಸಿ ದಕ್ಷಿಣೆಯನ್ನು ಕೊಡಬೇಕು. ಆ ತಿಂಗಳೆಲ್ಲಾ ಬ್ರಹ್ಮಚರ್ಯದಿಂದಿದ್ದು ಮಧುಮಾಂಸವನ್ನು ತ್ಯಜಿಸಬೇಕು.

ಏವಂ ಕೃತ್ವಾ ಯಥೋದ್ದಿಷ್ಟಮೇಕವಾರಮಿದಂ ವ್ರತಂ |
ಯಮೈಶ್ಚ ನಿಯಮೈರ್ಯುಕ್ತಃ ಶ್ರದ್ಧಾಭಕ್ತಿಪರಾಯಣಃ || ೨೩ ||

ಇಹ ಭೋಗಾನವಾಪ್ನೋತಿ ಪ್ರೇತ್ಯ ಚಾನುತ್ತಮಾಂ ಗತಿಂ |
ಇಂದ್ರನೀಲಪ್ರತೀಕಾಶೈರ್ವಿಮಾನೈಃ ಶಿಖಿಸಂಯುತೈಃ || ೨೪ ||

ದಿವ್ಯರತ್ನಮಯೈಶ್ಚೈವ ದಿವ್ಯಭೋಗಸಮನ್ವಿತೈಃ |
ಗತ್ವಾ ಶಿವಪುರಂ ರಮ್ಯಂ ಸರ್ವಸ್ವಕುಲಸಂಯುತಃ || ೨೫ ||

ಸುಹೃದ್ಭಿರ್ವಿವಿಧೈಶ್ಚೈವ ವಿವಿಧಾನಪ್ಯಭೀಪ್ಸಿತಾನ್ |
ಭುಕ್ತ್ವಾ ಭೋಗಾನಶೇಷಾಂಶ್ಚ ಯಾವದಾಭೂತಸಂಪ್ಲವಂ || ೨೬ ||

ತತೋ ಭವತಿ ಧರ್ಮಾತ್ಮಾ ಜಂಬೂದ್ವೀಪಪತಿಸ್ತಥಾ |
ತತ್ರ ಭುಂಕ್ತೇ ಸಮಸ್ತಾಂಶ್ಚ ಭೋಗಾನ್ವಿಗತಕಲ್ಮಷಃ || ೨೭ ||

---

೨೩-೨೪. ಈರೀತಿ ವಿಹಿತವಾಗಿರುವ ಈ ವ್ರತವನ್ನು ಒಂದಾವರ್ತಿ ಮಾಡುವ, ಯಮನಿಯಮಗಳಿಂದಯುಕ್ತನಾದ, ಶ್ರದ್ಧಾಭಕ್ತಿನಿರತನಾದ ಮನುಜನು ಈ ಲೋಕದಲ್ಲಿ ಭೋಗಗಳನ್ನು ಅನುಭವಿಸಿ ಮರಣಾನಂತರ ಉತ್ತಮ ಗತಿಯನ್ನು ಹೊಂದುವನು.

೨೪-೨೭. ಅವನು ಇಂದ್ರನೀಲ ಮಣಿಯಂತೆ ಹೊಳೆಯುತ್ತಿರುವ, ನವಿಲುಗಳಿಂದ ಕೂಡಿದ, ಸುಂದರ ರತ್ನಮಯಗಳಾದ, ದಿವ್ಯಭೋಗಗಳಿಂದೊಡಗೂಡಿದ ವಿಮಾನದಲ್ಲಿ ಕುಳಿತು ಸಕಲ ತನ್ನ ವಂಶೀಯರು ಮತ್ತು ನಾನಾವಿಧ ಸ್ನೇಹಿತರ ಸಹಿತವಾಗಿ ಮನೋಹರವಾದ ಶಿವಪುರಕ್ಕೆ ಹೋಗಿ ಅಲ್ಲಿ ಬಯಸಿದ ನಾನಾವಿಧ ಸಮಸ್ತ ಭೋಗಗಳನ್ನೂ ಪ್ರಳಯಪರ್ಯಂತರವಾಗಿ ಅನುಭವಿಸುತ್ತಿದ್ದು ಬಳಿಕ ಧರ್ಮಾತ್ಮನಾಗಿ ಜಂಬೂದ್ವೀಪಕ್ಕೊಡೆಯನಾಗುವನು. ಅಲ್ಲಿ ಕಲ್ಮಷರಹಿತನಾಗಿ ಸಮಸ್ತಭೋಗಗಳನ್ನೂ ಅನುಭವಿಸುವನು.

ಸುರೂಪಃ ಸುಭಗಶ್ಚೈವ ತಥಾ ವಿಹಿತಶಾಸನಃ ।
ಸರ್ವರೋಗವಿನಿರ್ಮುಕ್ತಃ ಸೋಽಪ್ಯೇತತ್ಫಲಭಾಗ್ಭವೇತ್ ॥ ೨೮ ॥

ವೈಶಾಖೇ ಶುಕ್ಲಪಕ್ಷೇ ವಾ ಚತುರ್ದಶ್ಯಾಂ ಸಮಾಹಿತಃ ।
ಶಾಲ್ಯನ್ನಂ ಕ್ಷೀರಸಂಯುಕ್ತಂ ಯಃ ಕುರ್ಯಾನ್ನಕ್ತಭೋಜನಂ ॥ ೨೯ ॥

ಶಿವಂ ಸಂಪೂಜ್ಯ ಪುಷ್ಪಾದ್ಯೈರ್ಭೋಜ್ಯಂ ತು ಸಂನಿವೇದ್ಯ ಚ ।
ಕಾಷ್ಠಮೌನೇನ ಭುಂಜಾನೋ ವಟಕಾಷ್ಠೇನ ವೈ ತಥಾ ॥ ೩೦ ॥

ಮೌನೇನ ಪ್ರಯತೋ ಭೂತ್ವಾ ಕುರ್ಯಾದ್ವೈ ದಂತಧಾವನಂ ।
ಶಿವಲಿಂಗಸಮೀಪೇ ತು ಗಂಗಾತೀರೇ ನಿಶಿ ಸ್ವಪೇತ್ ॥ ೩೧ ॥

ಪೌರ್ಣಮಾಸ್ಯಾಂ ಪ್ರಭಾತೇ ತು ಗಂಗಾಯಾಂ ವಿಧಿನಾ ತಥಾ ।
ಸ್ನಾತ್ವೋಪವಾಸಂ ಸಂಕಲ್ಪ್ಯ ಕುರ್ಯಾಜ್ಜಾಗರಣಂ ನಿಶಿ ॥ ೩೨ ॥

---

೨೮. ಅವನು ರೂಪವಂತನು, ಮನೋಹರನು, ವಿಹಿತರೀತಿಯಲ್ಲಿ ರಾಜ್ಯವನ್ನಾಳುತ್ತಿರುವವನು. ಸಕಲರೋಗರಹಿತನೂ ಆಗಿ ಉಕ್ತಫಲ ಭಾಗಿಯಾಗುವನು.

೨೯-೩೦. ವೈಶಾಖ ಶುಕ್ಲಪಕ್ಷ ಚತುರ್ದಶಿಯ ದಿನದಲ್ಲಿ ಸಮಾಧಾನ ಚಿತ್ತನಾಗಿ ಈಶ್ವರನನ್ನು ಪುಷ್ಪಾದಿಗಳಿಂದ ಪೂಜಿಸಿ ಹಾಲಿನಲ್ಲಿ ಕಲಸಿದ ಶಾಲ್ಯನ್ನವನ್ನೂ, ಭೋಜ್ಯವನ್ನೂ ಸಹ ನೈವೇದ್ಯಮಾಡಿ ಕಾಷ್ಠಮೌನವ್ರತದಿಂದ ನಕ್ತ ಭೋಜನಮಾಡಬೇಕು.

೩೦-೩೧. ಅವನು ಮೌನನಿಯತನಾಗಿ ಆಲದಕಡ್ಡಿಯಿಂದ ಹಲ್ಲುಜ್ಜಬೇಕು. ಗಂಗಾತೀರದಲ್ಲಿ ಶಿವಲಿಂಗದಹತ್ತಿರ ರಾತ್ರಿ ಮಲಗಬೇಕು.

೩೨. ಪೂರ್ಣಿಮೆಯದಿನ ಬೆಳಿಗ್ಗೆ ಗಂಗೆಯಲ್ಲಿ ವಿಧಿವತ್ತಾಗಿ ಸ್ನಾನ ಮಾಡಿ ಉಪವಾಸವನ್ನು ಸಂಕಲ್ಪಿಸಿ ರಾತ್ರಿ ಜಾಗರಣೆ ಮಾಡಬೇಕು.

ಲಿಂಗಂ ಘೃತೇನ ಸಂಸ್ನಾಪ್ಯ ಪುಷ್ಪಗಂಧಾದಿಭಿಸ್ತಥಾ ।
ನೈವೇದ್ಯಧೂಪದೀಪೈಶ್ಚ ಸಂಪೂಜ್ಯ ವೃಷಭಂ ಶುಭಂ ॥ ೩೩ ॥

ಸುಶ್ವೇತಪುಷ್ಪವಸ್ತ್ರಾದ್ಯೈರ್ಹರಿದ್ರೈಶ್ಚಂಧನೈಸ್ತಥಾ ।
ಅಲಂಕೃತ್ಯ ವಿಧಾನೇನ ಶಿವಾಯ ವಿನಿವೇದಯೇತ್ ॥ ೩೪ ॥

ಬ್ರಾಹ್ಮಣಾಂಶ್ಚ ಯಥಾಶಕ್ತಿ ಪಾಯಸೇನ ತು ಭೋಜಯೇತ್ ।
ಏವಂ ಸಕೃಚ್ಚ ಯೋ ಭಕ್ತ್ಯಾ ಕರೋತಿ ಶ್ರದ್ಧಯಾನ್ವಿತಃ ॥ ೩೫ ॥

ಲಭತೇ ದೈವಪಾದೋನಯುಗಾನಾಂ ದ್ವಿಸಹಸ್ರಕಂ ।
ತಪಃ ಕೃತ್ವಾ ತು ನಿಯಮಾದ್ಯತ್ಪುಣ್ಯಂ ತದಸಂಶಯಂ ॥ ೩೬

ಹಂಸಕುಂದಪ್ರಭಾಯುಕ್ತೈರ್ವಿಮಾನೈಶ್ಚಂದ್ರಸನ್ನಿಭೈಃ ।
ಸುಶ್ವೇತವೃಷಯುಕ್ತೈಶ್ಚ ಮುಕ್ತಾಜಾಲವಿಭೂಷಿತೈಃ ॥ ೩೭ ॥

ಸ್ವಕೀಯಪಿತೃಭಿಃ ಸಾರ್ಧಂ ಪ್ರಯಾತೀಶ್ವರಮಂದಿರಂ ।
ನೀಲೋತ್ಪಲಸುಗಂಧಾಭಿಃ ಸುರೂಪಾಭಿಃ ಸಮಂತತಃ ॥ ೩೮ ॥

---

೩೩-೩೪. ಆ ದಿವಸ ಲಿಂಗವನ್ನು ಘೃತದಿಂದ ಸ್ನಾನಮಾಡಿಸಿ, ಪುಷ್ಪ ಗಂಧಾದಿಗಳು ಮತ್ತು ನೈವೇದ್ಯ, ಧೂಪದೀಪಾದಿಗಳಿಂದ ಪೂಜಿಸಿ, ಮಂಗಳಕರ ವಾದ ವೃಷಭವನ್ನು ಬಿಳಿಯಪುಷ್ಪ ವಸ್ತ್ರಾದಿಗಳಿಂದಲೂ, ಅರಿಶಿನಕುಂಕುಮಗ ಳಿಂದಲೂ, ವಿಧಿವತ್ತಾಗಿ ಅಲಂಕರಿಸಿ ಶಿವನಿಗೆ ಸಮರ್ಪಿಸಬೇಕು.

೩೫-೩೬. ತನ್ನ ಶಕ್ತ್ಯನುಸಾರ ಬ್ರಾಹ್ಮಣರಿಗೆ ಪಾಯಸವನ್ನಾಡಿ ಭೋಜನ ಮಾಡಿಸಬೇಕು. ಈರೀತಿಯಾಗಿ ಶ್ರದ್ಧಾಯುಕ್ತನಾಗಿ ಭಕ್ತಿಯಿಂದ ಒಂದಾವರ್ತಿ ಮಾಡುವವನು ಒಂದುಸಾವಿರದೈನೂರು ದೈವಯುಗಗಳು ತಪಸ್ಸುಮಾಡಿದರೆ ಬರುವಷ್ಟು ಪುಣ್ಯವನ್ನು ಖಂಡಿತವಾಗಿಯೂ ಪಡೆಯುವನು. ಸಂಶಯವಿಲ್ಲ.

೩೭-೪೦. ಅವನು ತನ್ನ ಪಿತೃಗಳಿಂದ ಸಹಿತನಾಗಿ ಸೂರ್ಯ ವಿಸ್ಟುಗ ಳಂತೆ ಹೊಳೆಯುತ್ತಿರುವ, ಚಂದ್ರಸದೃಶಗಳಾದ, ಬಿಳಿಯ ಎತ್ತುಗಳಿಂದ ಕೂಡಿದ,

ಕಾಂತಾಭಿರ್ದಿವ್ಯರೂಪಾಭಿರ್ಭುಕ್ತ್ವಾ ಭೋಗಾನನೇಕಶಃ |
ಅನಂತಕಾಲಮೈಶ್ವರ್ಯಯುಕ್ತೋ ಭೂತ್ವಾ ತತೋ ಭುವಿ || ೩೯ ||

ಜಾಯತೇ ಸ ಮಹೀಪಾಲಃ ಕೀರ್ತ್ಯೈಶ್ವರ್ಯಸಮನ್ವಿತಃ |
ಏಕಛತ್ರೇಣ ಸ ಮಹೀಂ ಪಾಲಯತ್ಯಾಜ್ಞಯಾ ಸಹ || ೪೦ ||

ಅಂತೇ ವೈರಾಗ್ಯಸಂಪನ್ನೋ ಗಂಗಾಂ ಸ ಲಭತೇ ಪುನಃ |
ಸ ತಯಾ ಶ್ರದ್ಧಯಾ ಯುಕ್ತೋ ಗಂಗಾಯಾಂ ಮರಣಂ ಲಭೇತ್ ||

ತಥಾ ತತ್ರ ಸ್ಮೃತಿಂ ಲಬ್ಧ್ವಾ ಮೋಕ್ಷಮಾಪ್ನೋತಿ ಸ ಧ್ರುವಂ |
ಜ್ಯೇಷ್ಠೇ ಮಾಸಿ ಸಿತೇ ಪಕ್ಷೇ ದಶಮ್ಯಾಂ ಹಸ್ತಸಂಯುತೇ || ೪೨ ||

ಗಂಗಾತೀರೇ ತು ಪುರುಷೋ ನಾರೀ ವಾ ಭಕ್ತಿಭಾವತಃ |
ನಿಶಾಯಾಂ ಜಾಗರಂ ಕೃತ್ವಾ ಗಂಗಾಂ ದಶವಿಧೈಸ್ತತಃ || ೪೩ ||

---

ಮುತ್ತಿನಗೊಂಚಲುಗಳಿಂದಲಂಕೃತಗಳಾದ ವಿಮಾನಗಳಲ್ಲಿ ಕುಳಿತು ಈಶ್ವರ ಮಂದಿರ (ಕೈಲಾಸ) ಕ್ಕೆ ಹೋಗುವನು. ಅಲ್ಲಿ ಅವನು ಕನ್ನೈದಿಲೆಯಹೂವಿನಂತೆ ಸುಗಂಧಯುಕ್ತರಾದ, ಒಳ್ಳೆಯ ರೂಪವತಿಯರಾದ, ಸುಂದರಿಯರಾದ, ಕಾಂತೆಯರ ಮಧ್ಯದಲ್ಲಿ ಅನೇಕ ಭೋಗಗಳನ್ನನುಭವಿಸಿ, ಬಹುಕಾಲಪರ್ಯಂತವಾಗಿ ಐಶ್ವರ್ಯಯುಕ್ತನಾಗಿದ್ದು, ಬಳಿಕ ಭೂಲೋಕದಲ್ಲಿ ರಾಜನಾಗಿ ಹುಟ್ಟುವನು. ಅವನು ಒಳ್ಳೆಯ ಕೀರ್ತಿ ಮತ್ತು ಐಶ್ವರ್ಯಗಳಿಂದಕೂಡಿ ಏಕಛತ್ರಾಧಿಪತಿಯಾಗಿ ಆಜ್ಞಾಮಾತ್ರದಿಂದ ಭೂಮಂಡಲವನ್ನು ಪಾಲಿಸುವನು.

೪೧-೪೨. ಕೊನೆಗೆ ಅವನು ವೈರಾಗ್ಯಸಂಪನ್ನನಾಗಿ ಪುನಃ ಗಂಗೆಯ ಸಾನ್ನಿಧ್ಯವನ್ನು ಪಡೆಯುವನು. ಹಾಗೆಯೇ ಅಂತಹ ಶ್ರದ್ಧೆಯಿಂದಲೇ ಕೊನೆಯವರೆಗಿದ್ದು ಗಂಗೆಯಸನ್ನಿಧಾನದಲ್ಲಿಯೇ ಮೃತನಾಗುವನು. ಮತ್ತು ಅಲ್ಲಿಯೇ ಅವನು ಜನ್ಮಾಂತರಸ್ಮರಣೆಯನ್ನು ಹೊಂದಿ ಖಂಡಿತವಾಗಿಯೂ ಮೋಕ್ಷವನ್ನು ಪಡೆಯುವನು.

೪೩-೪೪. ಜ್ಯೇಷ್ಠಮಾಸದ ಹಸ್ತನಕ್ಷತ್ರಯುತವಾದ ಶುಕ್ಲ ದಶಮಿಯ ದಿನದಲ್ಲಿ ಗಂಗೆಯತೀರದಲ್ಲಿ ಪುರುಷ ಅಥವಾ ಸ್ತ್ರೀಯು ಭಕ್ತಿಭಾವದಿಂದ ರಾತ್ರಿ

ಪುಷ್ಪೈರ್ಗಂಧೈಶ್ಚ ನೈವೇದ್ಯೈಃ ಫಲೈಶ್ಚ ದಶಸಂಖ್ಯಯಾ ।
ತಥೈವ ದೀಪೈಸ್ತಾಂಬೂಲೈಃ ಪೂಜಯೇಚ್ಛ್ರದ್ಧಯಾನ್ವಿತಃ ॥ ೪೪ ॥

ಸ್ನಾತ್ವಾ ಭಕ್ತ್ಯಾ ತು ಜಾಹ್ನವ್ಯಾಂ ದಶಕೃತ್ವೋ ವಿಧಾನತಃ ।
ದಶಪ್ರಸೃತಿ ಕೃಷ್ಣಾಂಶ್ಚ ತಿಲಾನ್ ಸರ್ಪಿಶ್ಚ ವೈ ಜಲೇ ॥ ೪೫ ॥

ಸಕ್ತುಪಿಂಡಾನ್ ಗುಡಪಿಂಡಾನ್ ದದ್ಯಾಚ್ಚ ದಶಸಂಖ್ಯಯಾ ।
ತತೋ ಗಂಗಾತಟೇ ರಮ್ಯೇ ಹೇಮ್ನಾ ರೂಪ್ಯೇಣ ವಾ ತಥಾ ॥ ೪೬ ॥

ಗಂಗಾಯಾಃ ಪ್ರತಿಮಾಂ ಕೃತ್ವಾ ವಕ್ಷ್ಯಮಾಣಸ್ವರೂಪಿಣೀಂ ।
ಪದ್ಮಸ್ವಸ್ತಿಕಚಿಹ್ನಸ್ಯ ಸಂಸ್ಥಿತಸ್ಯ ತಥೋಪರಿ ॥ ೪೭ ॥

ವಸ್ತ್ರಸ್ರಗ್ದಾಮಕಂಠಸ್ಯ ಪೂರ್ಣಕುಂಭಸ್ಯ ಚೋಪರಿ ।
ಸಂಸ್ಥಾಪ್ಯ ಪೂಜಯೇದ್ದೇವೀಂ ತದಲಾಭೇ ಮೃದಾದಿ ವಾ ॥ ೪೮ ॥

---

ಜಾಗರಣೆಮಾಡಿ ತರುವಾಯ ಹತ್ತುವಿಧಗಳಾದ ಪುಷ್ಪ, ಗಂಧ, ನೈವೇದ್ಯ, ಫಲ, ದೀಪ ಮತ್ತು ತಾಂಬೂಲಗಳಲ್ಲಿ ಒಂದೊಂದನ್ನೂ ಹತ್ತುಹತ್ತರಂತೆ ಶ್ರದ್ಧೆಯಿಂದ ಗಂಗೆಗೆ ಪೂಜಿಸಬೇಕು.

೪೫-೪೬. ಅನಂತರ ಭಕ್ತಿಯಿಂದ ಗಂಗೆಯಲ್ಲಿ ವಿಧಿವತ್ತಾಗಿ ಹತ್ತಾವರ್ತಿ ಸ್ನಾನಮಾಡಿ ಹತ್ತುಬೊಗಸೆ ಕರಿ ಎಳ್ಳುಗಳನ್ನೂ, ತುಪ್ಪವನ್ನೂ, ಹತ್ತು ಹಿಟ್ಟಿನ ಮತ್ತು ಬೆಲ್ಲದಮುದ್ದೆಗಳನ್ನೂ ಗಂಗೋದಕದಲ್ಲಿ ಹಾಕಬೇಕು.

೪೭-೪೮. ಅನಂತರ ಮನೋಹರವಾದ ಗಂಗಾತೀರದಲ್ಲಿ ಬಂಗಾರ ಅಥವಾ ಬೆಳ್ಳಿಯಿಂದ ಮುಂದೆಹೇಳುವ ಆಕಾರವಾಗಿ ಗಂಗೆಯವಿಗ್ರಹವನ್ನು ಮಾಡಿ ಅದನ್ನು ಪದ್ಮಸ್ವಸ್ತಿಕ ಚಿಹ್ನೆಗಳಿಂದ ಯುಕ್ತವಾದ ಮಂಡಲದಮೇಲೆ ಸ್ಥಾಪಿತವಾದ, ಕುತ್ತಿಗೆಗೆ ದಾರವನ್ನುಕಟ್ಟಿ ಮಾಲಿಕೆಯನ್ನು ಹಾಕಿ ವಸ್ತ್ರವನ್ನು ಹೊದಿಸಿರುವ ಪೂರ್ಣಕುಂಭದಮೇಲಿಟ್ಟು ದೇವಿಯನ್ನು ಪೂಜಿಸಬೇಕು. ಬಂಗಾರ ಬೆಳ್ಳಿಗಳು ಲಭಿಸದಿದ್ದರೆ ಮಣ್ಣುಮುಂತಾದುವುಗಳಿಂದಲಾದರೂ ವಿಗ್ರಹವನ್ನು ಮಾಡಿ ಪೂಜಿಸಬೇಕು.

ಅಥ ತತ್ರಾಪ್ಯಶಕ್ತಶ್ಚೇಲ್ಲಿಖೇತ್ಪಿಷ್ಟೇನ ವೈ ಭುವಿ ।
ಚತುರ್ಭುಜಾಂ ಸುನೇತ್ರಾಂ ಚ ಚಂದ್ರಾಯುತಸಮಪ್ರಭಾಂ ॥ ೪೯ ॥

ಚಾಮರೈರ್ವೀಜ್ಯಮಾನಾಂ ಚ ಶ್ವೇತಛತ್ರೋಪಶೋಭಿತಾಂ ।
ಸುಪ್ರಸನ್ನಾಂ ಚ ವರದಾಂ ಕರುಣಾರ್ದ್ರನಿಜಾಂತರಾಂ ॥ ೫೦ ॥

ಸುಧಾಪ್ಲಾವಿತಭೂಪೃಷ್ಠಾಂ ದೇವಾದಿಭಿರಭಿಷ್ಟುತಾಂ ।
ದಿವ್ಯರತ್ನಪರೀತಾಂ ಚ ದಿವ್ಯಮಾಲ್ಯಾನುಲೇಪನಾಂ ॥ ೫೧ ॥

ಧ್ಯಾತ್ವಾ ಜಲೇ ಯಥಾ ಪ್ರೋಕ್ತಾಂ ತತ್ರಾರ್ಚಾಯಾಂ ತು ಪೂಜಯೇತ್
ವಕ್ಷ್ಯಮಾಣೇನ ಮಂತ್ರೇಣ ಕುರ್ಯಾತ್ಪೂಜಾಂ ವಿಶೇಷತಃ ॥ ೫೨ ॥

ಪಂಚಾಮೃತೇನ ಚ ಸ್ನಾನಮರ್ಚಾಯಾಂ ತು ವಿಶಿಷ್ಯತೇ ।
ಪ್ರತಿಮಾಗ್ರೇ ಸ್ಥಂಡಿಲೇ ತು ಗೋಮಯೇನೋಪಲೇಪಯೇತ್ ॥ ೫೩ ॥

---

೪೯-೫೨. ಅದನ್ನೂ ಮಾಡಲು ಸಾಮರ್ಥ್ಯವಿಲ್ಲದಿದ್ದರೆ ಹಿಟ್ಟಿನಿಂದ ನೆಲದಮೇಲೆ ಪ್ರತಿಮೆಯ ಆಕಾರವನ್ನು ಬರೆದು ಪೂಜಿಸಬೇಕು. ನಾಲ್ಕು ಭುಜಗಳು ಮತ್ತು ಒಳ್ಳೆಯ ಕಣ್ಣುಗಳುಳ್ಳ, ಹತ್ತು ಸಾವಿರ ಚಂದ್ರರಿಗೆ ಸಮಾನವಾದ ಕಾಂತಿಯುಳ್ಳ, ಚಾಮರಗಳಿಂದ ಬೀಸಿಸಿಕೊಳ್ಳುತ್ತಿರುವ, ಶ್ವೇತಛತ್ರದಿಂದಲಂಕೃತಳಾದ, ಪ್ರಸನ್ನಳು, ವರಪ್ರದಳು ಮತ್ತು ದಯಾರ್ದ್ರಹೃದಯಳೂ ಆದ, ಭೂಭಾಗದಲ್ಲಿ ಅಮೃತವನ್ನು ಸುರಿಸುತ್ತಿರುವ, ದೇವಾದಿಗಳಿಂದ ಸ್ತುತಿಸಲ್ಪಡುತ್ತಿರುವ, ದಿವ್ಯರತ್ನಗಳಿಂದ ಯುಕ್ತಳಾದ, ಮನೋಹರವಾಲಿಕೆ ಗಂಧಗಳನ್ನು ಧರಿಸಿರುವ ಗಂಗಾದೇವಿಯನ್ನು ಜಲದಲ್ಲಿ ಧ್ಯಾನಿಸಬೇಕೆಂದು ಹೇಳಿರುವ ರೀತಿಯಾಗಿ ಆ ಪ್ರತಿಮೆಯಲ್ಲಿ ಧ್ಯಾನಿಸಿ ಪೂಜಿಸಬೇಕು. ಮುಂದೆ ಹೇಳುವ ಮಂತ್ರದಿಂದ ವಿಶೇಷವಾಗಿ ಪೂಜೆಮಾಡಬೇಕು.

೫೩. ಈ ಪೂಜೆಯಲ್ಲಿ ಪಂಚಾಮೃತಸ್ನಾನವು ವಿಶೇಷವಾಗಿ ವಿಹಿತವಾಗಿದೆ. ಪ್ರತಿಮೆಯ ಮುಂಭಾಗದಲ್ಲಿ ಶುದ್ಧಸ್ಥಳದಲ್ಲಿ ಗೋಮಯದಿಂದ ಸಾರಿಸಬೇಕು.

ನಾರಾಯಣಂ ಮಹೇಶಂ ಚ ಬ್ರಾಹ್ಮಣಂ ಭಾಸ್ಕರಂ ತಥಾ ।
ಭಗೀರಥಂ ಚ ನೃಪತಿಂ ಹಿಮವಂತಂ ನಗೇಶ್ವರಂ ॥ ೫೪ ॥

ಗಂಧಪುಷ್ಪಾದಿಭಿಶ್ಚೈವ ಯಥಾಶಕ್ತಿ ಪ್ರಪೂಜಯೇತ್ ।
ದಶಪ್ರಸ್ಥಾಂಸ್ತಿಲಾನ್ ದದ್ಯಾದ್ದಶ ವಿಪ್ರೇಭ್ಯ ಏವ ಚ ॥ ೫೫ ॥

ದಶಪ್ರಸ್ಥಾನ್ಯವಾನ್ ದದ್ಯಾದ್ದಶ ಗವ್ಯೈರ್ಯಥಾ ಹಿತಾನ್ ।
ಮತ್ಸ್ಯಕಚ್ಛಪಮಂಡೂಕಮಕರಾದಿಜಲೇಚರಾನ್ ॥ ೫೬ ॥

ಕಾರಿತಾನ್ಸೈ ಯಥಾಶಕ್ತಿ ಸ್ವರ್ಣೇನ ರಜತೇನ ವಾ ।
ತದಲಾಭೇ ಪಿಷ್ಟಮಯಾನಭ್ಯರ್ಚ್ಯ ಕುಸುಮಾದಿಭಿಃ ॥ ೫೭ ॥

ಗಂಗಾಯಾಂ ಪ್ರಕ್ಷಿಪೇತ್ಪೂರ್ವಮಂತ್ರೇಣೈವ ತು ಮಂತ್ರವಿತ್ ।
ರಥಯಾತ್ರಾದಿನೇ ತಸ್ಮಿನ್ನಿಭವೇ ಸತಿ ಕಾರಯೇತ್ ।
ರಥಾರೂಢಪ್ರತಿಕೃತಿಂ ಗಂಗಾಯಾಸ್ತೂತ್ತರಾಮುಖಾಂ ॥ ೫೮ ॥

---

೫೪-೫೫. ನಾರಾಯಣ, ಮಹೇಶ್ವರ, ಬ್ರಹ್ಮ, ಸೂರ್ಯ, ಭಗೀರಥರಾಜ ಮತ್ತು ಪರ್ವತಾಧಿಪನಾದ ಹಿಮವಂತ ಇವರನ್ನು ಗಂಧ ಪುಷ್ಪಾದಿಗಳಿಂದ ತನ್ನ ಶಕ್ತ್ಯನುಸಾರವಾಗಿ ಪೂಜಿಸಬೇಕು. ಹತ್ತುಬಳ್ಳ ಎಳ್ಳನ್ನು ಹತ್ತುಜನ ಬ್ರಾಹ್ಮಣರಿಗೆ ದಾನಮಾಡಬೇಕು.

೫೬-೫೭. ಅಂತೆಯೇ ಹಾಲು ಮೊಸರು ಮುಂತಾದ ಗವ್ಯಸಹಿತವಾಗಿ ಹತ್ತುಬಳ್ಳ ಯವಧಾನ್ಯವನ್ನು ಹತ್ತುಜನ ಬ್ರಾಹ್ಮಣರಿಗೆ ದಾನಮಾಡಬೇಕು.

ತನ್ನ ಶಕ್ತ್ಯನುಸಾರವಾಗಿ ಬಂಗಾರ ಅಥವಾ ಬೆಳ್ಳಿ ಅವಿಲ್ಲದಿದ್ದಲ್ಲಿ ಹಿಟ್ಟು ಇವುಗಳಿಂದ ಮೀನು, ಆಮೆ, ಕಪ್ಪೆ, ಮೊಸಳೆ ಮುಂತಾದ ನೀರಿನಲ್ಲಿರುವ ಜಂತುಗಳನ್ನುಮಾಡಿಸಿ ಅವನ್ನುಹೂವು ಮುಂತಾದುವುಗಳಿಂದ ಪೂಜಿಸಿ, ಮಂತ್ರಜ್ಞನು ಅವುಗಳನ್ನು ಹಿಂದಿನಮಂತ್ರದಿಂದಲೇ ಗಂಗೆಯಲ್ಲಿ ಹಾಕಬೇಕು.

೫೮. ತಕ್ಕಷ್ಟು ಐಶ್ವರ್ಯವಿದ್ದರೆ ಆ ರಥೋತ್ಸವದಿನದಲ್ಲಿ ಗಂಗೆಯವಿಗ್ರಹವನ್ನು ರಥದಲ್ಲಿ ಉತ್ತರಾಭಿಮುಖವಾಗಿ ಕೂಡಿಸಿ ಉತ್ಸವಮಾಡಬೇಕು.

ಭ್ರಮಂತ್ಯಾ ದರ್ಶನಂ ಲೋಕೇ ದುರ್ಲಭಂ ಪಾಪಕರ್ಮಣಾಂ |
ದುರ್ಗಾ ಯಾ ರಥಯಾತ್ರಾಸ್ತಿ ತಥೈವಾತ್ರಾಪಿ ಕಾರಯೇತ್ || ೫೯ ||

ಏವಂ ಕೃತ್ವಾ ವಿಧಾನೇನ ವಿತ್ತಶಾಠ್ಯವಿವರ್ಜಿತಃ |
ದಶಪಾಪೈರ್ವಕ್ಷ್ಯಮಾಣೈಃ ಸದ್ಯ ಏವ ವಿಮುಚ್ಯತೇ || ೬೦ ||

ಸ್ವದತ್ತಾನಾಮುಪಾದಾನಂ ಹಿಂಸಾಂ ಚೈವಾವಿಧಾನತಃ |
ಪರೋಪಸೇವಾಂ ಚ ತಥಾ ಕಾಯಿಕಂ ತ್ರಿವಿಧಂ ಸ್ಮೃತಂ || ೬೧ ||

ಪಾರುಷ್ಯಮನೃತಂ ವಾಪಿ ಪೈಶುನ್ಯಂ ಚಾಪಿ ಸರ್ವಶಃ |
ಅಸಂಬದ್ಧಪ್ರಲಾಪಶ್ಚ ವಾಚಿಕಂ ಸ್ಯಾಚ್ಚತುರ್ವಿಧಂ || ೬೨ ||

ಪರದ್ರವ್ಯೇಷ್ವಭಿಧ್ಯಾನಂ ಮನಸಾನಿಷ್ಟಚಿಂತನಂ |
ವಿತಥಾಭಿನಿವೇಶಶ್ಚ ಮಾನಸಂ ತ್ರಿವಿಧಂ ಸ್ಮೃತಂ || ೬೩ ||

---

೫೯. ರಥದಲ್ಲಿ ತಿರುಗುತ್ತಿರುವ ಗಂಗಾದೇವಿಯ ದರ್ಶನವು ಪಾಪಿಗಳಿಗೆ ದೊರೆಯಲಾರದು. ದುರ್ಗಾದೇವಿಗೆ ರಥೋತ್ಸವಮಾಡುವ ರೀತಿಯಲ್ಲಿಯೇ ಗಂಗೆಯ ರಥಯಾತ್ರೆಯನ್ನು ನಡೆಯಿಸಬೇಕು.

೬೦. ದ್ರವ್ಯಲೋಭವಿಲ್ಲದೆ ಈ ವಿಧಾನದಿಂದ ಪೂಜಾದಿಗಳನ್ನು ಮಾಡುವವನು ಮುಂದೆ ಹೇಳುವ ಹತ್ತುವಿಧ ಪಾಪಗಳಿಂದ ತಕ್ಷಣದಲ್ಲಿಯೇ ಮುಕ್ತನಾಗುವನು

೬೧-೬೩. ತಾನುಕೊಟ್ಟುದನ್ನ ಪಹರಿಸುವುದು, ವಿಹಿತವಲ್ಲದ ಹಿಂಸೆ, ಪರೋಪಸೇವೆ ಎಂಬುದಾಗಿ ಮೂರುವಿಧವಾದ ಕಾಯಿಕಪಾಪಗಳು, ಪಾರುಷ್ಯ ಎಂದರೆ ನಿರ್ದಯತೆ, ಸುಳ್ಳು ಚಾಡಿ ಹೇಳುವುದು, ಅಸಂಬದ್ಧ ಪ್ರಲಾಪ ಎಂಬುದಾಗಿ ನಾಲ್ಕುವಿಧವಾದ ವಾಚನಿಕಪಾಪಗಳು ಮತ್ತು ಪರದ್ರವ್ಯಗಳನ್ನಾಶಿಸುವುದು, ಮನಸ್ಸಿನಲ್ಲಿ ಇತರರಿಗೆ ಕೆಟ್ಟುದಾಗಲೆಂದು ಚಿಂತಿಸುವುದು, ಅಸತ್ಯದಲ್ಲಿ ಆಗ್ರಹ ಎಂಬುದಾಗಿ ಮೂರುವಿಧ ಮಾನಸಿಕಪಾಪಗಳು ಎಂಬುದಾಗಿ ಪಾಪಗಳು ಹತ್ತುವಿಧವಾಗಿವೆ.

ಏತೈರ್ದಶವಿಧೈಃ ಪಾಪೈಃ ಕೋಟಿಜನ್ಮಸಮುದ್ಭವೈಃ ।
ಮುಚ್ಯತೇ ನಾತ್ರ ಸಂದೇಹೋ ಬ್ರಹ್ಮಣೋ ವಚನಂ ಯಥಾ ॥ ೬೪ ॥

ದಶತ್ರಿಂಶಚ್ಚ ತಾನ್ಪೂರ್ವಾನ್ಪಿತೄನೇವ ತಥಾಪರಾನ್ ।
ಉದ್ಧರತ್ಯೇವ ಸಂಸಾರಾನ್ ಮಂತ್ರೇಣಾನೇನ ಪೂಜಿತಾ ॥ ೬೫ ॥

ಓಂ ನಮೋ ದಶಹರಾಯೈ ನಾರಾಯಣ್ಯೈ ಗಂಗಾಯೈ ನಮಃ ।
ಇತಿ ಮಂತ್ರೇಣ ಯೋ ಮರ್ತ್ಯೋ ದಿನೇ ತಸ್ಮಿನ್ ದಿವಾನಿಶಂ ॥ ೬೬ ॥

ಜಪೇತ್ ಪಂಚಸಹಸ್ರಾಣಿ ದಶಧರ್ಮಫಲಂ ಲಭೇತ್ ।
ಉದ್ಧರೇದ್ದಶ ಪೂರ್ವಾಣಿ ಪರಾಣಿ ಚ ಭವಾರ್ಣವಾತ್ ॥ ೬೭ ॥

ವಕ್ಷ್ಯಮಾಣಮಿದಂ ಸ್ತೋತ್ರಂ ವಿಧಿನಾ ಪ್ರತಿಗೃಹ್ಯ ಚ ।
ಗಂಗಾಗ್ರೇ ತದ್ದಿನೇ ಜಪ್ಯಂ ವಿಷ್ಣುಪೂಜಾಂ ಪ್ರವರ್ತಯೇತ್ ॥ ೬೮ ॥

---

೬೪. ಕೋಟಿಜನ್ಮಗಳಲ್ಲಿ ಮಾಡಿದ ಈ ಹತ್ತುವಿಧಪಾಪಗಳೂ ಗಂಗೆಯ ಪೂಜೆಯಿಂದ ಹೋಗುತ್ತವೆ ಸಂದೇಹವಿಲ್ಲ. ಈ ವಿಷಯದಲ್ಲಿ ಬ್ರಹ್ಮವಚನವೇ ಪ್ರಮಾಣವು.

೬೫. ಮುಂದೆಹೇಳುವ ಮಂತ್ರದಿಂದ ಪೂಜಿಸಲ್ಪಟ್ಟಗಂಗೆಯು ತನ್ನ ಹಿಂದಿನ ಮತ್ತು ಮುಂದಿನ ನಲವತ್ತು ಪಿತೃಗಳನ್ನು ಉದ್ಧರಿಸುತ್ತಾಳೆ.

೬೬-೬೭. "ಓಂ ನಮೋ ದಶಹರಾಯೈ ನಾರಾಯಣ್ಯೈ ಗಂಗಾಯೈ ನಮಃ" (ಹತ್ತುಪಾಪಗಳನ್ನು ಪರಿಹರಿಸುವ ನಾರಾಯಣನ ಪಾದಕಮಲದಲ್ಲಿ ಹುಟ್ಟಿದ ಗಂಗೆಗೆ ನಮಸ್ಕಾ! ನಮಸ್ಕಾರ!) ಎಂಬ ಮಂತ್ರದಿಂದ ಆ ದಿನದಲ್ಲಿ ಹಗಲೂ ರಾತ್ರಿಯೂ ಸಹ ಐದುಸಾವಿರ ಜಪಮಾಡುವ ಮನುಷ್ಯನು ಹತ್ತುವಿಧ ಧರ್ಮಗಳ ಫಲವನ್ನು ಹೊಂದುವನು. ಈರೀತಿ ಜಪಕರ್ತನು ಮುಂದು ಹಿಂದಿನ ಹತ್ತತ್ತು ಕುಲಗಳನ್ನು ಸಂಸಾರವೆಂಬ ಸಾಗರದಿಂದ ಉದ್ಧರಿಸುವನು.

೬೮. ಮುಂದೆಹೇಳುವ ಈ ಸ್ತೋತ್ರವನ್ನು ವಿಧಾನಪೂರ್ವಕವಾಗಿ ಗುರುಗಳಿಂದ ಉಪದೇಶತೆಗೆದುಕೊಂಡು ಆದಿನದಲ್ಲಿ ಗಂಗೆಯ ಇದಿರಿಗೆ ಜಪಿಸಿ ವಿಷ್ಣು ಪೂಜೆ ಮಾಡಬೇಕು.

ಓಂ ನಮಃ ಶಿವಾಯೈ ಗಂಗಾಯೈ ಶಿವದಾಯೈ ನಮೋಽಸ್ತುತೇ ।
ನಮೋಽಸ್ತು ವಿಷ್ಣುರೂಪಿಣ್ಯೈ ಗಂಗಾಯೈ ತೇ ನಮೋನಮಃ ॥ ೬೯ ॥

ಸರ್ವದೇವಸ್ವರೂಪಿಣ್ಯೈ ನಮೋ ಭೇಷಜಮೂರ್ತಯೇ ।
ಸರ್ವಸ್ಯ ಸರ್ವವ್ಯಾಧೀನಾಂ ಭಿಷಕ್‌ಶ್ರೇಷ್ಠೇ ನಮೋಽಸ್ತು ತೇ ॥ ೭೦ ॥

ಸ್ಥಾಣುಜಂಗಮಸಂಭೂತವಿಷಹಂತ್ರಿ ನಮೋಽಸ್ತು ತೇ ।
ಸಂಸಾರವಿಷನಾಶಿನ್ಯೈ ಜೀವನಾಯೈ ನಮೋನಮಃ ॥ ೭೧ ॥

ತಾಪತ್ರಿತಯಹಂತ್ರ್ಯೈ ಚ ಪ್ರಾಣೇಶ್ವರ್ಯೈ ನಮೋನಮಃ ।
ಶಾಂತ್ಯೈ ಸಂತಾಪಹಾರಿಣ್ಯೈ ನಮಸ್ತೇ ಸರ್ವಮೂರ್ತಯೇ ॥ ೭೨ ॥

---

೬೯. ಈಶ್ವರನ ಶಿರಸ್ಸಿನಲ್ಲಿರುವ ದೇವಿಗೆ ನಮಸ್ಕಾರ! ಮಂಗಳದಾಯಕಳಾದ ಗಂಗಾದೇವಿಯೇ! ನಿನಗೆ ನಮಸ್ಕಾರ! ವಿಷ್ಣುಪಾದದಲ್ಲಿ ಉದ್ಭವಿಸಿ ಅವನ ಸನ್ನಿಧಾನಕ್ಕೆ ಪಾತ್ರಳಾಗಿರುವ ಗಂಗಾದೇವಿಯೆ! ನಿನಗೆ ನಮಸ್ಕಾರ ನಮಸ್ಕಾರ!

೭೦. ಸಕಲದೇವತೆಗಳ ಸನ್ನಿಧಾನಪಾತ್ರಳಾದ ದೇವಿಗೆ ನಮಸ್ಕಾರ! ವೈದ್ಯಶ್ರೇಷ್ಠಳೇ! ಸರ್ವರ ಸಕಲವ್ಯಾಧಿಗಳಿಗೂ ಔಷಧ ರೂಪಿಣಿಯಾದ ನಿನಗೆ ನಮಸ್ಕಾರ!

೭೧. ಚರಾಚರಗಳಿಂದ ಉದ್ಭವಿಸಿದ ವಿಷವನ್ನು ಪರಿಹರಿಸುವ ದೇವಿಯೇ! ನಿನಗೆ ನಮಸ್ಕಾರ! ಸಂಸಾರವೆಂಬ ವಿಷವನ್ನು ನಾಶಪಡಿಸುವಂತಹ ಜೀವನಪ್ರದಳಾದ ಗಂಗೆಗೆ ನಮಸ್ಕಾರ ನಮಸ್ಕಾರ!

೭೨. ತಾಪತ್ರಯ ಪರಿಹಾರಕಳಾದ ಪ್ರಾಣೇಶ್ವರಿಗೆ ನಮಸ್ಕಾರ ನಮಸ್ಕಾರ! ಶಾಂತಿಪ್ರದಳು, ಸಂತಾಪಪರಿಹಾರಕಳು, ಸರ್ವಮೂರ್ತಿಯೂ ಆದ ದೇವಿಗೆ ನಮಸ್ಕಾರ!

ಸರ್ವಸಂಶುದ್ಧಿಕಾರಿಣ್ಯೈ ನಮಃ ಪಾಪವಿಮುಕ್ತಯೇ ।
ಭುಕ್ತಿಮುಕ್ತಿಪ್ರದಾಯಿನ್ಯೈ ಭೋಗವತ್ಯೈ ನಮೋನಮಃ ॥ ೭೩ ॥

ಮಂದಾಕಿನ್ಯೈ ನಮಸ್ತೇಽಸ್ತು ಸ್ವರ್ಗದಾಯ್ಯೈ ನಮೋನಮಃ ।
ನಮಸ್ತ್ರೈಲೋಕ್ಯಮೂರ್ತಾಯ್ಯೈ ತ್ರಿದಶಾಯ್ಯೈ ನಮೋನಮಃ ॥ ೭೪ ॥

ನಮಸ್ತೇ ಶುಕ್ಲಸಂಸ್ಥಾಯ್ಯೈ ಕ್ಷೇಮವತ್ಯೈ ನಮೋನಮಃ ।
ತ್ರಿದಶಾಸನಸಂಸ್ಥಾಯ್ಯೈ ತೇಜೋವತ್ಯೈ ನಮೋಽಸ್ತು ತೇ ॥ ೭೫ ॥

ಮಂದಾಯ್ಯೈ ಲಿಂಗಧಾರಿಣ್ಯೈ ನಾರಾಯಣ್ಯೈ ನಮೋನಮಃ ।
ನಮಸ್ತೇ ವಿಶ್ವಮಿತ್ರಾಯ್ಯೈ ರೇವತ್ಯೈ ತೇ ನಮೋನಮಃ ॥ ೭೬ ॥

---

೭೩. ಎಲ್ಲಕ್ಕೂ ಶುದ್ಧಿಯನ್ನುಂಟುಮಾಡುವವಳು, ಪಾಪವಿಮೋಚಕಳೂ ಆದ ಗಂಗಾದೇವಿಗೆ ನಮಸ್ಕಾರ! ಭೋಗಮೋಕ್ಷಪ್ರದಾಯಕಳಾದ ಭೋಗವತೀದೇವಿಗೆ ನಮಸ್ಕಾರ ನಮಸ್ಕಾರ !

೭೪. ಮಂದಾಕಿನೀದೇವಿಗೆ ನಮಸ್ಕಾರ! ಸ್ವರ್ಗಪ್ರದಳೇ! ನಿನಗೆ ನಮಸ್ಕಾರ! ನಮಸ್ಕಾರ! ತ್ರೈಲೋಕ್ಯಮೂರ್ತಿಗೆ ನಮಸ್ಕಾರ! ದೇವತೆಯೇ! ನಿನಗೆ ನಮಸ್ಕಾರ ನಮಸ್ಕಾರ!

೭೫. ಶುಕ್ಲಸ್ಥಳು, ಕ್ಷೇಮವತಿಯೂ ಆದ ನಿನಗೆ ನಮಸ್ಕಾರ ನಮಸ್ಕಾರ! ದೇವಲೋಕದಲ್ಲಿರುವವಳು, ತೇಜೋವತಿಯೂ ಆದ ನಿನಗೆ ನಮಸ್ಕಾರ!

೭೬. ಮಂದಗಾಮಿನಿಯು, ಈಶ್ವರನಿಂದ ಧರಿಸಲ್ಪಟ್ಟಿರುವವಳು, ನಾರಾಯಣಿಯೂ ಆದ ದೇವಿಗೆ ನಮಸ್ಕಾರ ನಮಸ್ಕಾರ! ಜಗದ್ಧಿತಕರಳಾದ ದೇವಿಯೇ! ನಿನಗೆ ನಮಸ್ಕಾರ! ರೇವತೀದೇವಿಯೇ! ನಿನಗೆ ನಮಸ್ಕಾ ನಮಸ್ಕಾರ!

ಬೃಹತ್ಯೈ ತೇ ನಮೋ ನಿತ್ಯಂ ಲೋಕಧಾತ್ರ್ಯೈ ನಮೋನಮಃ ।
ನಮಸ್ತೇ ವಿಶ್ವಮುಖ್ಯಾಯೈ ನಂದಿನ್ಯೈ ತೇ ನಮೋನಮಃ ॥ ೭೭ ॥

ಪೃಥ್ವ್ಯೈ ಶಿವಾಮೃತಾಯೈ ಚ ವಿರಜಾಯೈ ನಮೋನಮಃ ।
ಪರಾವರಗತಾದ್ಯಾಯೈ ತಾರಾಯೈ ತೇ ನಮೋನಮಃ ॥ ೭೮ ॥

ನಮಸ್ತೇ ಸ್ವರ್ಗಸಂಸ್ಥಾಯೈ ಅಭಿನ್ನಾಯೈ ನಮೋನಮಃ ।
ಶಾಂತಾಯೈ ತೇ ಪ್ರತಿಷ್ಠಾಯೈ ವರದಾಯೈ ನಮೋನಮಃ ॥ ೭೯ ॥

ಉಗ್ರಾಯೈ ಮುಖಜಲ್ಪಾಯೈ ಸಂಜೀವಿನ್ಯೈ ನಮೋನಮಃ ।
ಬ್ರಹ್ಮಗಾಯೈ ಬ್ರಹ್ಮದಾಯೈ ದುರಿತಘ್ನ್ಯೈ ನಮೋನಮಃ ॥ ೮೦ ॥

ಪ್ರಣತಾರ್ತಿಪ್ರಭಂಜಿನ್ಯೈ ಜಗನ್ಮಾತ್ರೇ ನಮೋನಮಃ ।
ವಿಲುಷಾಯೈ ದುರ್ಗಹಂತ್ರ್ಯೈ ದಕ್ಷಾಯೈ ತೇ ನಮೋನಮಃ ॥ ೮೧ ॥

---

೭೭. ಪೂರ್ಣಳಾದ ನಿನಗೆ ನಮಸ್ಕಾರ! ಯಾವಾಗಲೂ ಲೋಕರಕ್ಷಕಳಿಗೆ ನಮಸ್ಕಾರ! ನಮಸ್ಕಾರ! ಜಗತ್ತಿನಲ್ಲಿ ಮುಖ್ಯಳಾದ ನಿನಗೆ ನಮಸ್ಕಾರ! ನಂದಿನಿಯಾದ ನಿನಗೆ ನಮಸ್ಕಾರ ನಮಸ್ಕಾರ!

೭೮. ಪೃಥ್ವೀನಾಮಕಳು, ಭೋಗಮೋಕ್ಷಪ್ರದಳೂ ಆದ ವಿರಜಾ ದೇವಿಗೆ ನಮಸ್ಕಾರ ನಮಸ್ಕಾರ! ಪರಾವರಗತಾದ್ಯಳೂ, ತಾರಕಳೂ ಆದ ನಿನಗೆ ನಮಸ್ಕಾರ ನಮಸ್ಕಾರ !

೭೯. ಸ್ವರ್ಗಸ್ಥಿತಳಾದ ನಿನಗೆ ನಮಸ್ಕಾರ! ಅಭಿನ್ನಳಿಗೆ ನಮಸ್ಕಾರ ನಮಸ್ಕಾರ! ಶಾಂತಳು, ವ್ಯವಸ್ಥಿತಳು, ವರದಾಯಕಳೂ ಆದ ದೇವಿಗೆ ನಮಸ್ಕಾರ ನಮಸ್ಕಾರ !

೮೦. ಉಗ್ರಳೂ, ಮುಖಜಲ್ಪಳೂ ಆದ ಸಂಜೀವಿನಿಗೆ ನಮಸ್ಕಾರ ನಮಸ್ಕಾರ! ಬ್ರಹ್ಮನನ್ನು ಹೊಂದಿರುವವಳು, ಬ್ರಹ್ಮದಾಯಕಳೂ ಆದ ಪಾಪಪರಿಹಾರಕಳಿಗೆ ನಮಸ್ಕಾರ ನಮಸ್ಕಾರ !

೮೧. ಭಕ್ತರಮನೋವ್ಯಥೆಗಳನ್ನುನಾಶಪಡಿಸುವ ಜಗನ್ಮಾತೆಗೆ ನಮಸ್ಕಾರ ನಮಸ್ಕಾರ! ವಿಲುಷೆಯು, ದುರ್ಗನಾಶಕಳು, ದಕ್ಷಳೂ ಆದ ನಿನಗೆ ನಮಸ್ಕಾರ ನಮಸ್ಕಾರ !

ಸರ್ವಾಪತ್ಪ್ರತಿಪಕ್ಷಾಯೈ ಮಂಗಲಾಯೈ ನಮೋನಮಃ ।
ಪರಾಪರೇ ಪರೇ ತುಭ್ಯಂ ನಮೋ ಮೋಕ್ಷಪ್ರದೇ ಸದಾ ।
ಗಂಗಾ ಮಮಾಗ್ರತೋ ಭೂಯಾದ್ಗಂಗಾ ಮೇ ಪಾರ್ಶ್ವಯೋಸ್ತಥಾ ॥೮೨॥

ಗಂಗಾ ಮೇ ಸರ್ವತೋ ಭೂಯಾತ್ತ್ವಯಿ ಗಂಗೇಸ್ತು ಮೇ ಸ್ಥಿತಿಃ ।
ಆದೌ ತ್ವಮಂತೇ ಮಧ್ಯೇ ಚ ಸರ್ವಾ ತ್ವಂ ಗಾಂ ಗತೇ ಶಿವೇ ॥ ೮೩ ॥

ತ್ವಮೇವ ಮೂಲಪ್ರಕೃತಿಸ್ತ್ವಂ ಹಿ ನಾರಾಯಣಃ ಪ್ರಭುಃ ।
ಗಂಗೇ ತ್ವಂ ಪರಮಾತ್ಮಾ ಚ ಶಿವಸ್ತುಭ್ಯಂ ನಮೋನಮಃ ॥ ೮೪ ॥

ಇತೀದಂ ಪಠತಿ ಸ್ತೋತ್ರಂ ನಿತ್ಯಂ ಭಕ್ತಿಪರಸ್ತು ಯಃ ।
ಶೃಣೋತಿ ಶ್ರದ್ಧಯಾ ವಾಪಿ ಕಾಯವಾಚಿಕಸಂಭವೈಃ ॥ ೮೫ ॥

---

೮೨. ಸಕಲಾಪತ್ತುಗಳನ್ನೂ ವಿರೋಧಿಸುವವಳಾದ ಮಂಗಳದೇವಿಗೆ ನಮಸ್ಕಾರ ನಮಸ್ಕಾರ! ಪರಾಪರಳು, ಪರಳೂ, ಮೋಕ್ಷದಾಯಕಳೂ ಆದ ದೇವಿಯೇ! ನಿನಗೆ ನಮಸ್ಕಾರ! ಗಂಗೆಯು ಯಾವಾಗಲೂ ನನ್ನ ಮುಂದೆಯೂ, ಪಾರ್ಶ್ವಗಳಲ್ಲಿಯೂ ಸನ್ನಿಹಿತಳಾಗಲಿ!

೮೩. ಗಂಗೆಯು ನನ್ನ ಸುತ್ತಲೂ ಸನ್ನಿಹಿತಳಾಗಲಿ! ಗಂಗೆಯೇ! ನಿನ್ನ ಸನ್ನಿಧಿಯಲ್ಲಿಯೇ ನನಗೆ ವಾಸವು ಲಭಿಸಲಿ! ಭೂಲೋಕಕ್ಕೆ ಬಂದಿರುವ ಮಂಗಳದೇವಿಯೇ! ಆದಿ ಮಧ್ಯಾವಸಾನಗಳಲ್ಲಿಯೂ, ವ್ಯಾಪಕಳಾದ ನೀನೇ ಸನ್ನಿಹಿತಳಾಗಿರು!

೮೪. ಗಂಗೆಯೇ! ನೀನೇ ಮೂಲಪ್ರಕೃತಿಯು! ನೀನೇ ನಾರಾಯಣ ಸ್ವಾಮಿಯು! ನೀನೇ ಪರಮಾತ್ಮ! ನೀನೇ ಶಿವ! ನಿನಗೆ ನಮಸ್ಕಾರ ನಮಸ್ಕಾರ! ಎಂದರೆ ಗಂಗೆಯಲ್ಲಿ ಸಕಲದೇವತೆಗಳೂ ಸನ್ನಿಹಿತರಾಗಿರುವರೆಂದು ತಾತ್ಪರ್ಯ.

೮೫-೮೬. ಈ ಸ್ತೋತ್ರವನ್ನು ನಿತ್ಯವೂ ಭಕ್ತಿಯಿಂದ ಪಠನೆಮಾಡುವವನು ಮತ್ತು ಶ್ರದ್ಧೆಯಿಂದ ಕೇಳುವವನೂ ಸಹ ಕಾಯಿಕ, ವಾಚನಿಕ, ಮಾನಸಿಕಗಳಾದ ಹತ್ತುವಿಧ ದೋಷಗಳೆಲ್ಲದುರಿಂದಲೂ ಮುಕ್ತನಾಗುತ್ತಾನೆ.

ರೋಗಿಗೆ ರೋಗವೂ, ವಿಪತ್ತಿಗೀಡಾದವನಿಗೆ ವಿಪತ್ತೂ ನಾಶವಾಗುವುದು,

ದಶಧಾ ಸಂಸ್ಥಿತೈರ್ದೋಷೈಃ ಸರ್ವೈರೇವ ಪ್ರಮುಚ್ಯತೇ ।
ರೋಗೀ ಪ್ರಮುಚ್ಯತೇ ರೋಗಾನ್ಮುಚ್ಯೇತಾಪನ್ನ ಆಪದಃ ॥ ೮೬ ॥

ದ್ವಿಷದ್ಭ್ಯೋ ಬಂಧನಾಚ್ಚಾಪಿ ಭಯೇಭ್ಯಶ್ಚ ವಿಮುಚ್ಯತೇ ।
ಸರ್ವಾನ್ಕಾಮಾನವಾಪ್ನೋತಿ ಪ್ರೇತ್ಯ ಬ್ರಹ್ಮಣಿ ಲೀಯತೇ ॥ ೮೭ ॥

ಇದಂ ಸ್ತೋತ್ರಂ ಗೃಹೇ ಯಸ್ಯ ಲಿಖಿತಂ ಪರಿಪೂಜ್ಯತೇ ।
ನಾಗ್ನಿಚೌರಭಯಂ ತತ್ರ ಪಾಪೇಭ್ಯೋಽಪಿ ಭಯಂ ನ ಹಿ ॥ ೮೮ ॥

ತಸ್ಯಾಂ ದಶಮ್ಯಾಮೇತಚ್ಚ ಸ್ತೋತ್ರಂ ಗಂಗಾಜಲೇ ಸ್ಥಿತಃ ।
ಜಪಂಸ್ತು ದಶಕೃತ್ವಶ್ಚ ದರಿದ್ರೋ ವಾಪಿ ಚಾಕ್ಷಮಃ ॥ ೮೯ ॥

ಸೋಽಪಿ ತತ್ಫಲಮಾಪ್ನೋತಿ ಗಂಗಾಂ ಸಂಪೂಜ್ಯ ಭಕ್ತಿತಃ ।
ಪೂರ್ವೋಕ್ತೇನ ವಿಧಾನೇನ ಫಲಂ ಯತ್ಪರಿಕೀರ್ತಿತಂ ॥ ೯೦ ॥

ಯಥಾ ಗೌರೀ ತಥಾ ಗಂಗಾ ತಸ್ಮಾದ್ಗೌರ್ಯಾಸ್ತು ಪೂಜನೇ ।
ವಿಧಿರ್ಯೋ ವಿಹಿತಃ ಸಮ್ಯಕ್ಸೋಽಪಿ ಗಂಗಾಪ್ರಪೂಜನೇ ॥ ೯೧ ॥

---

೮೭. ಶತ್ರುಬಂಧನದಿಂದಲೂ, ಭಯದಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ ಹೆಚ್ಚೇನು? ಅಂತಹವನು ಸಕಲೇಷ್ಟಾರ್ಥಗಳನ್ನೂ ಪಡೆಯುವನು. ಮರಣಾನಂತರ ಬ್ರಹ್ಮನಲ್ಲಿ ಲೀನನಾಗುವನು.

೮೮. ಈ ಸ್ತೋತ್ರವನ್ನು ಬರೆದು ಆ ಪುಸ್ತಕವನ್ನು ಮನೆಯಲ್ಲಿಟ್ಟುಕೊಂಡು ಪೂಜಿಸುತ್ತಿರುವವನಿಗೆ ಅಗ್ನಿಭಯ, ಕಳ್ಳಕಾಕರಭಯ ಮತ್ತು ಪಾಪಭೀತಿಯೂ ಸಹ ಉಂಟಾಗುವುದಿಲ್ಲ.

೮೯-೯೦. ಬಡವ ಅಥವಾ ಅಸಮರ್ಥನಾದವನು ದಶಮಿಯದಿನದಲ್ಲಿ ಈ ಸ್ತೋತ್ರವನ್ನು ಗಂಗೆಯ ನೀರಿನಲ್ಲಿ ನಿಂತು ಹತ್ತಾವರ್ತಿ ಜಪಿಸಿದರೆ ಅವನಿಗೂ ಸಹ ಪೂರ್ವೋಕ್ತ ವಿಧಾನಪೂರ್ವಕವಾಗಿ ಭಕ್ತಿಯಿಂದ ಗಂಗೆಯನ್ನು ಪೂಜೆ ಮಾಡಿದವನಿಗೆ ವಿಹಿತವಾಗಿರುವ ಫಲವು ಬರುತ್ತದೆ.

೯೧. ಗೌರೀದೇವಿಯಂತೆ ಗಂಗೆಯೂ ಆಗಿರುವಕಾರಣ ಗೌರೀಪೂಜೆಗೆ ಉಕ್ತವಾಗಿರುವ ವಿಧಾನವನ್ನೇ ಗಂಗಾಪೂಜೆಗೂ ಸರಿಯಾಗಿ ಆಶ್ರಯಿಸಬೇಕು.

ಯಥಾ ಶಿವಸ್ತಥಾ ವಿಷ್ಣುರ್ಯಥಾ ವಿಷ್ಣುಸ್ತಥಾ ಹ್ಯುಮಾ |
ಉಮಾ ಯಥಾ ತಥಾ ಗಂಗಾ ಚಾತ್ರ ಭೇದೋ ನ ವಿದ್ಯತೇ || ೯೨ ||

ವಿಷ್ಣುರುದ್ರಾಂತರಂ ಯಶ್ಚ ಗಂಗಾಗೌರ್ಯಂತರಂ ತಥಾ |
ಲಕ್ಷ್ಮೀಗೌರ್ಯಂತರಂ ಯಶ್ಚ ಪ್ರಬ್ರೂತೇ ಮೂಢಧೀಸ್ತು ಸಃ || ೯೩ ||

ಶುಕ್ಲಪಕ್ಷೇ ದಿವಾ ಭೂಮೌ ಗಂಗಾಯಾಮುತ್ತರಾಯಣೇ |
ಧನ್ಯಾದೇಹಂ ವಿಮುಂಚಂತಿ ಹೃದಯಸ್ಥೇ ಜನಾರ್ದನೇ || ೯೪ ||

ಯೇ ಮುಂಚಂತಿ ನರಾಃ ಪ್ರಾಣಾನ್ ಗಂಗಾಯಾಂ ವಿಧಿನಂದಿನಿ |
ತೇ ವಿಷ್ಣುಲೋಕಂ ಗಚ್ಛಂತಿ ಸ್ತೂಯಮಾನಾ ದಿವಿ ಸ್ಥಿತೈಃ || ೯೫ ||

ಅರ್ಧೋದಕೇನ ಜಾಹ್ನವ್ಯಾಂ ಮ್ರಿಯತೇನಶನೇನ ಯಃ |
ಸ ಯಾತಿ ನ ಪುನರ್ಜನ್ಮ ಬ್ರಹ್ಮಸಾಯುಜ್ಯಮೇತಿ ಹಿ || ೯೬ ||

---

೯೨. ಶಿವನಂತೆ ವಿಷ್ಣುವು, ವಿಷ್ಣುವಿನಂತೆ ಉಮೆಯು, ಉಮೆಯಂತೆ ಗಂಗೆಯು, ಇದರಲ್ಲಿ ಭೇದವಿಲ್ಲ. ಎಂದರೆ ಎಲ್ಲರಲ್ಲಿಯೂ ಸನ್ನಿಹಿತನಾಗಿರುವ ದೇವನೊಬ್ಬನೇ ಎಂದು ತಾತ್ಪರ್ಯ.

೯೩. ವಿಷ್ಣು ರುದ್ರಪದ ಮುಖ್ಯವಾಚ್ಯ ದೇವತೆಗಳಿಗೂ ಗಂಗೆ ಗೌರಿಯರಿಗೂ, ಲಕ್ಷ್ಮೀಗೌರಿಯರಿಗೂ ಅಂತರವನ್ನು ಹೇಳುವವನು ಮೂಢನು.

೯೪. ಉತ್ತರಾಯಣದಲ್ಲಿ ಶುಕ್ಲಪಕ್ಷದಲ್ಲಿ ಹಗಲು ಜನಾರ್ದನನನ್ನು ಮನಸ್ಸಿನಲ್ಲಿ ನೆನೆಯುತ್ತ ಭೂಮಿಯಲ್ಲಿ ದೇಹಬಿಡುವವರು ಧನ್ಯರು !

೯೫. ಬ್ರಹ್ಮಕುಮಾರಿಯೇ ! ಗಂಗೆಯತೀರದಲ್ಲಿ ಪ್ರಾಣಬಿಡುವವರು ಅಂತರಿಕ್ಷದಲ್ಲಿರುವ ದೇವತೆಗಳಿಂದ ಸ್ತೋತ್ರವಮಾಡಿಸಿಕೊಳ್ಳಲ್ಪಟ್ಟವರಾಗಿ ವಿಷ್ಣುಲೋಕಕ್ಕೆ ಹೋಗುವರು.

೯೬. ಅರ್ಧೋದಕ ಮತ್ತು ಅನಶನವ್ರತಗಳಿಂದ ಗಂಗೆಯತೀರದಲ್ಲಿ ಮೃತನಾಗುವವನು ಪುನಃ ಜನ್ಮವನ್ನು ಹೊಂದುವುದಿಲ್ಲ. ಬ್ರಹ್ಮಸಾಯುಜ್ಯವನ್ನೇ ಹೊಂದುವನು.

ಯಾ ಗತಿರ್ಯೋಗಯುಕ್ತಸ್ಯ ಸಾತ್ವಿಕಸ್ಯ ಮನೀಷಿಣಃ ।
ಸಾ ಗತಿಸ್ತ್ಯಜತಃ ಪ್ರಾಣಾನ್ ಗಂಗಾಯಾಂ ತು ಶರೀರಿಣಃ ॥ ೯೭ ॥

ಅನಾಶನಂ ಗೃಹೀತ್ವಾ ಯೋ ಗಂಗಾತೀರೇ ಮೃತೋ ನರಃ ।
ಸತ್ಯಮೇವ ಪರಂ ಲೋಕಮಾಪ್ನೋತಿ ಪಿತೃಭಿಃ ಸಹ ॥ ೯೮ ॥

ಗಂಗಾಯಾಂ ಮರಣಾತ್ ಪ್ರಾಣಾನ್ ಯೋ ಪ್ರಾಜ್ಞಸ್ತ್ಯಕ್ತುಮಿಚ್ಛತಿ ।
ಗತಾನಿ ಬಹುಜನ್ಮಾನಿ ಯತ್ರ ಯತ್ರ ಮೃತಾನಿ ಚ ॥ ೯೯ ॥

ಮಹಾಂಶ್ಚಾಪಿ ಗತಃ ಕಾಲೋ ಯತ್ರ ತತ್ರಾಪಿ ಗಚ್ಛತಃ ।
ಅತ್ರ ದೂರೇ ಸಮೀಪೇ ಚ ಸದೃಶಂ ಯೋಜನದ್ವಯಂ ॥ ೧೦೦ ॥

ಗಂಗಾಯಾಂ ಮರಣೇನೇಹ ನಾತ್ರ ಕಾರ್ಯಾ ವಿಚಾರಣಾ ।
ಜ್ಞಾನತೋಽಜ್ಞಾನತೋವಾಪಿ ಕಾಮತೋಽಕಾಮತೋಽಪಿ ವಾ ॥ ೧೦೧ ॥

---

೯೭. ಯೋಗಯುಕ್ತನು ಸಾತ್ವಿಕನೂ ಆದ ಜ್ಞಾನಿಗೆ ಆಗುವ ಸದ್ಗತಿಯು ಗಂಗಾತೀರದಲ್ಲಿ ಪ್ರಾಣಬಿಡುವ ಮನುಷ್ಯನಿಗೆ ಸಂಭವಿಸುತ್ತದೆ.

೯೮. ಗಂಗಾತೀರದಲ್ಲಿ ಅನಶನವ್ರತವನ್ನು ಧರಿಸಿ ಮೃತನಾದ ಮನುಷ್ಯನು ನಿಜವಾಗಿಯೂ ಪಿತೃಗಳೊಡನೆ ಪರಲೋಕವನ್ನು ಹೊಂದುವನು.

೯೯-೧೦೧. ಗಂಗಾತೀರದಲ್ಲಿ ಮರಣ ಉಂಟಾಗಿ ಪ್ರಾಣಬಿಡಬೇಕೆಂದು ಬಯಸುವ ಪ್ರಾಜ್ಞನು ಎಲ್ಲೆಲ್ಲಿಯೋ ಮರಣವಾಗಿ ಬಹುಜನ್ಮಗಳು ಕಳೆದಿದ್ದರೂ ಸಹ ದೂರ, ಸಮೀಪಪ್ರದೇಶಗಳಲ್ಲಿ ಎಲ್ಲಿ ಮೃತನಾದರೂ ಸರಿ ಅದು ಎರಡು ಗಾವುದಪ್ರದೇಶಕ್ಕೆ ಸದೃಶವಾಗಿ ಗಂಗೆಯಲ್ಲಿ ಮರಣವಾಗುವುದರಿಂದ ಬರುವಷ್ಟು ಫಲವನ್ನು ಕೊಡುತ್ತದೆ. ಈ ವಿಷಯದಲ್ಲಿ ಸಂಶಯಪಡಬಾರದು.

೧೦೨-೧೦೩. ತಿಳಿದು ಅಥವಾ ತಿಳಿಯದೆಯೂ, ಬಯಸಿ ಅಥವಾ ಬಯಸದೆಯೂ ಗಂಗೆಯಲ್ಲಿ ಮೃತನಾದ ಮನುಷ್ಯನು ಸ್ವರ್ಗಮೋಕ್ಷಗಳನ್ನು ಹೊಂದುವನು. ಪ್ರಾಣಗಳು ಹೋಗುತ್ತಿರುವಾಗ ಗಂಗೆಯನ್ನು ಸ್ಮರಿಸುವ ಅಥವಾ ಸ್ಪರ್ಶ

ಗಂಗಾಯಾಂ ತು ಮೃತೋ ಮರ್ತ್ಯಃ ಸ್ವರ್ಗಂ ಮೋಕ್ಷಂ ಚ ವಿಂದತಿ ।
ಪ್ರಾಣೇಷೂತ್ಸೃಜ್ಯಮಾನೇಷು ಯೋ ಗಂಗಾಂ ಸಂಸ್ಮರೇನ್ನರಃ ॥ ೧೦೨ ॥
ಸ್ಪೃಶೇದ್ವಾ ಪಾಪಶೀಲೋಽಪಿ ಸರ್ವೇ ಯಾಂತಿ ಪರಾಂ ಗತಿಂ ॥ ೧೦೩ ॥

ಗಂಗಾಂ ಗತ್ವಾ ಯೈಃ ಶರೀರಂ ವಿಸೃಷ್ಟಂ
ಪ್ರಾಪ್ತಾ ಧೀರಾಸ್ತೇ ತು ದೇವೈಃ ಸಮತ್ವಂ ।
ತಸ್ಮಾತ್ಸರ್ವಾನ್ ಪ್ರೋಹ್ಯ ಮುಕ್ತಿಪ್ರದಾನ್ವೈ
ಸೇವೇದ್ಗಂಗಾಮಾಶರೀರಸ್ಯ ಪಾತಂ ॥ ೧೦೪ ॥

ಅಂತರಿಕ್ಷೇ ಕ್ಷಿತೌ ತೋಯೇ ಪಾಪೀಯಾನಪಿ ಯೋ ಮೃತಃ ।
ಬ್ರಹ್ಮವಿಷ್ಣುಶಿವೈಃ ಪೂಜ್ಯಂ ಪದಮಕ್ಷಯ್ಯಮಶ್ನುತೇ ॥ ೧೦೫ ॥

ಯೋ ಧರ್ಮಿಷ್ಠಶ್ಚ ಸಪ್ರಾಣಃ ಪ್ರಯತಃ ಶಿಷ್ಟಸಂಮತಃ ।
ಚಿಂತಯೇನ್ಮನಸಾ ಗಂಗಾಂ ಸ ಗತಿಂ ಪರಮಾಂ ಲಭೇತ ॥ ೧೦೬ ॥

---

ಮಾಡುವ ಮನುಷ್ಯನು ಪಾಪಶೀಲನಾದರೂ ಅವರೆಲ್ಲರೂ ಉತ್ತಮಗತಿಯನ್ನು ಹೊಂದುವರು.

೧೦೪. ಗಂಗೆಯುಸನ್ನಿಧಿಗೆ ಹೋಗಿ ಶರೀರತ್ಯಾಗಮಾಡುವ ಧೀರರು ದೇವತೆಗಳಿಗೆ ಸಮರಾಗುವರು. ಆದಕಾರಣ ಮುಕ್ತಿದಾಯಕವಾದ ಎಲ್ಲವನ್ನೂ ಬಿಟ್ಟು ಶರೀರಬೀಳುವವರೆಗೂ (ಸಾಯುವವರೆಗೂ) ಗಂಗೆಯನ್ನೇ ಸೇವಿಸಬೇಕು.

೧೦೫. ಅಂತರಿಕ್ಷ, ಭೂಮಿ ಮತ್ತು ಉದಕಗಳಲ್ಲಿ ಮೃತನಾಗುವ ಪಾಪಿಷ್ಠನೂ ಸಹ ಬ್ರಹ್ಮ ವಿಷ್ಣು ಶಿವರಿಂದ ಸತ್ಕರಿಸಲ್ಪಡುವ, ನಾಶವಿಲ್ಲದ, ಸ್ಥಾನವನ್ನು ಹೊಂದುವನು.

೧೦೬. ಧರ್ಮಿಷ್ಠನು ಬದುಕಿರುವಾಗ ಜಿತೇಂದ್ರಿಯನು, ಶಿಷ್ಟಸಮ್ಮತನೂ ಆಗಿ ಮನಃಪೂರ್ವಕವಾಗಿ ಗಂಗೆಯನ್ನು ಚಿಂತಿಸಿದರೆ ಅವನು ಉತ್ತಮಗತಿಯನ್ನು ಹೊಂದುವನು,

ಯತ್ರ ತತ್ರ ಮೃತೋ ವಾಪಿ ಮರಣೇ ಸಮುಪಸ್ಥಿತೇ ।
ಭಕ್ತ್ಯಾ ಗಂಗಾಂ ಸ್ಮರನ್ಯಾತಿ ಶೈವಂ ವಾ ವೈಷ್ಣವಂ ಪುರಂ ॥ ೧೦೭ ॥

ಶಂಭೋರ್ಜಟಾಕಲಾಪಾತ್ತು ವಿನಿಷ್ಕ್ರಾಂತಾತಿಕರ್ಕಶಾತ್ ।
ಪ್ಲಾವಯಿತ್ವಾ ದಿವಂ ನಿನ್ಯೇತಿಪಾಪಾನ್ಸಗರಾತ್ಮಜಾನ್ ॥ ೧೦೮ ॥

ಯಾವಂತ್ಯಸ್ಥೀನಿ ಗಂಗಾಯಾಂ ತಿಷ್ಠಂತಿ ಪುರುಷಸ್ಯ ವೈ ।
ತಾವದ್ವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ॥ ೧೦೯ ॥

ಗಂಗಾತೋಯೇ ತು ಯಸ್ಯಾಸ್ಥಿ ನೀತ್ವಾ ಪ್ರಕ್ಷಿಪ್ಯತೇ ನರೈಃ ।
ತತ್ಕಾಲವಾದಿತಃ ಕೃತ್ವಾ ಸ್ವರ್ಗಲೋಕೇ ಭವೇತ್ಸ್ಥಿತಿಃ ॥ ೧೧೦ ॥

ಗಂಗಾತೋಯೇ ತು ಯಸ್ಯಾಸ್ಥಿ ಪ್ರಾಪ್ಯತೇ ಶುಭಕರ್ಮಣಃ ।
ನ ತಸ್ಯ ಪುನರಾವೃತ್ತಿಃ ಬ್ರಹ್ಮಲೋಕಾತ್ಕಥಂಚನ ॥ ೧೧೧ ॥

---

೧೦೭. ಎಲ್ಲೆಲ್ಲಿ ಸತ್ತರೂ ಮರಣಕಾಲದಲ್ಲಿ ಭಕ್ತಿಯಿಂದ ಗಂಗೆಯ ಸ್ಮರಣಮಾಡುವವನು ಶೈವ ಅಥವಾ ವೈಷ್ಣವಲೋಕವನ್ನು ಹೊಂದುವನು.

೧೦೮. ಅತ್ಯಂತ ಕಠಿಣವಾದ ಶಂಭುವಿನ ಜಟಾಸಮೂಹದಿಂದ ಹೊರಟ ಗಂಗೆಯು ಪಾಪಿಷ್ಠರಾದ ಸಗರಪುತ್ರರನ್ನು ಶುದ್ಧಿಮಾಡಿ ಸ್ವರ್ಗಲೋಕಕ್ಕೆ ಕರೆದು ಕೊಂಡು ಹೋಯಿತು.

೧೦೯. ಗಂಗೆಯಲ್ಲಿ ಮನುಷ್ಯನ ಎಷ್ಟುಮೂಳೆಗಳು ಸೇರುತ್ತವೆಯೋ ಅವನು ಅಷ್ಟುಸಾವಿರ ವರ್ಷಗಳಕಾಲ ಸ್ವರ್ಗಲೋಕದಲ್ಲಿ ಭೋಗಿಸುವನು.

೧೧೦. ಪುತ್ರಾದಿಗಳು ಯಾವನಮೂಳೆಯನ್ನು ತೆಗೆದುಕೊಂಡುಹೋಗಿ ಗಂಗೋದಕದಲ್ಲಿ ಹಾಕುವರೋ ಆಗಿನಿಂದ ಅವನಿಗೆ ಸ್ವರ್ಗಲೋಕವಾಸವು ಲಭಿಸುವುದು.

೧೧೧. ಯಾವ ಪುಣ್ಯವಂತನ ಅಸ್ಥಿಯು ಗಂಗೋದಕದಲ್ಲಿ ಸೇರುವುದೋ ಅವನು ಬ್ರಹ್ಮಲೋಕದಿಂದ ಹೇಗೂ ಪುನಃ ಹಿಂತಿರುಗುವುದಿಲ್ಲ. ಅಲ್ಲಿಯೇ ಸ್ಥಿರವಾಗಿರುವನು.

ದಶಾಹಾಭ್ಯಂತರೇ ಯಸ್ಯ ಗಂಗಾತೋಯೇಸ್ಥಿಸಂಗತಂ ।
ಗಂಗಾಯಾಂ ಮರಣೇ ಯಾದೃಕ್ತಾದೃಕ್ಫಲಮವಾಪ್ನುಯಾತ್ ॥ ೧೧೨ ॥

ಸ್ನಾತ್ವಾ ತತಃ ಪಂಚಗವ್ಯೇನ ಸಿಕ್ತ್ವಾ
ಹಿರಣ್ಯಮಧ್ವಾಜ್ಯತಿಲೈರ್ನಿಯೋಜ್ಯ ।
ತದಸ್ಥಿಪಿಂಡಂ ಪುಟಕೇ ನಿಧಾಯ
ಪಶ್ಯನ್ ದಿಶಂ ಪ್ರೇತಗಣೋಪಗೂಢಾಂ ॥ ೧೧೩ ॥

ನಮೋಸ್ತು ಧರ್ಮಾಯ ವದನ್ ಪ್ರವಿಶ್ಯ
ಜಲಂ ಸಮೇ ಪ್ರೀತ ಇತಿ ಕ್ಷಿಪೇಚ್ಚ ।
ಸ್ನಾತ್ವಾ ತತಸ್ತೀರ್ಥವರಾಕ್ಷಯಂ ಚ
ದೃಷ್ಟ್ವಾ ಪ್ರದದ್ಯಾದಥ ದಕ್ಷಿಣಾಂ ತು ॥ ೧೧೪ ॥

ಏವಂ ಕೃತ್ವಾ ಪ್ರೇತಪುರೇ ಸ್ಥಿತಸ್ಯ ।
ಸ್ವರ್ಗೇ ಗತಿಃ ಸ್ಯಾತ್ತು ಮಹೇಂದ್ರತುಲ್ಯಾ ॥ ೧೧೫ ॥

---

೧೧೨. ಮೃತನಾದ ಹತ್ತುದಿನಗಳೊಳಗೆ ಗಂಗೋದಕದಲ್ಲಿ ಯಾವನ ಅಸ್ಥಿಯು ಸೇರುತ್ತದೆಯೋ ಅವನಿಗೆ ಗಂಗೆಯಲ್ಲಿ ಮರಣವಾದರೆ ಬರುವಷ್ಟು ಫಲ ಬರುವುದು.

೧೧೩-೧೧೪. ಸ್ನಾನಮಾಡಿ ಮೂಳೆಗಳನ್ನು ಒಟ್ಟಿಗೆಸೇರಿಸಿ ಅದನ್ನು ಪಂಚಗವ್ಯದಿಂದ ಪ್ರೋಕ್ಷಿಸಿ ಸುವರ್ಣ, ಮಧು, ಘೃತ ಮತ್ತು ಎಳ್ಳುಗಳನ್ನು ಸೇರಿಸಿ ಬೊಗಸೆಯಲ್ಲಿಟ್ಟುಕೊಂಡು ಪ್ರೇತಗಣಗಳಿರುವ ದಿಕ್ಕನ್ನು ನೋಡುತ್ತ "ನಮೋಸ್ತು ಧರ್ಮಾಯ" ಎಂದು ಹೇಳುವವನಾಗಿ ನೀರಿನಲ್ಲಿ ಪ್ರವೇಶಿಸಿ 'ಅವನು ಪ್ರೀತನಾಗಲಿ' ಎಂದು ಅನುಸಂಧಾನಮಾಡಿಕೊಂಡು ಬೊಗಸೆಯಲ್ಲಿಟ್ಟುಕೊಂಡಿದ್ದ ಅಸ್ಥಿಗಳನ್ನು ನೀರಿನಲ್ಲಿ ಹಾಕಬೇಕು. ಬಳಿಕ ಸ್ನಾನಮಾಡಿ ಅಕ್ಷಯವಾದ ಉತ್ತಮತೀರ್ಥವನ್ನು ನೋಡಿ ಬ್ರಾಹ್ಮಣರಿಗೆ ದಕ್ಷಿಣೆ ಕೊಡಬೇಕು.

೧೧೫. ಪುತ್ರಾದಿಗಳು ಹೀಗೆ ಮಾಡಿದರೆ ಪ್ರೇತಪುರದಲ್ಲಿದ್ದ ಪಿತೃವಿಗೆ ಸ್ವರ್ಗವು ಲಭಿಸಿ ಅಲ್ಲಿ ಮಹೇಂದ್ರನಿಗೆ ಸಮಾನವಾದ ಗತಿಯುಂಟಾಗುವುದು.

ಪ್ರವಾಹಮವಧಿಂ ಕೃತ್ವಾ ಯಾವದ್ಧಸ್ತಚತುಷ್ಟಯಂ ।
ತತ್ರ ನಾರಾಯಣಃ ಸ್ವಾಮೀ ನಾನ್ಯಃ ಸ್ವಾಮೀ ಕದಾಚನ ॥ ೧೧೬ ॥

ನ ತತ್ರ ಪ್ರತಿಗೃಹ್ಣೀಯಾತ್ಪ್ರಾಣೈಃ ಕಂಠಗತೈರಪಿ ।
ಭಾದ್ರಶುಕ್ಲಚತುರ್ದಶ್ಯಾಂ ಯಾವದಾಕ್ರಮತೇ ಜಲಂ ॥ ೧೧೭ ॥

ತಾವದ್ಗರ್ಭಂ ವಿಜಾನೀಯಾತ್ತದೂರ್ಧ್ವಂ ತೀರಮುಚ್ಯತೇ ।
ಸಾರ್ಧಹಸ್ತಶತಂ ಯಾವದ್ಗರ್ಭಸ್ತೀರಂ ತತಃ ಪರಂ ॥ ೧೧೮ ॥

ಇತಿ ಕೇಷಾಂ ಮತಂ ದೇವಿ ಶ್ರುತಿಸ್ಮೃತಿಷು ಸಂಮತಂ ।
ತೀರಾದ್ಗವ್ಯೂತಿಮಾತ್ರಂ ತು ಪರಿತಃ ಕ್ಷೇತ್ರಮುಚ್ಯತೇ ॥ ೧೧೯ ॥

ತೀರಂ ತ್ಯಕ್ತ್ವಾ ವಸೇತ್ ಕ್ಷೇತ್ರೇ ತೀರೇ ವಾಸೋ ನ ಚೇಷ್ಯತೇ ।
ಏಕಯೋಜನವಿಸ್ತೀರ್ಣಾ ಕ್ಷೇತ್ರಸೀಮಾ ತಟದ್ವಯಾತ್ ॥ ೧೨೦ ॥

---

೧೧೬. ಪ್ರವಾಹಸ್ಥಾನದಿಂದ ನಾಲ್ಕುಹಸ್ತಗಳವರೆಗಿನಸ್ಥಳದಲ್ಲಿ ನಾರಾಯಣಸ್ವಾಮಿಯೇ ಸ್ವತಃ ಸನ್ನಿಹಿತನಾಗಿರುವನು. ಆ ಪ್ರದೇಶಕ್ಕೆ ಯಾವಾಗಲೂ ಬೇರೆ ಸ್ವಾಮಿಯಿಲ್ಲ.

೧೧೭-೧೧೮. ಆ ಸ್ಥಳದಲ್ಲಿ ಪ್ರಾಣಹೋಗುವ ಸಂದರ್ಭಬಂದರೂ ಪ್ರತಿಗ್ರಹಮಾಡಬಾರದು. ಭಾದ್ರಪದಮಾಸದ ಶುಕ್ಲ ಚತುರ್ದಶಿಯ ದಿನದಲ್ಲಿ ನೀರು ಎಷ್ಟು ಪ್ರದೇಶವನ್ನಾಕ್ರಮಿಸತ್ತದೆಯೋ ಅಷ್ಟುಸ್ಥಳವು ಗಂಗೆಯಗರ್ಭವೆಂದೂ, ಅದಕ್ಕಿಂತ ದೂರವಾದ ಭಾಗವು ತೀರವೆಂದೂ ಉಕ್ತವಾಗಿದೆ.

೧೧೮-೧೧೯. ದೇವಿಯೇ! ಪ್ರವಾಹಸ್ಥಾನದಿಂದ ನೂರೈವತ್ತು ಹಸ್ತಪರಿಮಿತ ಪ್ರದೇಶವು ಗರ್ಭವೆಂದೂ ಅದರ ಮುಂದಿನಭಾಗವು ತೀರವೆಂದೂ ಕೆಲವರ ಮತವೆಂದು ಶ್ರುತಿಸ್ಮೃತಿಗಳಲ್ಲಿ ಉಕ್ತವಾಗಿದೆ. ತೀರದ ಸುತ್ತಲೂ ಎರಡುಹರಿದಾರಿಯ ಪ್ರದೇಶವು ಕ್ಷೇತ್ರವೆನಿಸುವುದು.

೧೨೦. ತೀರವನ್ನುಬಿಟ್ಟು ಕ್ಷೇತ್ರದಲ್ಲಿ ವಾಸಮಾಡಬೇಕು. ತೀರದಲ್ಲಿ ವಾಸಮಾಡುವುದು ಜ್ಞಾನಿಸಮ್ಮತವಲ್ಲ. ನದಿಯ ಎರಡುದಡಗಳಿಂದಲೂ ಒಂದು ಗಾವುದದವರೆಗೂ ಕ್ಷೇತ್ರದ ಎಲ್ಲೆಯ ವಿಸ್ತಾರವು.

ಗಂಗಾಸೀಮಂ ನ ಲಂಘಂತಿ ಪಾಪಾನ್ಯಪ್ಯಖಿಲಾನ್ಯಪಿ |
ತಾಂ ತು ದೃಷ್ಟ್ವಾ ಪಲಾಯಂತೇ ಯಥಾ ಸಿಂಹಂ ವನೌಕಸಃ || ೧೨೧ ||

ಯತ್ರ ಗಂಗಾ ಮಹಾಭಾಗೇ ರಾಮಶಂಭುತಪೋವನಂ |
ಸಿದ್ಧಕ್ಷೇತ್ರಂ ತು ತಜ್ಜ್ಞೇಯಂ ಸಮಂತಾತ್ತು ತ್ರಿಯೋಜನಂ || ೧೨೨ ||

ತೀರ್ಥೇ ನ ಪ್ರತಿಗೃಹ್ಣೀಯಾತ್ಪುಣ್ಯೇಷ್ವಾಯತನೇಷು ಚ |
ನಿಮಿತ್ತೇಷು ಚ ಸರ್ವೇಷು ತನ್ನಿವೃತ್ತೋ ಭವೇನ್ನರಃ || ೧೨೩ ||

ತೀರ್ಥೇ ಯಃ ಪ್ರತಿಗೃಹ್ಣಾತಿ ಪುಣ್ಯೇಷ್ವಾಯತನೇಷು ಚ |
ನಿಷ್ಫಲಂ ತಸ್ಯ ತತ್ತೀರ್ಥಂ ಯಾವತ್ತದ್ಧನಮುಚ್ಯತೇ || ೧೨೪ ||

---

೧೨೧. ಸಕಲಪಾಪಗಳೂ ಸಹ ಗಂಗೆಯ ಎಲ್ಲೆಯನ್ನು ಪ್ರವೇಶಿಸಲಾರವು. ವನಮೃಗಗಳು ಸಿಂಹವನ್ನು ನೋಡಿ ಓಡುವಂತೆ ಪಾಪಗಳು ಗಂಗೆಯನ್ನು ನೋಡಿ ಓಡಿಹೋಗುತ್ತವೆ.

೧೨೨. ಧನ್ಯಳಾದ ಮೋಹಿನೀ! ರಾಮ ಶಂಭು ತಪೋವನವಿರುವ ಗಂಗಾತೀರವು ಆದರಸುತ್ತಲೂ ಮೂರುಗಾವುದ ಪರ್ಯಂತವಾಗಿ ಸಿದ್ಧಕ್ಷೇತ್ರವೆಂದು ತಿಳಿಯಬೇಕು.

೧೨೩. ತೀರ್ಥ ಮತ್ತು ಪುಣ್ಯಕರವಾದ ದೇವಾಲಯಗಳಲ್ಲಿ ಪ್ರತಿಗ್ರಹ ಮಾಡಬಾರದು. ಸಕಲನಿಮಿತ್ತಗಳಲ್ಲಿಯೂ ಮನುಷ್ಯನು ದಾನತೆಗೆದುಕೊಳ್ಳಬಾರದು.

೧೨೪. ತೀರ್ಥ ಮತ್ತು ಪುಣ್ಯಕರ ದೇವಾಲಯಗಳಲ್ಲಿ ದಾನತೆಗೆದುಕೊಳ್ಳುವವನ ತೀರ್ಥಸೇವನೆಯು ಆ ಧನವಿರುವವರೆಗೂ ನಿಷ್ಫಲವಾಗುವುದೆಂದು ಉಕ್ತವಾಗಿದೆ.

ಗಂಗಾವಿಕ್ರಯಣಾದ್ದೇವಿ ವಿಷ್ಣೋರ್ವಿಕ್ರಯಣಂ ಭವೇತ್ ।
ಜನಾರ್ದನೇ ತು ವಿಕ್ರೀತೇ ವಿಕ್ರೀತಂ ಭುವನತ್ರಯಂ ॥ ೧೨೫ ॥

ಗಂಗಾತೀರಸಮುದ್ಭೂತಾಂ ಮೃದಂ ಮೂರ್ಧ್ನಾ ಬಿಭರ್ತಿ ಯಃ ।
ಬಿಭರ್ತಿ ರೂಪಂ ಸೋಽರ್ಕಸ್ಯ ತಮೋನಾಶಾಯ ಕೇವಲಂ ॥ ೧೨೬ ॥

ಗಂಗಾಪುಲಿನಜಾಂ ಧೂಲಿಮಾಸ್ತೀರ್ಯೋರ್ಥ ನಿಜಾನ್ ಪಿತೄನ್ ।
ಪ್ರೀಣಯನ್ಯೋಽನರಃ ಪಿಂಡಾಂದದ್ಯಾತ್ತಾನ್ ಸ್ವರ್ಣಯೇದಪಿ ॥ ೧೨೭ ॥

ಇದಂ ತೇಽಭಿಹಿತಂ ಭದ್ರೇ ಗಂಗಾಮಾಹಾತ್ಮ್ಯಮುತ್ತಮಂ ।
ಪಠನ್ ಶೃಣ್ವನ್ನರೋ ಹ್ಯೇತಿ ತದ್ವಿಷ್ಣೋಃ ಪರಮಂ ಪದಂ ॥ ೧೨೮ ॥

---

೧೨೫. ಗಂಗೆಯನ್ನು ಮಾರುವುದರಿಂದ ಎಂದರೆ ದ್ರವ್ಯತೆಗೆದುಕೊಂಡು ಗಂಗಾಯಾತ್ರೆ ಮಾಡುವುದರಿಂದ ವಿಷ್ಣುವನ್ನೇ ಮಾರಿದಂತಾಗುವುದು. ಜನಾರ್ದನನನ್ನೇ ವಿಕ್ರಯಮಾಡಿದಮೇಲೆ ಮೂರುಲೋಕಗಳನ್ನೂ ಮಾರಿದಂತೆಯೇ ಸರಿ.

೧೨೬. ಗಂಗಾತೀರದಲ್ಲಿನ ಮೃತ್ತಿಕೆಯನ್ನು ಶಿರಸ್ಸಿನಲ್ಲಿ ಧರಿಸಿದರೆ ಕತ್ತಲನ್ನು ಹೋಗಲಾಡಿಸುವುದಕ್ಕಾಗಿ ಸೂರ್ಯನಸ್ವರೂಪವನ್ನೇ ಶಿರಸ್ಸಿನಲ್ಲಿ ಧರಿಸಿದಂತಾಗುವುದು.

೧೨೭. ಗಂಗೆಯತೀರದಲ್ಲಿನ ಮರಳಿನಿಂದ ವೇದಿಕೆಯನ್ನು ರಚಿಸಿ ಅಲ್ಲಿ ತನ್ನ ಪಿತೃಗಳ ತೃಪ್ತ್ಯರ್ಥವಾಗಿ ಪಿಂಡದಾನಮಾಡುವ ಮನುಷ್ಯನು ಅವರನ್ನು ಸ್ವರ್ಗಕ್ಕೆ ಒಯ್ಯುವನು.

೧೨೮. ಶೋಭನೇ! ಈ ಉತ್ತಮವಾದ ಗಂಗಾಮಾಹಾತ್ಮ್ಯೆಯನ್ನು ನಿನಗೆ ಹೇಳಿರುವೆನು. ಇದನ್ನು ಪಠನ ಶ್ರವಣಮಾಡುವ ಮನುಷ್ಯನು ವಿಷ್ಣುವಿನ ಪರಮಪದವನ್ನು ಹೊಂದುವನು.

ನಿತ್ಯಂ ಜಪ್ಯಮಿದಂ ಭಕ್ತ್ಯಾ ಪ್ರಯತ್ನೈಃ ಶ್ರದ್ಧಯಾನ್ವಿತೈಃ ।
ವೈಷ್ಣವೀಂ ಗತಿಮಿಚ್ಛದ್ಭಿಃ ಶೈವೀಂ ವಾ ವಿಧಿನಂದಿನಿ ॥ ೧೨೯ ॥

ಇತಿ ಶ್ರೀನಾರದೀಯಮಹಾಪುರಾಣೋತ್ತರಭಾಗೇ ಮೋಹಿನೀ ವಸುಸಂವಾದೇ ಗಂಗಾಮಾಹಾತ್ಮ್ಯೇ ಪೂಜಾದಿಕಥನಂ ನಾಮ ತ್ರಿಚತ್ವಾರಿಂಶತ್ತಮೋಽಧ್ಯಾಯಃ

---

೧೨೯. ಬ್ರಹ್ಮಕುಮಾರಿಯೇ! ವೈಷ್ಣವ ಅಥವಾ ಶೈವಲೋಕಗಳನ್ನು ಬಯಸುವವರು ಶ್ರದ್ಧೆ ಮತ್ತು ನಿಯಮಗಳಿಂದ ಯುಕ್ತರಾಗಿ ಪ್ರತಿನಿತ್ಯವೂ ಭಕ್ತಿಯಿಂದ ಈ ಸ್ತೋತ್ರವನ್ನು ಜಪಿಸಬೇಕು.

ಇಂತು ಶ್ರೀನಾರದೀಯಪುರಾಣೋತ್ತರಭಾಗದಲ್ಲಿ ಮೋಹಿನೀ ವಸುಸಂವಾದದೊಳು ಗಂಗಾಮಾಹಾತ್ಮ್ಯಯ ಕಥನಪ್ರಸಂಗದಲ್ಲಿ ಪೂಜಾದಿ ವರ್ಣನೆಯೆಂಬ ನಲವತ್ತುಮೂರನೆಯ ಅಧ್ಯಾಯವು ಮುಗಿದುದು.

## ಕಥಾಸಂಗ್ರಹ

ಮೋಹಿನಿಗೆ ವಸು ಗಂಗಾವ್ರತವನ್ನು ಹೇಳತೊಡಗಿ ಪೂರ್ವದಲ್ಲಿ ಶಿವನು ಪಾರ್ವತೀದೇವಿಗೆ ಹೇಳಿದ್ದ ಗಂಗೆಯ ಮಹಿಮೆಯನ್ನು ವಿವರಿಸಿರುವನು. ನಕ್ತಭೋಜನ, ಗಂಗೆಯ ಪೂಜಾವಿಧಾನ, ಸ್ತೋತ್ರ, ಗಂಗೆಯಲ್ಲಿ ಮರಣ, ತೀರಕ್ಷೇತ್ರಗಳ ವಿವರಣೆ ಮುಂತಾದುವು ಸಪರಿಕರವಾಗಿ ನಿರೂಪಿತವಾಗಿವೆ.

## ಚತುಶ್ಚತ್ವಾರಿಂಶತ್ತಮೋಽಧ್ಯಾಯಃ

---

### ವಸಿಷ್ಠ ಉವಾಚ

ತತಸ್ತು ಮೋಹಿನೀ ಭೂಪ ಶ್ರುತ್ವಾ ಮಾಹಾತ್ಮ್ಯಮುತ್ತಮಂ ।
ಗಂಗಾಯಾಃ ಪಾಪನಾಶಿನ್ಯಾಃ ಪುನಃ ಪ್ರಾಹ ಪುರೋಹಿತಂ ॥ ೧ ॥

### ಮೋಹಿನ್ಯುವಾಚ

ತ್ವಯಾ ಚಾನುಗೃಹೀತಾಸ್ಮಿ ಭಗವನ್ನನುಕಂಪಯಾ ।
ಯದುಕ್ತಂ ಪುಣ್ಯಮಾಖ್ಯಾನಂ ಗಂಗಾಯಾಃ ಪಾಪಶೋಧನಂ ॥ ೨ ॥

ಗಯಾತೀರ್ಥಂ ತು ವಿಖ್ಯಾತಂ ಕಥಂ ಲೋಕೇ ದ್ವಿಜೋತ್ತಮ ।
ತದಹಂ ಶ್ರೋತುಮಿಚ್ಛಾಮಿ ಕೃಪಾಂ ಕೃತ್ವಾಧುನಾ ವದ ॥ ೩ ॥

---

## ನಲವತ್ತುನಾಲ್ಕನೆಯ ಅಧ್ಯಾಯವು

೧ ವಸಿಷ್ಠನು ಹೇಳಿದನು :—ರಾಜನೇ ! ಮೋಹಿನಿಯು ಪಾಪನಾಶಕವಾದ ಗಂಗೆಯ ಉತ್ತಮವಾದ ಮಾಹಾತ್ಮ್ಯೆಯನ್ನು ಶ್ರವಣಮಾಡಿದನಂತರ ಪುನಃ ಪುರೋಹಿತನನ್ನು ಕುರಿತು ಮಾತನಾಡಿದಳು.

೨. ಮೋಹಿನಿಯು ಹೇಳಿದಳು :—ಪೂಜ್ಯನೇ ! ಪಾಪಪರಿಹಾರಕವೂ, ಪುಣ್ಯಕರವೂ ಆದ ಗಂಗಾಚರಿತ್ರೆಯನ್ನು ದಯೆಯಿಟ್ಟು ನೀನು ಹೇಳಿದುದರಿಂದ ನಾನು ನಿನ್ನ ಅನುಗ್ರಹವನ್ನು ಪಡೆದಿರುವೆನು.

೩. ದ್ವಿಜೋತ್ತಮನೇ ! ಲೋಕದಲ್ಲಿ ಗಯಾತೀರ್ಥವು ಹೇಗೆ ಪ್ರಸಿದ್ಧವಾಯಿತೆಂಬುದನ್ನು ತಿಳಿದುಕೊಳ್ಳಲು ಬಯಸುವೆನು. ದಯೆಮಾಡಿ ಈಗ ಅದನ್ನು ಹೇಳು.

ವಸುರುವಾಚ

ಪಿತೃತೀರ್ಥಂ ಗಯಾನಾಮ ಸರ್ವತೀರ್ಥವರಂ ಸ್ಮೃತಂ |
ಯತ್ರಾಸ್ತೇ ದೇವದೇವೇಶಃ ಸ್ವಯಮೇವ ಪಿತಾಮಹಃ || ೪ ||

ಯತ್ರೈಷಾ ಪಿತೃಭಿರ್ಗೀತಾ ಗಾಥಾ ಯೋಗಮಭೀಪ್ಸುಭಿಃ |
ಏಷ್ಟವ್ಯಾ ಬಹವಃ ಪುತ್ರಾ ಯದ್ಯೇಕೋಽಪಿ ಗಯಾಂ ವ್ರಜೇತ್ || ೫ ||

ಯಜೇತ ವಾಶ್ವಮೇಧೇನ ನೀಲಂ ವಾ ವೃಷಮುತ್ಸೃಜೇತ್ |
ಸಾರಾತ್ಸಾರತರಂ ದೇವಿ ಗಯಾಮಾಹಾತ್ಮ್ಯಮುತ್ತಮಂ || ೬ ||

ಪ್ರವಕ್ಷ್ಯಾಮಿ ಸಮಾಸೇನ ಭುಕ್ತಿಮುಕ್ತಿಪ್ರದಂ ಶೃಣು |
ಗಯಾಸುರೋಽಭವತ್ಪೂರ್ವಂ ವೀರ್ಯವಾನ್ ಪರಮಃ ಸ ಚ || ೭ ||

ತಪಶ್ಚಕ್ರೇ ಮಹಾಘೋರಂ ಸರ್ವಭೂತೋಪತಾಪನಂ |
ತತ್ತಪಸ್ತಾಪಿತಾ ದೇವಾಸ್ತದ್ವಧಾರ್ಥಂ ಹರಿಂ ಗತಾಃ || ೮ ||

---

೪. ವಸುವು ಹೇಳಿದನು :—ದೇವದೇವೇಶ್ವರನಾದ ಪಿತಾಮಹನು ತಾನೇ ಸನ್ನಿಹಿತನಾಗಿರುವ ಗಯೆಯೆಂಬ ಪಿತೃತೀರ್ಥವು ಸಕಲತೀರ್ಥಗಳಿಗಿಂತಲೂ ಉತ್ತಮವೆಂದು ವಿಹಿತವಾಗಿದೆ.

೫-೬. ಆ ಗಯೆಯ ವಿಷಯದಲ್ಲಿ ಸಾಧನಾಕಾಂಕ್ಷಿಗಳಾದ ಪಿತೃಗಳು "ಒಬ್ಬಮಗನಾದರೂ ಗಯಾಯಾತ್ರೆಯನ್ನು ಮಾಡಿಯಾನು! ಅಶ್ವಮೇಧ ಯಜ್ಞವಾದರೂ ಮಾಡಿಯಾನು! ಅಥವಾ ನೀಲವೃಷೋತ್ಸರ್ಗವನ್ನು ಮಾಡಿಯಾನು! ಆದಕಾರಣ ಬಹುಮಕ್ಕಳನ್ನು ಪಡೆಯಬೇಕು" ಎಂಬ ಗಾದೆಯನ್ನು ಹೇಳಿರುವರು.

೬-೭. ದೇವಿಯೇ! ಶ್ರೇಷ್ಠವಾದುದಕ್ಕಿಂತಲೂ ಶ್ರೇಷ್ಠತರವೂ, ಭೋಗಮೋಕ್ಷದಾಯಕವೂ ಆಗಿರುವ ಉತ್ತಮ ಗಯಾಮಾಹಾತ್ಮ್ಯೆಯನ್ನು ಸಂಕ್ಷೇಪವಾಗಿ ಹೇಳುವೆನು ಕೇಳು.

೭-೮. ಪೂರ್ವದಲ್ಲಿ ಗಯಾಸುರನೆಂಬ ಉತ್ತಮ ಪರಾಕ್ರಮಶಾಲಿಯಿದ್ದನು. ಅವನು ಸಕಲಪ್ರಾಣಿಗಳಿಗೂ ತಾಪವನ್ನುಂಟುಮಾಡುವಂತಹ, ಮಹಾಘೋರವಾದ ತಪಸ್ಸನ್ನು ಮಾಡಿದನು.

ಶರಣಂ ಹರಿರೂಚೇ ತಾನ್ಮಭವಿತವ್ಯಂ ಶಿವಾತ್ಮಭಿಃ |
ಪಾತಿತೇಽಸ್ಯ ಮಹಾದೇಹೇ ತಥೇತ್ಯೂಚುಃ ಸುರಾ ಹರಿಂ || ೯ ||

ಕದಾಚಿಚ್ಛಿವಪೂಜಾರ್ಥಂ ಕ್ಷೀರಾಬ್ಧೇಃ ಕಮಲಾನಿ ಚ |
ಆನೀಯ ನಿಕಟೇ ದೇಶೇ ಶಯನಂ ಚಾಕರೋಽಪ್ಸರೇಃ || ೧೦ ||

ವಿಷ್ಣುಮಾಯಾವಿಮೂಢೋಽಸೌ ಗದಯಾ ವಿಷ್ಣುನಾ ಹತಃ |
ತತೋ ಗದಾಧರೋ ವಿಷ್ಣುರ್ಗಯಾಯಾಂ ಮುಕ್ತಿದಃ ಸ್ಮೃತಃ || ೧೧ ||

ತಸ್ಯ ದೇಹೇ ಲಿಂಗರೂಪೀ ಸ್ಥಿತಃ ಶುದ್ಧಃ ಪಿತಾಮಹಃ |
ವಿಷ್ಣುನಾಹಾರ್ಥಮರ್ಯಾದಾಂ ಪುಣ್ಯಕ್ಷೇತ್ರಂ ಭವಿಷ್ಯತಿ || ೧೨ ||

---

೮-೯. ಆ ತಪಸ್ಸಿನಿಂದ ದುಃಖಿತರಾದ ದೇವತೆಗಳು ಅವನನ್ನು ಸಂಹರಿಸಬೇಕೆಂದು ಹರಿಯನ್ನು ಶರಣುಹೊಂದಿದರು. ಹರಿಯು ಇವನ ಮಹಾದೇಹವನ್ನು ಪಾತಾಳಕ್ಕೆ ತುಳಿಯುತ್ತೇನೆ, ನಿಮಗೆ ಮಂಗಳವಾಗುವುದು ಎಂಬುದಾಗಿ ದೇವತೆಗಳಿಗೆ ಹೇಳಿದನು. ದೇವತೆಗಳು ಹಾಗೆಯೇ ಸರಿಯೆಂದು ಹರಿಗೆ ಹೇಳಿದರು.

೧೦-೧೧. ಒಂದು ದಿನ ಗಯಾಸುರನು ಶಿವಪೂಜೆಗೋಸ್ಕರ ಕ್ಷೀರಸಮುದ್ರದಿಂದ ಕಮಲಪುಷ್ಪಗಳನ್ನು ತಂದು ಹರಿಯಮಾಯೆಯಿಂದ ಮೋಹಿತನಾಗಿ ಅವನಹತ್ತಿರ ಮಲಗಿ ನಿದ್ರೆಮಾಡಿದನು. ಆಗ ವಿಷ್ಣುವು ಗದೆಯಿಂದ ಅವನನ್ನು ಹೊಡೆದು ಪಾತಾಳಕ್ಕೆ ಮೆಟ್ಟಿದನು. ಆದಕಾರಣ ಗದಾಧರನಾದ ವಿಷ್ಣುವು ಗಯೆಯಲ್ಲಿ ಮುಕ್ತಿಪ್ರದನೆಂದು ಉಕ್ತವಾಗಿದೆ.

೧೨. ಅವನ ದೇಹದಲ್ಲಿ ಶುದ್ಧನು ಕಾರಣರೂಪನೂ ಆದ ಪಿತಾಮಹನು ಸೇರಿದನು. ವಿಷ್ಣುಪಾದದಿಂದ ಆಕ್ರಮಿಸಲ್ಪಟ್ಟ ಆ ಪ್ರದೇಶವು ಪುಣ್ಯಕ್ಷೇತ್ರವಾಯಿತು.

ಯಜ್ಞಂ ಶ್ರಾದ್ಧಂ ಪಿಂಡದಾನಂ ಸ್ನಾನಾದಿ ಕುರುತೇ ನರಃ ।
ಸ ಸ್ವರ್ಗಂ ಬ್ರಹ್ಮಲೋಕಂ ವಾ ಗಚ್ಛೇನ್ನ ನರಕಂ ನರಃ ॥ ೧೩ ॥

ಗಯಾತೀರ್ಥಂ ಪರಂ ಜ್ಞಾತ್ವಾ ಯೋಗಂ ಚಕ್ರೇ ಪಿತಾಮಹಃ ।
ಬ್ರಾಹ್ಮಣಾನ್ ಪೂಜಯಾಮಾಸ ಋಷೀಂಶ್ಚ ಸಮುಪಾಗತಾನ್ ॥ ೧೪ ॥

ನದೀಂ ಸರಸ್ವತೀಂ ಸೃಷ್ಟ್ವಾ ಸ್ಥಿತೋ ವ್ಯಾಪ್ತ ದಿಗಂತರಃ ।
ಭಕ್ಷ್ಯಭೋಜ್ಯಫಲಾಂದೀಂಶ್ಚ ಕಾಮಧೇನೂಸ್ತಥಾಸೃಜತ್ ॥ ೧೫ ॥

ಪಂಚ ಕ್ರೋಶಂ ಗಯಾತೀರ್ಥಂ ಬ್ರಾಹ್ಮಣೇಭ್ಯೋ ಧನಂ ದದೌ ।
ಧರ್ಮಯೋಗೇ ತು ಲೋಭಾದ್ವೈ ಪ್ರತಿಗೃಹ್ಯ ಧನಾದಿಕಂ ॥ ೧೬ ॥

ಸ್ಥಿತಾ ವಿಪ್ರಾಸ್ತದಾ ಶಪ್ತಾ ಗಯಾಯಾಂ ಬ್ರಹ್ಮಣಾ ತತಃ ।
ಮಾಭೂತ್ತ್ರಿಪುರುಷೀ ವಿದ್ಯಾ ಮಾಭೂತ್ತ್ರಿಪುರುಷಂ ಧನಂ ॥ ೧೭ ॥

---

೧೩. ಆ ಕ್ಷೇತ್ರದಲ್ಲಿ ಯಜ್ಞ, ಶ್ರಾದ್ಧ, ಪಿಂಡಪ್ರದಾನ ಮತ್ತು ಸ್ನಾನಾದಿಗಳನ್ನು ಮಾಡುವ ಮನುಷ್ಯನು ಸ್ವರ್ಗ ಅಥವಾ ಬ್ರಹ್ಮಲೋಕಕ್ಕೆ ಹೋಗುವನು. ನರಕಕ್ಕೆ ಹೋಗುವುದೇ ಇಲ್ಲ.

೧೪. ಪಿತಾಮಹನು ಗಯಾತೀರ್ಥವು ಉತ್ತಮವಾದುದೆಂದು ತಿಳಿದು ಅಲ್ಲಿ ಧ್ಯಾನಯೋಗವನ್ನು ಮಾಡಿದನು. ಮತ್ತು ಅಲ್ಲಿಗೆಬಂದ ಬ್ರಾಹ್ಮಣರನ್ನೂ, ಋಷಿಗಳನ್ನೂ ಸಹ ಸತ್ಕರಿಸಿದನು.

೧೫. ಅವನು ಸರಸ್ವತೀನದಿಯನ್ನು ಸೃಷ್ಟಿಮಾಡಿ ದಿಗಂತಗಳಲ್ಲೆಲ್ಲಾ ವ್ಯಾಪಿಸಿಕೊಂಡಿದ್ದನು. ಮತ್ತು ಭಕ್ಷ್ಯ ಭೋಜ್ಯ ಫಲ ಮುಂತಾದುವುಗಳನ್ನೂ, ಕಾಮಧೇನುವನ್ನೂ ಸಹ ಸೃಷ್ಟಿಮಾಡಿದನು.

೧೬-೧೭. ಐದು ಹರಿದಾರಿಯುಳ್ಳ ಗಯಾತೀರ್ಥದಲ್ಲಿ ಬ್ರಾಹ್ಮಣರಿಗೆ ಧನವನ್ನು ಕೊಟ್ಟನು. ಬ್ರಾಹ್ಮಣರು ಲೋಭದಿಂದ ಧರ್ಮಯಾಗದಲ್ಲಿ ಧನಾದಿಗಳನ್ನು ತೆಗೆದುಕೊಂಡಿದ್ದರಿಂದ ಬ್ರಹ್ಮನು ಅವರಿಗೆ " ನಿಮ್ಮವಂಶದಲ್ಲಿ ಹುಟ್ಟುವ

ಯುಷ್ಮಾಕಂ ಸ್ಯಾದ್ಧಿ ವಿರಸಾ ನದೀ ಪಾಷಾಣಪರ್ವತಃ ।
ಸ ತೈಸ್ತು ಪ್ರಾರ್ಥಿತೋ ಬ್ರಹ್ಮಾ ತೀರ್ಥಾನಿ ಕೃತವಾನ್ ಪ್ರಭುಃ ॥ ೧೮ ॥

ಲೋಕಾಃ ಪುಣ್ಯಾ ಗಯಾಯಾಂ ವೈ ಶ್ರಾದ್ಧೇನ ಬ್ರಹ್ಮಲೋಕಗಾಃ ।
ಯುಷ್ಮಾನ್ಯೇ ಪೂಜಯಿಷ್ಯಂತಿ ತೈರಹಂ ಪೂಜಿತಃ ಸದಾ ॥ ೧೯ ॥

ಬ್ರಹ್ಮಜ್ಞಾನಂ ಗಯಾಶ್ರಾದ್ಧಂ ಗೋಗೃಹೇ ಮರಣಂ ತಥಾ ।
ವಾಸಃ ಪುಂಸಾಂ ಕುರುಕ್ಷೇತ್ರೇ ಮುಕ್ತಿರೇಷಾ ಚತುರ್ವಿಧಾ ॥ ೨೦ ॥

ಸಮುದ್ರಾಃ ಸರಿತಃ ಸರ್ವೇ ವಾಪೀಕೂಪಹ್ರದಾಸ್ತಥಾ ।
ಸ್ನಾತುಕಾಮಾ ಗಯಾತೀರ್ಥಂ ದೇವಿ ಯಾಂತಿ ನ ಸಂಶಯಃ ॥ ೨೧ ॥

---

ಮೂರು ತಲೆಯವರೆಗಿನ ಪುರುಷರಿಗೂ ವಿದ್ಯೆ ಧನಗಳಿಲ್ಲದೇಹೋಗಲಿ! ನದಿಯು ನೀರಿಲ್ಲದಂತಾಗಿ ನಿಮಗೆ ಫಲಕಾರಿಯಾಗದಿರಲಿ! ಪರ್ವತವು ಪಾಷಾಣಮಯವಾಗಲಿ" ಎಂಬುದಾಗಿ ಶಾಪಕೊಟ್ಟನು.

೧೮. ಬಳಿಕ ಆಬ್ರಾಹ್ಮಣರು ಪ್ರಾರ್ಥನೆ ಮಾಡಿಕೊಳ್ಳಲಾಗಿ ಬ್ರಹ್ಮನು ತೀರ್ಥಗಳನ್ನು ನಿರ್ಮಾಣ ಮಾಡಿದನು.

೧೯. ಪುಣ್ಯವಂತರಾದ ಜನರು ಗಯೆಯಲ್ಲಿ ಶ್ರಾದ್ಧಮಾಡುವುದರಿಂದ ಬ್ರಹ್ಮಲೋಕಕ್ಕೆ ಹೋಗುವರು. ನಿಮ್ಮನ್ನು ಯಾರುಪೂಜಿಸುವರೋ ಅವರು ನನ್ನನ್ನು ಪೂಜಿಸಿದಂತಯೇಸರಿ ಎಂದು ಬ್ರಾಹ್ಮಣರಿಗೆ ಹೇಳಿದನು.

೨೦. ಬ್ರಹ್ಮಜ್ಞಾನ, ಗಯಾಶ್ರಾದ್ಧ, ಗೋಗೃಹದಲ್ಲಿ ಮರಣ, ಕುರುಕ್ಷೇತ್ರದಲ್ಲಿ ವಾಸ ಈ ನಾಲ್ಕು ಮನುಷ್ಯರಿಗೆ ಮುಕ್ತಿ ಸಾಧನಗಳು.

೨೧. ಸಮುದ್ರ, ನದಿ, ಸರೋವರ, ಬಾವಿ ಮತ್ತು ಮಡುವು ಇವೆಲ್ಲವೂ ಎಂದರೆ ಇವುಗಳ ಅಭಿಮಾನಿ ದೇವತೆಗಳೆಲ್ಲರೂ ಸ್ನಾನಮಾಡಬೇಕೆಂದು ಗಯಾತೀರ್ಥಕ್ಕೆ ಹೋಗುವರು ಸಂಶಯವಿಲ್ಲ.

ಬ್ರಹ್ಮಹತ್ಯಾ ಸುರಾಪಾನಂ ಸ್ತೇಯಂ ಗುರ್ವಂಗನಾಗಮಃ ।
ಪಾಪಂ ತತ್ಸಂಗಜಂ ಸರ್ವಂ ಗಯಾಶ್ರಾದ್ಧಾದ್ವಿನಶ್ಯತಿ ॥ ೨೨ ॥

ಅಸಂಸ್ಕೃತಾ ಮೃತಾ ಯೇ ಚ ಪಶುಭಿಃ ಪ್ರಹತಾಶ್ಚ ಯೇ ।
ಸರ್ಪದಷ್ಟಾ ಗಯಾಶ್ರಾದ್ಧಾನ್ಮುಕ್ತಾಃ ಸ್ವರ್ಗಂ ವ್ರಜಂತಿ ತೇ ॥ ೨೩ ॥

ಗಂಗಾಯಾಂ ಪಿಂಡದಾನೇನ ಯತ್ಫಲಂ ಲಭತೇ ನರಃ ।
ನ ತಚ್ಛಕ್ಯಂ ಮಯಾ ವಕ್ತುಂ ಕಲ್ಪಕೋಟಿಶತೈರಪಿ ॥ ೨೪ ॥

ಅತ್ರೈವ ಶ್ರೂಯತೇ ದೇವಿ ಇತಿಹಾಸಃ ಪುರಾತನಃ ।
ತಂ ಪ್ರವಕ್ಷ್ಯಾಮಿ ಸುಭಗೇ ಶೃಣುಷ್ವೈಕಾಗ್ರಮಾನಸಾ ॥ ೨೫ ॥

ತ್ರೇತಾಯುಗೇ ವೈ ನೃಪತಿರ್ಬಭೂವ
ವಿಶಾಲನಾಮಾ ಸ ಪುರೀಂ ವಿಶಾಲಾಂ ।
ಉವಾಸ ಧನ್ಯೋ ಧೃತಿಮಾನಪುತ್ರಃ
ಸ್ವಯಂ ವಿಶಾಲಾಧಿಪತಿರ್ದ್ವಿಜಾಗ್ರ್ಯ ॥ ೨೬ ॥

---

೨೨. ಬ್ರಹ್ಮಹತ್ಯೆ, ಸುರಾಪಾನ, ಸ್ವರ್ಣಸ್ತೇಯ, ಗುರುಪತ್ನೀಗಮನ ಮತ್ತು ಈ ಮಹಾಪಾತಕಿಗಳ ಸಹವಾಸದಿಂದುಂಟಾಗುವ ಪಾಪಗಳೆಂಬ ಪಂಚ ಮಹಾಪಾತಕಗಳು ಗಯಾಶ್ರಾದ್ಧದಿಂದ ನಾಶವಾಗುತ್ತವೆ.

೨೩. ಸಂಸ್ಕಾರವಿಲ್ಲದೇ ಸತ್ತವರು, ಪಶುಗಳಿಂದ ಕೊಲ್ಲಲ್ಪಟ್ಟವರು, ಹಾವುಕಚ್ಚಿಸತ್ತವರೂ ಸಹ ಗಯಾಶ್ರಾದ್ಧದಿಂದ ಮುಕ್ತರಾಗಿ ಸ್ವರ್ಗಕ್ಕೆ ಹೋಗುವರು.

೨೪. ಗಯೆಯಲ್ಲಿ ಪಿಂಡದಾನಮಾಡುವುದರಿಂದ ಮನುಷ್ಯನು ಪಡೆಯುವ ಫಲವನ್ನು ವರ್ಣಿಸಲು ನೂರುಕೋಟಿ ಕಲ್ಪಗಳಿದ್ದರೂ ಸಾಧ್ಯವಾಗುವುದಿಲ್ಲ.

೨೫. ದೇವಿಯೇ! ಈ ವಿಷಯದಲ್ಲಿಯೇ ಒಂದು ಪುರಾತನೇತಿಹಾಸವು ಶ್ರುತವಾಗಿದೆ. ಅದನ್ನು ಹೇಳುವೆನು, ಸುಭಗೇ! ಏಕಾಗ್ರಚಿತ್ತಳಾಗಿ ಕೇಳು.

೨೬–೨೭. ತ್ರೇತಾಯುಗದಲ್ಲಿ ವಿಶಾಲನೆಂಬ ರಾಜನಿದ್ದನು. ಅವನು ವಿಶಾಲಪುರಿಯಲ್ಲಿ ವಾಸಿಸುತ್ತಿದ್ದನು. ಧೀರನು, ಧನ್ಯನೂ, ಶತ್ರುಹನನಮಾಡ

ಪಪ್ರಚ್ಛ ಪುತ್ರಾರ್ಥಮಮಿತ್ರಹಂತಾ
ತಂ ಬ್ರಾಹ್ಮಣಾಃ ಪ್ರೋಚುರದೀನಸತ್ವಾಃ ।
ರಾಜನ್ ಪಿತೄಂಸ್ತರ್ಪಯ ಪುತ್ರಹೇತೋ
ರ್ಗತ್ವಾ ಗಯಾಯಾಂ ವಿಧಿವತ್ತು ಪಿಂಡೈಃ ॥ ೨೭ ॥

ಧ್ರುವಂ ತತಸ್ತೇ ಭವಿತಾ ತು ವೀರ
ಸಹಸ್ರದಾತಾ ಸಕಲಕ್ಷಿತೀಶಃ ।
ಇತೀರಿತೋ ವಿಪ್ರಗಣೈಃ ಸಹೃಷ್ಟೋ
ರಾಜಾ ವಿಶಾಲಾಧಿಪತಿಃ ಪ್ರಯತ್ನಾತ್ ॥ ೨೮ ॥

ಸಮಸ್ತತೀರ್ಥಪ್ರವರಾಂ ದ್ವಿಜೇನ
ಗಯಾಮಿಯಾತ್ತದ್ಗತಮಾನಸಃ ಸನ್ ।
ಆಗತ್ಯ ತೀರ್ಥಪ್ರವರಂ ಸುತಾರ್ಥೀ
ಗಯಾಶಿರೋ ಯಾಗಪರಃ ಪಿತೄಣಾಂ ॥ ೨೯ ॥

---

ತಕ್ಕವನೂ ಆದ ವಿಶಾಲಾಧಿಪತಿಯು ಮಕ್ಕಳಿಲ್ಲದವನಾಗಿದ್ದುದರಿಂದ ಮಕ್ಕಳಾಗುವುದಕ್ಕಾಗಿ ಬ್ರಾಹ್ಮಣಶ್ರೇಷ್ಠರನ್ನು ಪ್ರಶ್ನೆಮಾಡಿದನು. ದೀನರಲ್ಲದ, ಸಾಧುಗಳಾದ ಬ್ರಾಹ್ಮಣರು ರಾಜನೇ! ಮಕ್ಕಳಾಗುವುದಕ್ಕಾಗಿ ಗಯೆಗೆಹೋಗಿ ವಿಧಿವತ್ತಾಗಿ ಪಿಂಡದಾನಮಾಡಿ ಪಿತೃಗಳಿಗೆ ತರ್ಪಣವನ್ನು ಕೊಡು!

೨೮-೨೯. ಪರಾಕ್ರಮಶಾಲಿಯೇ! ಆದರಿಂದ ನಿನಗೆ ಸಹಸ್ರದಾತೃವು, ಸಕಲ ಭೂಮಂಡಲಾಧಿಪತಿಯೂ ಆಗುವಂತಹ ಮಗನಾಗುವನೆಂದು ಹೇಳಿದರು.

ಹೀಗೆ ಬ್ರಾಹ್ಮಣಸಂಘದಿಂದ ಉಕ್ತನಾದ, ವಿಶಾಲಾಧಿಪತಿಯಾದ ಆ ರಾಜನು ಆ ತೀರ್ಥದಲ್ಲಿಯೇ ಮನಸ್ಸಿಟ್ಟವನಾಗಿ ಸಕಲ ತೀರ್ಥೋತ್ತಮವಾದ ಗಯಾಕ್ಷೇತ್ರಕ್ಕೆ ಬ್ರಾಹ್ಮಣರೊಡನೆ ಪ್ರಯತ್ನಪೂರ್ವಕವಾಗಿ ಹೊರಟನು.

೨೯-೩೧. ಮಕ್ಕಳಾಗಬೇಕೆಂದು ಬಯಸುತ್ತಿರುವ ರಾಜನು ಉತ್ತಮವಾದ ಗಯಾತೀರ್ಥಕ್ಕೆ ಬಂದು ಗಯಾಶಿರಸ್ಸಿನಲ್ಲಿ ಶ್ರಾದ್ಧಮಾಡುವವನಾಗಿ ವಿಧಿ

ಪಿಂಡಪ್ರದಾನಂ ವಿಧಿನಾ ಪ್ರಯುಚ್ಛತ್ |
ತಾವದ್ವಿಯತ್ಯುತ್ತಮಮೂರ್ತಿಯುಕ್ತಾನ್ |
ಪಶ್ಯನ್ ಸ ಪುಂಸಃ ಸಿತರಕ್ತಕೃಷ್ಣಾ
ನುವಾಚ ರಾಜಾ ಕಿಮಿದಂ ಭವಂತಃ || ೩೦ ||

ಸ ಮುಹ್ಯತೇ ಶಂಸತ ಸರ್ವಮೇತತ್
ಕುತೂಹಲಂ ಮೇ ಮನಸಿ ಪ್ರವೃತ್ತಂ

ಸಿತ ಉವಾಚ

ಅಹಂ ಸಿತಸ್ತೇ ಜನಕೋಽಸ್ಮಿ ರಾಜನ್
ನಾಮ್ನಾ ಚ ವರ್ಣೇನ ಚ ಕರ್ಮಣಾ ಚ || ೩೧ ||

ಅಯಂ ಚ ಮೇ ಜನಕೋ ರಕ್ತವರ್ಣೋ
ನೃಶಂಸಕೃದ್ಬ್ರಹ್ಮಹಾ ಪಾಪಕಾರೀ |
ಅತಃ ಪರಂ ಶೃಣು ಪ್ರಪಿತಾಮಹಶ್ಚ
ಕೃಷ್ಣೋ ನಾಮ್ನಾ ಕರ್ಮಣಾ ವರ್ಣತಶ್ಚ || ೩೨ ||

---

ವತ್ತಾಗಿ ಪಿಂಡಪ್ರದಾನಮಾಡುತ್ತಿರುವಾಗ ಅಂತರಿಕ್ಷದಲ್ಲಿ ಉತ್ತಮಶರೀರವನ್ನು ಧರಿಸಿದ ಸಿತ, ರಕ್ತ, ಕೃಷ್ಣ ಎಂಬ ಮೂರುಜನ ಪುರುಷರನ್ನು ನೋಡಿ "ನೀವು ಯಾರು? ನನ್ನ ಮನಸ್ಸು ಮೋಹಗೊಳ್ಳುತ್ತಿದೆ. ವೃತ್ತಾಂತವನ್ನು ತಿಳಿದುಕೊಳ್ಳಬೇಕೆಂಬ ಕುತೂಹಲ ಉಂಟಾಗಿದೆಯಾದಕಾರಣ ಎಲ್ಲವನ್ನೂ ಹೇಳಿ" ಎಂಬುದಾಗಿ ಕೇಳಿದನು.

೩೧. ಸಿತನು ಹೇಳಿದನು :—ರಾಜನೇ! ನಾನು ನಿನಗೆ ಜನಕನು. ಹೆಸರು, ಬಣ್ಣ ಮತ್ತು ನನ್ನಕೆಲಸ ಇವೆಲ್ಲದರಿಂದಲೂ ನಾನ ಸಿತನಾಗಿರುವೆನು.

೩೨. ಇವನು ನನ್ನತಂದೆಯು. ಕೆಂಪಗಿರುವ ಇವನು ಘಾತುಕನೂ, ಬ್ರಹ್ಮಹತ್ಯೆಯನ್ನು ಮಾಡಿರುವವನು ಮತ್ತು ಪಾಪಕೃತ್ಯ ಮಾಡಿರುವವನೂ ಆಗಿರುವನು. ಇನ್ನು ಮುಂದೆ ಕೇಳು! ಈ ಕಪ್ಪಗಿರುವವನು ಇವನ ತಂದೆಯು. ನಿನಗೆ ಮುತ್ತಾತನು. ಇವನ ಹೆಸರು ಕೃಷ್ಣನು. ಇವನಕೃತ್ಯ ಮತ್ತು ಬಣ್ಣಗಳೂ ಸಹ ಕೃಷ್ಣವಾಗಿವೆ.

ಏತೇನ ಕೃಷ್ಣೇನ ಹತಾ ಪುರಾ ವೈ
ಜನ್ಮನ್ಯನೇಕಾ ಋಷಯಃ ಪುರಾಣಾಃ ।
ಏತೌ ಸ್ಮೃತೌ ದ್ವಾವಪಿ ಪಿತೃಪುತ್ರೌ
ಅವೀಚಿಸಂಜ್ಞಂ ನರಕಂ ಪ್ರವಿಷ್ಟೌ ॥ ೩೩ ॥

ಅತಃ ಪರೋಽಯಂ ಜನಕಃ ಪರೋಽಸ್ಯ
ತತ್ಕೃಷ್ಣರಕ್ತಾವಪಿ ದೀರ್ಘಕಾಲಂ ।
ಅಹಂ ಚ ಶುದ್ಧೇನ ನಿಜೇನ ಕರ್ಮಣಾ
ಶಕ್ರಾಸನಂ ಪ್ರಾಪ್ಯ ಸುದುರ್ಲಭಂ ತತ್ ॥ ೩೪ ॥

ತ್ವಯಾ ಪುನರ್ಮಂತ್ರವಿದಾ ಗಯಾಯಾಂ
ಪಿಂಡಪ್ರದಾನೇನ ಬಲಾದಿಮೌ ಚ ।
ಮೋಕ್ಷಾಯಿತೌ ತೀರ್ಥವರಪ್ರಭಾವಾತ್
ಅವೀಚಿಸಂಜ್ಞಂ ನರಕಂ ಗತೌ ತೌ ॥ ೩೫ ॥

---

೩೩-೩೪. ಈ ಕೃಷ್ಣನು ಪೂರ್ವಜನ್ಮದಲ್ಲಿ ಅನೇಕ ಋಷಿಗಳು ಮತ್ತು ಪುರಾಣಗಳನ್ನು ನಾಶಪಡಿಸಿರುವನು- ಈ ತಂದೆ ಮಕ್ಕಳಾದ ಕೃಷ್ಣ ರಕ್ತರಿಬ್ಬರೂ ಬಹುಕಾಲದಿಂದಲೂ ಅವೀಚಿ ಎಂಬ ನರಕದಲ್ಲಿದ್ದರು. ನಾನು ಪರಶುದ್ಧವಾದ ನನ್ನ ಕರ್ಮದಿಂದ ಅತ್ಯಂತ ದುರ್ಲಭವಾದ ಇಂದ್ರಪುರಿಯನ್ನು ಹೊಂದಿದ್ದೇನು.

೩೫. ಅವೀಚಿನಾಮಕವಾದ ನರಕದಲ್ಲಿದ್ದ ಈ ಪಿತಾಮಹ ಪ್ರಪಿತಾಮಹರನ್ನು ಮಂತ್ರವೇತ್ತನಾದ ನೀನು ಗಂಗೆಯಲ್ಲಿ ಪಿಂಡದಾನಮಾಡಿ ಬಲಾತ್ಕಾರವಾಗಿ ಉತ್ತಮತೀರ್ಥ ಪ್ರಭಾವದಿಂದ ಮೋಕ್ಷಪಡೆಯಲರ್ಹರನ್ನಾಗಿ ಮಾಡಿರುವೆ.

ಪಿತ್ರ್ಯಾನ್ ಪಿತಾಮಹಾಂಶ್ಚೈವ ತಥೈವ ಪ್ರಪಿತಾಮಹಾನ್ ।
ಪ್ರೀಣಯಾಮೀತಿ ಯತ್ತೋಯಂ ತ್ವಯಾ ದತ್ತಮರಿಂದಮ ॥ ೩೬ ॥

ತೇನಾಸ್ಮಾದ್ಯುಗಪದ್ಯೋಗಾಜ್ಜಾತವಾಕ್ಯೇನ ಸತ್ತಮ ।
ತೀರ್ಥಪ್ರಭಾವಾದ್ಗಚ್ಛಾಮಃ ಪಿತೃಲೋಕಂ ನ ಸಂಶಯಃ ॥ ೩೭ ॥

ತತ್ರ ಪಿಂಡಪ್ರದಾನೇನ ಏತೌ ತವ ಪಿತಾಮಹೌ ।
ಸದ್ಗತಾವಪಿ ಸಂಸಿದ್ಧೌ ಪಾಪಾದ್ವಿಕೃತಲಿಂಗಕೌ ॥ ೩೮ ॥

ಏತಸ್ಮಾತ್ಕಾರಣಾತ್ಪುತ್ರ ಅಹಮೇತೌ ಪ್ರಗೃಹ್ಯ ತು ।
ಆಗತೋಽಸ್ಮಿ ಭವಂತಂ ವೈ ದ್ರಷ್ಟುಂ ಯಾಸ್ಯಾಮಿ ಸಾಂಪ್ರತಂ ॥ ೩೯ ॥

ತೀರ್ಥಪ್ರಭಾವಾದ್ಯತ್ನೇನ ಬ್ರಹ್ಮಘ್ನಸ್ಯಾಪಿ ವೈ ಪಿತುಃ ।
ಗಯಾಯಾಂ ಪಿಂಡದಾನೇನ ಕುರ್ಯಾದುದ್ಧರಣಂ ಸುತಃ ॥ ೪೦ ॥

---

೩೬-೩೭. ಶತ್ರುಸಂಹಾರಕನಾದ ವಿಶಾಲನೇ! ತಂದೆ, ತಾತ ಮತ್ತು ಮುತ್ತಾತಂದಿರನ್ನು ಸಂತೋಷಪಡಿಸುವೆನೆಂದು ನಿನ್ನಿಂದ ಕೊಡಲ್ಪಟ್ಟ ಉದಕದಿಂದ ಈರೀತಿ ಒಟ್ಟಿಗೆಸೇರಿದೆವು. ಸಾಧೂತ್ತಮನೇ! ಈ ತೀರ್ಥಪ್ರಭಾವದಿಂದ ನಾವು ಪಿತೃಲೋಕಕ್ಕೆ ಹೋಗುವೆವು ಸಂದೇಹವಿಲ್ಲ.

೩೮. ನೀನು ಅಲ್ಲಿ ಪಿಂಡಪ್ರದಾನ ಮಾಡಿದ್ದರಿಂದ ಪಾಪದಿಂದ ವಿಕಾರವಾದ ಚಿಹ್ನೆಗಳುಳ್ಳ ನಿನ್ನ ಈ ತಾತ ಮುತ್ತಾತಂದಿರು ಸದ್ಗತಿಗೆ ಸಿದ್ಧರಾದರು.

೩೯. ಮಗನೇ! ಈ ಕಾರಣದಿಂದ ನಾನು ಇವರಿಬ್ಬರನ್ನೂ ಕರೆದುಕೊಂಡು ನಿನ್ನನ್ನು ನೋಡುವುದಕ್ಕಾಗಿ ಬಂದೆನು. ಇನ್ನು ಹೊರಡುವೆನು.

೪೦. ಮಗನು ಗಯೆಯಲ್ಲಿ ಪಿಂಡದಾನಮಾಡಿದರೆ ಪ್ರಯತ್ನಪೂರಕ್ವವಾಗಿ ಬ್ರಹ್ಮಹತ್ಯೆಮಾಡಿದವನಾದರೂ ತಂದೆಗೆ ತೀರ್ಥಪ್ರಭಾವದಿಂದ ಉದ್ಧಾರವಾಗುವುದು.

ಇತ್ಯೇವಮುಕ್ತ್ವಾ ತು ಪಿತಾ ಪಿತೋಽಸ್ಯ
ಸಾರ್ಧಂ ಚ ತಾಭ್ಯಾಂ ಹಿ ಪಿತಾಮಹಾಭ್ಯಾಂ ।
ಜಗಾಮ ಸದ್ಯೋ ಹಿ ಸುತಂ ವಿಶಾಲಂ
ಸಂಪೂಜ್ಯ ಚಾಶೀರ್ಭಿರಪಿ ಸ್ವಲೋಕಂ ॥ ೪೧ ॥

ಸಕೃದ್ಗಯಾಭಿಗಮನಂ ಸಕೃತ್ಪಿಂಡಪ್ರಪಾತನಂ ।
ದುರ್ಲಭಂ ಕಿಂ ಪುನರ್ನಿತ್ಯಮಸ್ಮಿನ್ನೇವ ವ್ಯವಸ್ಥಿತಿಃ ॥ ೪೨ ॥

ಕ್ರಿಯತೇ ಪತಿತಾನಾಂ ತು ಗತೇ ಸಂವತ್ಸರೇ ಕ್ವಚಿತ್ ।
ದೇಶಕಾಲಪ್ರಮಾಣತ್ವಾದ್ಗಯಾಕೂಪೇ ಸ್ವಬಂಧುಭಿಃ ॥ ೪೩ ॥

ಪ್ರೇತರಾಜೋಽಥ ವಣಿಜಂ ಕಂಚಿತ್ ಪ್ರಾಹ ಸ್ವಮುಕ್ತಯೇ ।
ಗಯಾತೀರ್ಥಂ ತು ದೃಷ್ಟ್ವಾ ತ್ವಂ ಸ್ನಾತ್ವಾ ಶೌಚಸಮನ್ವಿತಃ ॥ ೪೪ ॥

---

೪೧. ಈರೀತಿಯಾಗಿ ಹೇಳಿ ವಿಶಾಲರಾಜನ ತಂದೆಯಾದ ಪಿತನು ಮಗನನ್ನು ಆಶೀರ್ವದಿಸಿ ತಕ್ಷಣ ಪಿತಾಮಹರೊಡನೆ ತನ್ನಲೋಕಕ್ಕೆ ಹೊರಟು ಹೋದನು.

೪೨. ಒಂದಾವರ್ತಿ ಗಯಾಯಾತ್ರೆಮಾಡುವುದು, ಅಲ್ಲಿ ಒಂದಾವರ್ತಿ ಪಿಂಡಹಾಕುವುದೂ ಸಹ ದುರ್ಲಭವು. ಅಂದಬಳಿಕ ಯಾವಾಗಲೂ ಗಯಾ ಕ್ಷೇತದಲ್ಲೇ ವಾಸಿಸುವುದು ದುರ್ಲಭವೆಂದು ಹೇಳತಕದ್ದೇನು ?

೪೩. ಪತಿತರಾರೂ ಸಹ ಮೃತರಾಗಿ ವರ್ಷವಾದನಂತರ ಅವರ ಬಂಧುಗಳು ಗಯಾತೀರ್ಥದಲ್ಲಿ ವಿಹಿತದೇಶಕಾಲ ಪ್ರಮಾಣಗಳಿಂದ ಯಾವಾಗಲಾದರೂ ಪಿಂಡದಾನಮಾಡಿದರೆ ಅವರು ಉದ್ಧೃತರಾಗುವರು.

೪೪-೪೬. ಒಂದಾನೊಂದುಕಾಲದಲ್ಲಿ ಪ್ರೇತರಾಜನು ಒಬ್ಬಾನೊಬ್ಬ ವರ್ತಕನನ್ನುಕುರಿತು “ ವರ್ತಕನೇ ! ನೀನು ಗಯಾತೀರ್ಥವನ್ನು ನೋಡಿದಾಗ ಶೌಚಾದಿಗಳನ್ನು ಮಾಡಿಕೊಂಡು ಅಲ್ಲಿ ಸ್ನಾನಮಾಡಿ ನನ್ನ ಹೆಸರನ್ನು ಹೇಳಿ

ಮಮ ನಾಮ ಸಮುದ್ದಿಶ್ಯ ಪಿಂಡನಿರ್ವಪಣಂ ಕುರು ।
ತತ್ರ ಪಿಂಡಪ್ರದಾನೇನ ಪ್ರೇತಭಾವಾದಹಂ ಸುಖಂ ॥ ೪೫ ॥

ಮುಕ್ತಸ್ತು ಸರ್ವದಾತೄಣಾಂ ಪ್ರಾಪ್ಸ್ಯಾಮಿ ಶುಭಲೋಕತಾಂ ।
ಇತ್ಯೇವಮುಕ್ತ್ವಾ ವಣಿಜಂ ಪ್ರೇತರಾಜೋಽನುಗೈಃ ಸಹ ॥ ೪೬ ॥

ಸ್ವನಾಮಾನಿ ಯಥಾನ್ಯಾಯಂ ಸಮ್ಯಗಾಖ್ಯಾತವಾನ್ನೃಹಃ ।
ಉಪಾರ್ಜಯಿತ್ವಾ ಪ್ರಯಯೌ ಗಯಾಶೀರ್ಷಮನುತ್ತಮಂ ॥ ೪೭ ॥

ಪಾಂಶುನಿರ್ವಪಣಂ ಚಕ್ರೇ ಪ್ರೇತಾನಾಮನುಪೂರ್ವಶಃ ।
ಚಕಾರ ವಸುದಾನಂ ಚ ಪಿತೄನ್ ಕೃತ್ವಾ ಪುರಃಸರಾನ್ ॥ ೪೮ ॥

ಆತ್ಮನೋಽಸೌ ಮಹಾಬುದ್ಧಿರ್ವಿಧಿನಾಪಿ ತಿಲೈರ್ವಿನಾ ।
ಪಿಂಡನಿರ್ವಪಣಂ ಚಕ್ರೇ ತಥಾನ್ಯಾನಪಿ ಗೋತ್ರಜಾನ್ ॥ ೪೯ ॥

---

ಪಿಂಡಪ್ರದಾನಮಾಡು. ಅಲ್ಲಿ ಮಾಡಿದ ಪಿಂಡಪ್ರದಾನದಿಂದ ನಾನು ಪ್ರೇತಭಾವವನ್ನು ಹೋಗಲಾಡಿಸಿಕೊಂಡು ಸುಖವನ್ನು ಹೊಂದಿ ಪಿಂಡದಾತೃಗಳೆಲ್ಲರಿಗೂ ಶುಭಲೋಕಗಳನ್ನು ಕೊಡುವೆನು."

೪೬-೪೭. ಈರೀತಿಯಾಗಿ ಪ್ರೇತರಾಜನು ತನ್ನ ಮುಕ್ತಿಗಾಗಿ ಜೊತೆಗಾರರಸಹಿತವಾಗಿ ವರ್ತಕನಿಗೆ ಹೇಳಿ ಏಕಾಂತದಲ್ಲಿ ತನ್ನ ನಾಮಗಳನ್ನು ನ್ಯಾಯಾನುಸಾರವಾಗಿ ಚೆನ್ನಾಗಿ ವಿವರಿಸಿದನು.

೪೭. ಆ ವರ್ತಕನು ಬೇಕಾದುದನ್ನೆಲ್ಲಾ ಒದಗಿಸಿಕೊಂಡು ಸರ್ವೋತ್ತಮವಾದ ಗಯಾಶೀರ್ಷ ಕ್ಷೇತ್ರಕ್ಕೆ ಹೋದನು.

೪೮. ಅಲ್ಲಿ ಅವನು ಪ್ರೇತಗಳಿಗೆ ಕ್ರಮವಾಗಿ ಪಾಂಶುನಿರ್ವಪಣವನ್ನು ಮಾಡಿದನು. ಪಿತೃಗಳನ್ನು ಮುಂದೆಮಾಡಿಕೊಂಡು ದ್ರವ್ಯದಾನ ಮಾಡಿದನು.

೪೯. ಬಹುಬುದ್ಧಿವಂತನಾದ ಆ ವರ್ತಕನು ಎಳ್ಳಿಲ್ಲದೆ ವಿಧಿವತ್ತಾಗಿ ತನಗೂ ಪಿಂಡಹಾಕಿಕೊಂಡನು. ಅಂತೆಯೇ ತನ್ನವಂಶದಲ್ಲಿ ಹಟ್ಟಿದ ಇತರರಿಗೂ ಸಹ ಪಿಂಡಪ್ರದಾನ ಮಾಡಿದನು.

ಏವಂ ದತ್ತೇ ತು ವೈ ಪಿಂಡೇ ವಣಿಜಾ ಪ್ರೇತಭಾವತಃ ।
ವಿಮುಕ್ತಾ ದ್ವಿಜತಾಂ ಪ್ರಾಪ್ಯ ಬ್ರಹ್ಮಲೋಕಂ ತತೋ ಗತಾಃ ॥ ೫೦ ॥

ಪಾಯಸಂ ಖಡ್ಗಮಾಂಸಂ ಚ ಪುತ್ರೈರ್ದತ್ತಂ ಪಿತೃಕ್ಷಯೇ ।
ಕೃಷ್ಣೋ ಲೋಹಸ್ತಥಾ ಛಾಗ ಆನಂತ್ಯಾಯ ಪ್ರಕಲ್ಪತೇ ॥ ೫೧ ॥

ಗಯಾಯಾಮಕ್ಷಯಂ ಶ್ರಾದ್ಧಂ ಜಪಹೋಮತಪಾಂಸಿ ಚ ।
ಪಿತೃಕ್ಷಯೇ ಹಿ ತತ್ಪುತ್ರೈಃ ಕೃತವಾನಂತ್ಯತಾಂ ವ್ರಜೇತ್ ॥ ೫೨ ॥

ಕಾಂಕ್ಷಂತಿ ಪಿತರಃ ಪುತ್ರಾನ್ನರಕಸ್ಯ ಭಯಾರ್ದಿತಾಃ ।
ಗಯಾಂ ಯಾಸ್ಯತಿ ಯಃ ಪುತ್ರಃ ಸೋಽಸ್ಮಾನ್ ಸಂತಾರಯಿಷ್ಯತಿ ॥ ೫೩ ॥

ಗಯಾಯಾಂ ಧರ್ಮಪೃಷ್ಠೇ ಚ ಸದಸಿ ಬ್ರಹ್ಮಣಸ್ತಥಾ ।
ಗಯಾಶೀರ್ಷೇಽಕ್ಷಯವಟೇ ಪಿತೄಣಾಂ ದತ್ತಮಕ್ಷಯಂ ॥ ೫೪ ॥

---

೫೦. ಈರೀತಿಯಾಗಿ ವರ್ತಕನು ಪಿಂಡದಾನಮಾಡಲಾಗಿ ಅವರು ಪ್ರೇತಭಾವದಿಂದ ಮುಕ್ತರಾಗಿ ದ್ವಿಜತ್ವವನ್ನು ಹೊಂದಿ ಬ್ರಹ್ಮಲೋಕಕ್ಕೆ ಹೋದರು

೫೧. ಪಿತೃಶ್ರಾದ್ಧ ದಿನದಲ್ಲಿ ಅವರ ಮಕ್ಕಳು ಖಡ್ಗ ಮೃಗದಮಾಂಸ, ಕೃಷ್ಣಲೋಹ ಮತ್ತು ಆಡುಗಳನ್ನು ದಾನಮಾಡಿದರೆ ಅವು ಅನಂತ ಫಲಪ್ರದವಾಗುವುವು.

೫೨. ಪಿತೃ ಮೃತದಿನದಲ್ಲಿ ಅವರ ಮಕ್ಕಳು ಗಯೆಯಲ್ಲಿ ಅಕ್ಷಯವಟ ಛಾಯೆಯಲ್ಲಿ ಶ್ರಾದ್ಧ, ಜಪ, ಹೋಮ ಮತ್ತು ತಪಸ್ಸುಗಳನ್ನು ಮಾಡಿದರೆ ಅವು ಅನಂತ ಫಲದಾಯಕಗಳಾಗುವುವು.

೫೩. ಪಿತೃಗಳು ನರಕಭಯದಿಂದ ಪೀಡಿತರಾಗಿ ಯಾವನಾದರೊಬ್ಬ ಮಗನು ಗಯೆಗೆಹೋಗಿ ಶ್ರಾದ್ಧಾದಿಗಳನ್ನು ಮಾಡಿ ನಮ್ಮನುದ್ಧರಿಸಿಯಾನೆಂಬ ಭಾವನೆಯಿಂದಲೇ ಮಕ್ಕಳನ್ನು ಬಯಸುವರು.

೫೪. ಗಯೆ, ಧರ್ಮಪೃಷ್ಠ, ಬ್ರಹ್ಮಸದಸ್ಸು, ಗಯಾಶಿರಸ್ಸು ಮತ್ತು ಅಕ್ಷಯವಟಗಳಲ್ಲಿ ಪಿತೃಗಳಿಗೆ ಕೊಟ್ಟುದು ಅಕ್ಷಯವಾಗುವುದು.

ಬ್ರಹ್ಮಾರಣ್ಯಂ ಧರ್ಮಪೃಷ್ಠಂ ಧೇನುಕಾರಣ್ಯಮೇವ ಚ ।
ದೃಷ್ಟ್ವೈತಾನಿ ಪಿತೃಂಶ್ಚಾರ್ಚ್ಯ ವಂಶ್ಯಾನ್ವಿಂಶತಿಮುದ್ಧರೇತ್ ॥ ೫೫ ॥

ಮಹಾಕಲ್ಪಕೃತಂ ಪಾಪಂ ಗಯಾಂ ಪ್ರಾಪ್ಯ ವಿನಶ್ಯತಿ ।
ಗವಿ ಗೃಧ್ರವಟೇ ಚೈವ ಶ್ರಾದ್ಧಂ ದತ್ತಂ ಮಹಾಫಲಂ ॥ ೫೬ ॥

ಮತಂಗಸ್ಯ ಪದಂ ತತ್ರ ದೃಶ್ಯತೇ ಸರ್ವಮಾನುಷೈಃ ।
ಖ್ಯಾಪಿತಂ ಧರ್ಮಸರ್ವಸ್ವಂ ಲೋಕಸ್ಯೈವ ನಿದರ್ಶನಾತ್ ॥ ೫೭ ॥

ತತ್ಪಂಕಜವನಂ ಪುಣ್ಯಂ ಪುಣ್ಯವದ್ಭಿರ್ನಿಷೇವಿತಂ ।
ಯಸ್ಮಿನ್ ಪಾಂಡುರ್ವಿಶತ್ಯೇವ ತೀರ್ಥಂ ಸರ್ವನಿದರ್ಶನಂ ॥ ೫೮ ॥

ತೃತೀಯಾಯಾಂ ತಥಾ ಪಾದೇ ನಿಕ್ಷೀರಾಯಾಂ ಚ ಮಂಡಲೇ ।
ಮಹಾಹ್ರದೇ ಚ ಕೌಶಿಕ್ಯಾಂ ದತ್ತಂ ಶ್ರಾದ್ಧಂ ಮಹಾಫಲಂ ॥ ೫೯ ॥

---

೫೫. ಬ್ರಹ್ಮಾರಣ್ಯ, ಧರ್ಮಪೃಷ್ಠ ಮತ್ತು ಧೇನುಕಾರಣ್ಯಗಳನ್ನು ದರ್ಶನ ಮಾಡಿ ಪಿತೃಗಳನ್ನು ಪೂಜಿಸಿದರೆ ತನ್ನ ವಂಶದ ಇಪ್ಪತ್ತು ಪಿತೃಗಳ ಉದ್ಧಾರವಾಗುವುದು.

೫೬. ಮಹಾಕಲ್ಪದಲ್ಲಿ ಮಾಡಿದ ಪಾಪವು ಗಯಾಯಾತ್ರೆಯಿಂದ ನಾಶವಾಗುವುದು. ಗೋಕ್ಷೇತ್ರ ಮತ್ತು ಗೃಧ್ರವಟದಲ್ಲಿ ಮಾಡಿದ ಶ್ರಾದ್ಧವು ಮಹಾಫಲಪ್ರದವಾಗುವುದು.

೫೭. ಅಲ್ಲಿ ಮತಂಗನ ಆಶ್ರಮವಿದೆ. ಲೋಕಕ್ಕೇ ಉದಾಹರಣೆಯಾಗಿ ಧರ್ಮಸರ್ವಸ್ವವೂ ಸರ್ವರಿಗೂ ಕಾಣುವಂತೆ ಅಲ್ಲಿ ಪ್ರಕಟಿಸಲ್ಪಟ್ಟಿದೆ.

೫೮. ಪಾಂಡುರಾಜನು ಸರ್ವನಿದರ್ಶನವಾದ ತೀರ್ಥವನ್ನು ಪ್ರವೇಶಿಸಿದ ಸ್ಥಳದಲ್ಲಿ ಪುಣ್ಯವಂತರಿಂದ ಸೇವಿಸಲ್ಪಟ್ಟ ಪುಣ್ಯಕರವಾದ ಪದ್ಮವನವಿದೆ.

೫೯. ವಿಷ್ಣುಪಾದ, ನಿಕ್ಷೀರಾತೀರ್ಥಮಂಡಲ, ಮಹಾಹ್ರದ ಮತ್ತು ಕೌಶಿಕೀ ಕ್ಷೇತ್ರಗಳಲ್ಲಿ ತೃತೀಯಾದಿನ ಮಾಡಿದ ಶ್ರಾದ್ಧವು ಮಹಾಫಲದಾಯಕವಾಗುವುದು.

ಮುಂಡಪೃಷ್ಠೇ ಪದಂ ನ್ಯಸ್ತಂ ಮಹಾದೇವೇನ ಧೀಮತಾ ।
ಬಹುವರ್ಷಶತಂ ತಪ್ತಂ ತಪಸ್ತೀರ್ಥೇಷು ದುಷ್ಕರಂ ॥ ೬೦ ॥

ಅಲ್ಪೇನಾಪ್ಯತ್ರ ಕಾಲೇನ ನರೋ ಧರ್ಮಪರಾಯಣಃ ।
ಪಾಪ್ಮಾನಮುತ್ಸೃಜತ್ಯಾಶು ಜೀರ್ಣಂ ತ್ವಚಮಿವೋರಗಃ ॥ ೬೧ ॥

ನಾಮ್ನಾ ಕನಕನಂದೇತಿ ತೀರ್ಥಂ ತತ್ರೈವ ವಿಶ್ರುತಂ ।
ಉದೀಚ್ಯಾಂ ಮುಂಡಪೃಷ್ಠಸ್ಯ ಬ್ರಹ್ಮರ್ಷಿಗಣಸೇವಿತಂ ॥ ೬೨ ॥

ತತ್ರ ಸ್ನಾತ್ವಾ ದಿವಂ ಯಾಂತಿ ಸ್ವಶರೀರೇಣ ಮಾನವಾಃ ।
ದತ್ತಂ ತತ್ರ ಸದಾ ಶ್ರಾದ್ಧಮಕ್ಷಯಂ ಸಮುದಾಹೃತಂ ॥ ೬೩ ॥

ಸ್ನಾತ್ವಾ ದಿನತ್ರಯಂ ತತ್ರ ನಿಃಕ್ಷೀರಾಯಾಂ ಸುಲೋಚನೇ ।
ಮಾನಸೇ ಸರಸಿ ಸ್ನಾತ್ವಾ ಶ್ರಾದ್ಧಂ ತತ್ರ ಸಮಾಚರೇತ್ ॥ ೬೪ ॥

---

೬೦. ಜ್ಞಾನಿಯಾದ ಮಹಾದೇವನು ಮುಂಡಪೃಷ್ಠದಲ್ಲಿ ಪಾದವನ್ನಿಟ್ಟಿರುವನು. ಅವನು ಈ ತೀರ್ಥಗಳಲ್ಲಿ ನೂರಾರು ವರ್ಷಗಳಕಾಲ ಕಷ್ಟಸಾಧ್ಯವಾದ ತಪಸ್ಸನ್ನು ಮಾಡಿರುವನು.

೬೧. ಈ ಕ್ಷೇತ್ರದಲ್ಲಿ ಧರ್ಮನಿರತನಾದ ಮನುಷ್ಯನು ಸ್ವಲ್ಪಕಾಲ ತಪಸ್ಸು ಮಾಡುವುದರಿಂದಲೇ ತಕ್ಷಣದಲ್ಲಿಯೇ ಹಾವು ಪರೆಬಿಟ್ಟಂತೆ ಪಾಪಗಳನ್ನು ಕಳೆದುಕೊಳ್ಳುವನು.

೬೨. ಮುಂಡಪೃಷ್ಠದ ಉತ್ತರಭಾಗದಲ್ಲಿ ಬ್ರಹ್ಮರ್ಷಿ ಸಂಘದಿಂದ ಸೇವಿಸಲ್ಪಟ್ಟ ಕನಕನಂದಾ ಎಂಬ ತೀರ್ಥವು ಅಲ್ಲಿಯೇ ಪ್ರಸಿದ್ಧನಾಗಿದೆ.

೬೩. ಆ ತೀರ್ಥದಲ್ಲಿ ಸ್ನಾನಮಾಡಿದರೆ ಮನುಷ್ಯರು ಸಶರೀರರಾಗಿ ಸ್ವರ್ಗಕ್ಕೆ ಹೋಗುವರು. ಅಲ್ಲಿಮಾಡಿದ ಶ್ರಾದ್ಧವು ಯಾವಾಗಲೂ ಅಕ್ಷಯವಾಗುವುದೆಂದು ಹೇಳಿದೆ.

೬೪. 'ಸುಲೋಚನೇ ! ಆ ನಿಕ್ಷೀರಾತೀರ್ಥದಲ್ಲಿ ಮೂರುದಿನಗಳು ಸ್ನಾನ ಮಾಡಿ ಅನಂತರ ಮಾನಸಸರೋವರದಲ್ಲಿ ಸ್ನಾನಮಾಡಿ ಅಲ್ಲಿ ಶ್ರಾದ್ಧಮಾಡಬೇಕು.

ಉತ್ತರಂ ಮಾನಸಂ ಗತ್ವಾ ಸಿದ್ಧಿಂ ಪ್ರಾಪ್ನೋತ್ಯನುತ್ತಮಾಂ ।
ಯಸ್ತತ್ರ ನಿರ್ವಪೇಚ್ಛ್ರಾದ್ಧಂ ಯಥಾಶಕ್ತಿ ಯಥಾಬಲಂ ॥ ೬೫ ॥
ಕಾಮಾನ್ ಸಂಲಭತೇ ದಿವ್ಯಾನ್ಮೋಕ್ಷೋಪಾಯಾಂಶ್ಚ ಕೃತ್ಸ್ನಶಃ ।
ತತೋ ಬ್ರಹ್ಮಶಿರೋ ಗಚ್ಛೇದ್ಬ್ರಹ್ಮಣೋಪಶೋಭಿತಂ ॥ ೬೬ ॥
ಬ್ರಹ್ಮಲೋಕಮವಾಪ್ನೋತಿ ಪ್ರಭಾತಾಮೇವ ಶರ್ವರೀಂ ।
ಬ್ರಹ್ಮಣಾ ತತ್ರ ಸರಸಿ ಯೂಪಃ ಪುಣ್ಯಃ ಪ್ರಕಲ್ಪಿತಃ ॥ ೬೭ ॥
ಯೂಪಂ ಪ್ರದಕ್ಷಿಣೀಕೃತ್ಯ ವಾಜಪೇಯಫಲಂ ಲಭೇತ್ ।
ತತೋ ಗಚ್ಛೇತ್ತು ಸುಭಗೇ ಧೇನುಕಂ ಲೋಕವಿಶ್ರುತಂ ॥ ೬೮ ॥
ಏಕರಾತ್ರೋಷಿತೋ ಯತ್ರ ಪ್ರಯಚ್ಛೇತ್ತಿಲಧೇನುಕಾಂ ।
ಸರ್ವಪಾಪವಿನಿರ್ಮುಕ್ತಃ ಸೋಮಲೋಕಂ ವ್ರಜೇದ್ಧ್ರುವಂ ॥ ೬೯ ॥

---

೬೫. ಅನಂತರ ಉತ್ತರಮಾನಸಕ್ಕೆ ಹೋಗಿ ಅಲ್ಲಿ ತನ್ನ ಐಶ್ವರ್ಯಶಕ್ತಿಗಳಿಗನುಸಾರವಾಗಿ ಶ್ರಾದ್ಧಮಾಡುವವನು ಸರ್ವೋತ್ತಮವಾದ ಸಿದ್ಧಿಯನ್ನು ಪಡೆಯುವನು.

೬೬. ಮತ್ತು ದಿವ್ಯ ಇಷ್ಟಾರ್ಥಗಳನ್ನೂ, ಸಮಸ್ತ ಮೋಕ್ಷಸಾಧನಗಳನ್ನೂ ಸಹ ಹೊಂದುವನು. ಅನಂತರ ಬ್ರಹ್ಮನಿಂದಲಂಕೃತವಾದ ಬ್ರಹ್ಮಶಿರಸ್ಸಿಗೆ ಹೋಗಬೇಕು.

೬೭. ಅವನು ಬ್ರಹ್ಮಲೋಕವನ್ನು ಹೊಂದುವನು. ಅಲ್ಲಿ ರಾತ್ರಿಯೂ ಪ್ರಕಾಶಮಾನವಾಗಿರುತ್ತದೆ. ಆ ಸರೋವರದಲ್ಲಿ ಬ್ರಹ್ಮನು ಪುಣ್ಯಕರವಾದ ಯೂಪವನ್ನು ನಿರ್ಮಿಸಿರುವನು.

೬೮. ಆ ಯೂಪವನ್ನು ಪ್ರದಕ್ಷಿಣೆಮಾಡಿದರೆ ವಾಜಪೇಯಯಾಗದ ಫಲವನ್ನು ಹೊಂದುವನು. ಸುಂದರೀ! ತರುವಾಯ ಲೋಕವಿಖ್ಯಾತವಾದ ಧೇನುಕತೀರ್ಥಕ್ಕೆ ಹೋಗಬೇಕು.

೬೯. ಅಲ್ಲಿ ಒಂದು ದಿನ ಉಪವಾಸಮಾಡಿ ಎಳ್ಳಿನ ಗೋವನ್ನು ದಾನಮಾಡಿದರೆ ಸಕಲಪಾಪಗಳನ್ನೂ ನಾಶಪಡಿಸಿಕೊಂಡು ಖಂಡಿತವಾಗಿಯೂ ಸೋಮಲೋಕಕ್ಕೆ ಹೋಗುವನು.

ತತ್ರ ಚಿಹ್ನಂ ಮಹಾಭಾಗೇ ಅದ್ಯಾಪಿ ಮಹದದ್ಭುತಂ |
ಕಪಿಲಾ ಸಹ ವತ್ಸೇನ ಪರ್ವತೇ ವಿಚರತ್ಯುತ || ೨೦ ||

ಪದಾನಿ ತತ್ರ ದೃಶ್ಯಂತೇ ಸವತ್ಸಾಯೊಾಶ್ಚ ಮೋಹಿನಿ |
ಸವತ್ಸಾಯಾಃ ಪ್ರದೃಷ್ಟೇಷು ಪದೇಷು ನರಪುಂಗವೈಃ || ೨೧ ||

ಯತ್ಕಿಂಚಿದಶುಭಂ ಕರ್ಮ ತೇಷಾಂ ತನ್ನಶ್ಯತಿ ಕ್ಷಣಾತ್ |
ತತೋ ಗೃಧ್ರವಟಂ ಗಚ್ಛೇತ್ ಸ್ಥಾನಂ ದೇವಸ್ಯ ಧೀಮತಃ || ೨೨ ||

ಸ್ನಾಯೀತ ಭಸ್ಮನಾ ತತ್ರ ಅಭಿಗಮ್ಯ ವೃಷಧ್ವಜಂ |
ಬ್ರಾಹ್ಮಣಾನಾಂ ಭವೇದ್ದೇವಿ ವ್ರತಂ ದ್ವಾದಶವಾರ್ಷಿಕಂ || ೨೩ ||

ಇತರೇಷಾಂ ತು ವರ್ಣಾನಾಂ ಸರ್ವಂ ಪಾಪಂ ಪ್ರಣಶ್ಯತಿ |
ಉದ್ಯತಂ ಚ ತತೋ ಗಚ್ಛೇತ್ ಪರ್ವತಂ ಗೀತನಾದಿತಂ || ೨೪ ||

---

೨೦. ಧನ್ಯಳಾದ ಮೋಹಿನೀ! ಆ ಪರ್ವತದಲ್ಲಿ ಕಪಿಲಗೋವು ತನ್ನ ಕರುವಿನಿಂದ ಸಹಿತವಾಗಿ ತಿರಗುತ್ತದೆ. ಅದರ ಗುರುತು ಈಗಲೂ ಅಲ್ಲಿ ಕಾಣಿಸುತ್ತದೆ. ಅತ್ಯಾಶ್ಚರ್ಯ!

೨೧-೨೨. ಮೋಹಿನೀ! ಕರುಸಹಿತವಾದ ಕಪಿಲಗೋವಿನ ಪಾದಗಳು ಅಲ್ಲಿ ಕಾಣಿಸುತ್ತವೆ. ಆ ವತ್ಸಸಹಿತ ಗೋವಿನ ಪಾದಗಳನ್ನು ದರ್ಶನಮಾಡಿದ ಮನುಷ್ಯಶ್ರೇಷ್ಠರ ಅಶುಭಕರ್ಮವೆಲ್ಲವೂ ಕ್ಷಣಮಾತ್ರದಲ್ಲಿ ನಾಶವಾಗುವುದು. ಅನಂತರ ಜ್ಞಾನಿಯಾದ ದೇವನ ಆವಾಸಸ್ಥಾನವಾದ ಗೃಧ್ರವಟಕ್ಕೆ ಹೋಗಬೇಕು.

೨೩-೨೪. ದೇವಿಯೇ! ಅಲ್ಲಿ ಭಸ್ಮಸ್ನಾನಮಾಡಿ ಈಶ್ವರನನ್ನು ನಮಸ್ಕರಿಸಿದರೆ ಬ್ರಾಹ್ಮಣರಿಗೆ ಹನ್ನೆರಡುವರ್ಷ ವ್ರತಮಾಡಿದ ಪುಣ್ಯವು ಲಭಿಸುತ್ತದೆ. ಇತರರಿಗೆ ಸಕಲಪಾಪ ನಾಶವಾಗುತ್ತದೆ. ತರುವಾಯ ಸಂಗೀತಧ್ವನಿಯಿಂದ ಯುಕ್ತವಾದ ಉದ್ಯತಪರ್ವತಕ್ಕೆ ಹೋಗಬೇಕು.

ಸಾವಿತ್ರ್ಯಾಸ್ತು ಪದಂ ಯತ್ರ ದೃಶ್ಯತೇ ಪುಣ್ಯದಂ ಮಹತ್ ।
ತತ್ರ ಸಂಧ್ಯಾಮುಪಾಸೀತ ಬ್ರಾಹ್ಮಣಃ ಶಂಸಿತವ್ರತಃ ॥ ೭೫ ॥

ಉಪಾಸಿತಾ ಭವೇತ್ಸಂಧ್ಯಾ ತೇನ ದ್ವಾದಶವಾರ್ಷಿಕೀ ।
ಯೋನಿದ್ವಾರಂ ಚ ತತ್ರೈವ ವಿದ್ಯತೇ ವಿಧಿನಂದಿನೀ ॥ ೭೬ ॥

ತತ್ರಾಧಿಗಮ್ಯ ಮುಚ್ಯೇತ ಪುರುಷೋ ಯೋನಿಸಂಕಟಾತ್ ।
ಶುಕ್ಲಕೃಷ್ಣಾವುಭೌ ಪಕ್ಷೌ ಗಯಾಯಾಂ ಯೋ ವಸೇನ್ನೃಪ ॥ ೭೭ ॥

ಪುನಾತ್ಯಾಸಪ್ತಮಂ ಚೈವ ಕುಲಾನ್ಯತ್ರ ನ ಸಂಶಯಃ ।
ತತೋ ಗಚ್ಛೇಚ್ಚ ಸುಭಗೇ ಧರ್ಮಪೃಷ್ಠಂ ಮಹಾಫಲಂ ॥ ೭೮ ॥

ಯತ್ರ ಧರ್ಮಃ ಸ್ಥಿತಃ ಸಾಕ್ಷಾತ್ಪಿತೃಲೋಕಸ್ಯ ಪಾಲಕಃ ।
ಅಭಿಗಮ್ಯ ತತಸ್ತತ್ರ ವಾಜಿಮೇಧಫಲಂ ಲಭೇತ್ ॥ ೭೯ ॥

---

೭೫. ಅಲ್ಲಿ ಮಹಾ ಪುಣ್ಯಕರವಾದ ಸಾವಿತ್ರೀದೇವಿಯ ಪಾದವು ಕಾಣಿಸುತ್ತದೆ. ಅಲ್ಲಿ ಉತ್ತಮ ವ್ರತಧಾರಿಯಾದ ಬ್ರಾಹ್ಮಣನು ಸಂಧ್ಯೋಪಾಸನೆ ಮಾಡಬೇಕು.

೭೬. ಆ ಪುಣ್ಯಸ್ಥಳದಲ್ಲಿ ಒಂದಾವರ್ತಿ ಸಂಧ್ಯೋಪಾಸನೆ ಮಾಡಿದರೆ ಹನ್ನೆರಡುವರ್ಷಗಳು ಸಂಧ್ಯೋಪಾಸನೆಮಾಡಿದಷ್ಟು ಫಲ ಬರುತ್ತದೆ. ಬ್ರಹ್ಮಕುಮಾರಿಯೇ! ಅಲ್ಲಿಯೇ ಯೋನಿದ್ವಾರವೆಂಬ ತೀರ್ಥವಿದೆ.

೭೭-೭೮. ಆ ತೀರ್ಥಸೇವನೆಯಿಂದ ಮನುಷ್ಯನು ಯೋನಿಸಂಕಟ ಎಂದರೆ ಜನ್ಮವೆತ್ತುವ ಪ್ರಯಾಸವನ್ನು ನೀಗಿಕೊಳ್ಳುವನು. ದೊರೆಯೇ! ಶುಕ್ಲ ಕೃಷ್ಣ ಪಕ್ಷಗಳೆರಡರಲ್ಲಿಯೂ ಗಯೆಯಲ್ಲಿ ವಾಸಮಾಡುವವನು ಏಳು ಕುಲಗಳನ್ನು ಪವಿತ್ರಮಾಡುವನು. ಸಂಶಯವಿಲ್ಲ. ಅನಂತರ ಮಹಾಫಲದಾಯಕವಾದ ಧರ್ಮ ಪೃಷ್ಠಕ್ಕೆ ಹೋಗಬೇಕು.

೭೯. ಅಲ್ಲಿ ಸಾಕ್ಷಾತ್ತಾಗಿ ಪಿತೃಲೋಕಪಾಲಕನಾದ ಧರ್ಮರಾಜನಿರುವನು. ಆ ತೀರ್ಥವನ್ನು ಸೇವಿಸಿದರೆ ಅಶ್ವಮೇಧಯಜ್ಞದ ಫಲವು ಬರುತ್ತದೆ.

ತತೋ ಗಚ್ಛೇತ ಮನುಜೋ ಬ್ರಹ್ಮಣಸ್ತೀರ್ಥಮುತ್ತಮಂ ।
ತತ್ರಾಧಿಗಮ್ಯ ಬ್ರಹ್ಮಾಣಂ ರಾಜಸೂಯಫಲಂ ಲಭೇತ್ ॥ ೮೦ ॥

ಫಲ್ಗುತೀರ್ಥಂ ಚ ವಿಖ್ಯಾತಂ ಬಹುಮೂಲಫಲಾನ್ವಿತಂ ।
ಕೌಶಿಕೀ ಚ ನದೀ ಯತ್ರ ಶ್ರಾದ್ಧಂ ತತ್ರಾಕ್ಷಯಂ ಸ್ಮೃತಂ ॥ ೮೧ ॥

ತತೋ ಮಹೀಧರಂ ಗಚ್ಛೇದ್ಧರ್ಮಜ್ಞೇನಾಭಿರಕ್ಷಿತಂ ।
ರಾಜರ್ಷಿಣಾ ಪುಣ್ಯಕೃತಾ ಗಯೇನಾನುಪಭುಜ್ಯತೇ ॥ ೮೨ ॥

ಸರೋ ಗಯಶಿರೋ ಯತ್ರ ಪುಣ್ಯಾ ಚೈವ ಮಹಾನದೀ ।
ಋಷಿಜುಷ್ಟಂ ಮಹಾಪುಣ್ಯಂ ತೀರ್ಥಂ ಬ್ರಹ್ಮಸರೋವರಂ ॥ ೮೩ ॥

ಅಗಸ್ತ್ಯೋ ಭಗವಾನ್ಯತ್ರ ಗತೋ ವೈವಸ್ವತಂ ಪ್ರತಿ ।
ಉವಾಸ ಸತತಂ ಯತ್ರ ಧರ್ಮರಾಜಃ ಸನಾತನಃ ॥ ೮೪ ॥

---

೮೦. ಅನಂತರ ಮನುಷ್ಯನು ಉತ್ತಮವಾದ ಬ್ರಹ್ಮತೀರ್ಥಕ್ಕೆ ಹೋಗಿ ಅಲ್ಲಿ ಬ್ರಹ್ಮನನ್ನು ಸೇವಿಸಿದರೆ ರಾಜಸೂಯಯಾಗದ ಫಲವು ದೊರೆಯುತ್ತದೆ.

೮೧. ಕೌಶಿಕೀ ನದಿಯಿರುವ, ಗೆಡ್ಡೆ ಗೆಣಸು ಮತ್ತು ಹಣ್ಣುಗಳು ಸಮೃದ್ಧವಾಗಿರುವ ಫಲ್ಗುತೀರ್ಥವೆಂಬುದು ಪ್ರಸಿದ್ಧತೀರ್ಥವು. ಅಲ್ಲಿ ಮಾಡುವ ಶ್ರಾದ್ಧವು ಅಕ್ಷಯವಾಗುವುದು.

೮೨. ತರುವಾಯ ಧರ್ಮಜ್ಞನಿಂದ ಚೆನ್ನಾಗಿ ರಕ್ಷಿಸಲ್ಪಟ್ಟ, ರಾಜರ್ಷಿಯೂ, ಪುಣ್ಯಕರ್ಮಿಯೂ ಆದ ಗಯನಿಂದ ಅನುಪಭುಕ್ತವಾದ ಪರ್ವತಕ್ಕೆ ಹೋಗಬೇಕು.

೮೩. ಅಲ್ಲಿ ಸರೋವರ, ಗಯಶಿರಸ್ಸು, ಪುಣ್ಯಕರವಾದ ಮಹಾನದಿ, ಋಷಿಸೇವಿತವೂ ಮಹಾಪುಣ್ಯಕರವೂ ಆದ ಬ್ರಹ್ಮಸರೋವರವೆಂಬ ತೀರ್ಥ ಇವುಗಳಿವೆ.

೮೪. ಪೂಜ್ಯನಾದ ಅಗಸ್ತ್ಯನು ಆ ಪರ್ವತದಲ್ಲಿಯೇ ಯಮನ ಸಾನ್ನಿಧ್ಯವನ್ನು ಹೊಂದಿದನು. ಅಲ್ಲಿಯೇ ಸನಾತನನಾದ ಧರ್ಮರಾಜನು ಯಾವಾಗಲೂ ವಾಸಿಸುವನು.

ಸರ್ವಾಸಾಂ ಸರಿತಾಂ ಯತ್ರ ಸುಮುದ್ಭೇದೋ ಹಿ ದೃಶ್ಯತೇ |
ಯತ್ರ ಸಂನಿಹಿತೋ ನಿತ್ಯಂ ಮಹಾದೇವಃ ಪಿನಾಕಧೃಕ್ || ೮೫ ||

ಯತ್ರಾಕ್ಷಯೋ ವಟೋ ನಾಮ ವರ್ತತೇ ಲೋಕವಿಶ್ರುತಃ |
ಗಯೇನ ಯಜಮಾನೇನ ತತ್ರೇಷ್ಟಂ ಖತುನಾ ಪುರಾ || ೮೬ ||

ಆಸ್ಥಿತಾ ತು ಸರಿಚ್ಛ್ರೇಷ್ಠಾ ಗಯಯಜ್ಞೇಷು ರಕ್ಷಿತಾ |
ಮುಂಡಪೃಷ್ಠಂ ಗಯಂ ಚೈವ ರೈವತಂ ದೇವಪರ್ವತಂ || ೮೭ ||

ತೃತೀಯಂ ಕ್ರೌಂಚಪಾದಂ ಚ ದೃಷ್ಟ್ವಾ ಪಾಪಾತ್ಪ್ರಮುಚ್ಯತೇ |
ಶಿವನದ್ಯಾಂ ಶಿವಕರಂ ಗಯಾಯಾಂ ಚ ಗದಾಧರಂ || ೮೮ ||

ಸರ್ವತ್ರ ಪರಮಾತ್ಮಾನಂ ದೃಷ್ಟ್ವಾ ಮುಚ್ಯೇದಘವ್ರಜಾತ್ |
ವಾರಾಣಸ್ಯಾಂ ವಿಶಾಲಾಕ್ಷೀ ಪ್ರಯಾಗೇ ಲಲಿತಾ ತಥಾ || ೮೯ ||

---

೮೫. ಸಕಲನದಿಗಳೂ ಅಲ್ಲಿಯೇ ವ್ಯಕ್ತವಾಗುವುದು ಕಂಡುಬರುತ್ತದೆ. ಮಹಾದೇವನೂ ಧನುರ್ಧಾರಿಯಾಗಿ ಅಲ್ಲಿ ಯಾವಾಗಲೂ ಸನ್ನಿಹಿತನಾಗಿರುವನು.

೮೬. ಲೋಕವಿಖ್ಯಾತವಾದ ಅಕ್ಷಯುವಟವೆಂಬುದೂ ಸಹ ಅಲ್ಲಿಯೇ ಇದೆ. ಯಜಮಾನನಾದ ಗಯನು ಹಿಂದೆ ಅಲ್ಲಿ ಯಾಗಮಾಡಿರುವನು.

೮೭-೮೮. ಗಯನುಮಾಡಿದ ಯಜ್ಞಗಳಲ್ಲಿ ರಕ್ಷಿಸಲ್ಪಟ್ಟ, ಶ್ರೇಷ್ಠವಾದ ನದಿಯು ಅಲ್ಲಿ ಅವರಿಸಿದೆ. ಮುಂಡಪೃಷ್ಠ, ಗಯೆ, ರೈವತವೆಂಬ ದೇವಪರ್ವತ ಮತ್ತು ಮೂರನೆಯದಾದ ಕ್ರೌಂಚಪಾದ ಇವುಗಳ ದರ್ಶನಮಾಡಿದರೆ ಪಾಪಪರಿಹಾರವಾಗುತ್ತದೆ.

೮೮-೮೯. ಶಿವನದಿಯಲ್ಲಿ ಶಂಕರನನ್ನೂ, ಗಯೆಯಲ್ಲಿ ಗದಾಧರನನ್ನೂ ಎಲ್ಲಾ ತೀರ್ಥಗಳಲ್ಲಿಯೂ ಪರಮಾತ್ಮನನ್ನೂ ದರ್ಶನಮಾಡಿದರೆ ಪಾಪಸಮೂಹವು ಹೋಗುವುದು.

೮೯-೯೦. ಕಾಶಿಯಲ್ಲಿ ವಿಶಾಲಾಕ್ಷೀದೇವಿಯನ್ನೂ, ಪ್ರಯಾಗದಲ್ಲಿ ಲಲಿತೆ

ಗಯಾಯಾಂ ಮಂಗಲಾ ನಾಮ ಕೃತಶೌಚೇ ತು ಸೈಂಹಿಕಾ ।
ಯದ್ದದಾತಿ ಗಯಾಸ್ಥಸ್ಯ ಸರ್ವಮಾನಂತ್ಯಮಶ್ನುತೇ ॥ ೯೦ ॥

ನಂದಂತಿ ಪಿತರಸ್ತಸ್ಯ ಸುಪ್ರಕೃಷ್ಟೇನ ಕರ್ಮಣಾ ।
ಯದ್ಗಯಾಸ್ಥೋ ದದಾತ್ಯನ್ನಂ ಪಿತರಸ್ತೇನ ಪುತ್ರಿಣಃ ॥ ೯೧ ॥

ಇತಿ ಶ್ರೀನಾರದೀಯಮಹಾಪುರಾಣೋತ್ತರಭಾಗೇ ಮೋಹಿನೀ
ವಸುಸಂವಾದೇ ಗಯಾಮಾಹಾತ್ಮ್ಯಂ ನಾಮ
ಚತುಶ್ಚತ್ವಾರಿಂಶೋಽಧ್ಯಾಯಃ

---

ಯನ್ನೂ, ಗಯೆಯಲ್ಲಿ ಮಂಗಳದೇವಿಯನ್ನೂ, ಕೃತಶೌಚದಲ್ಲಿ ಸೈಂಹಿಕೆಯನ್ನೂ ದರ್ಶನಮಾಡಬೇಕು.

೯೦. ಗಯಾ ಕ್ಷೇತ್ರವಾಸಿಗೆ ದಾನಮಾಡಿದುದೆಲ್ಲವೂ ಅನಂತ ಫಲದಾಯಕವಾಗುವುದು.

೯೧. ಪುತ್ರನು ಗಯಾವಾಸಿಗೆ ಅನ್ನದಾನಮಾಡಿದರೆ ಆ ಉತ್ಕೃಷ್ಟ, ಧರ್ಮದಿಂದ ಅವನ ಪಿತೃಗಳು ತೃಪ್ತರಾಗುವರು. ಅಂತಹ ಮಗನಿಂದಲೇ ಪಿತೃಗಳು ಪುತ್ರವಂತರೆನಿಸುವರು.

ಇಂತು ಶ್ರೀನಾರದೀಯ ಪುರಾಣೋತ್ತರಭಾಗದಲ್ಲಿ ಮೋಹಿನೀ ವಸುಸಂವಾದ
ದೊಳು ಗಯಾಮಾಹಾತ್ಮ್ಯೆಯೆಂಬ ನಲವತ್ತುನಾಲ್ಕನೆಯ
ಅಧ್ಯಾಯವು ಮುಗಿದುದು.

### ಕಥಾಸಾರಾಂಶ

ಗಯಾಕ್ಷೇತ್ರದ ಮಹಿಮೆಯನ್ನು ವರ್ಣಿಸುವ ಪ್ರಸಂಗದಿಂದ ವಿಶಾಲ ರಾಜನ ಕಥೆಯನ್ನು ಹೇಳಿ, ಗಯ ಮತ್ತು ಅದರ ಸುತ್ತಮುತ್ತಲಿರುವ ತೀರ್ಥಗಳ ಮಹಾತ್ಮ್ಯೆಯನ್ನು ವಿಸ್ತಾರವಾಗಿ ನಿರೂಪಿಸಿರುವರು.



# ಪಂಚಚತ್ವಾರಿಂಶೋಽಧ್ಯಾಯಃ

---

ವಸುರುವಾಚ

ಶೃಣು ಮೋಹಿನಿ ವಕ್ಷ್ಯಾಮಿ ಪುಣ್ಯಂ ಪ್ರೇತಶಿಲಾಭವಂ ।
ಮಾಹಾತ್ಮ್ಯಂ ಯತ್ರ ದತ್ವಾ ತು ಪಿಂಡಾನ್ ಪಿತೄನ್ ಸಮುದ್ಧರೇತ್॥ ೧ ॥

ಆಚ್ಛಾದಿತಶಿಲಾಪಾದಃ ಪ್ರಭಾಸೇನಾತ್ರಿಣಾ ತತಃ ।
ಪ್ರಭಾಸೋ ಮುನಿಭಿಃ ಸ್ತುತ್ಯಃ ಶಿಲಾಂಗುಷ್ಠೋ ವಿನಿರ್ಗತಃ ॥ ೨ ॥

ಅಂಗುಷ್ಠಸ್ಥಿತ ಈಶೋಽಪಿ ಪ್ರಭಾಸೇಶಃ ಪ್ರಕೀರ್ತಿತಃ ।
ಶಿಲಾಂಗುಷ್ಠೈಕದೇಶೋ ಯಃ ಸಾ ಚ ಪ್ರೇತಶಿಲಾ ಸ್ಥಿತಾ ॥ ೩ ॥

---

## ನಲವತ್ತೈದನೆಯ ಅಧ್ಯಾಯವು.

೧. ವಸುವು ಹೇಳಿದನು :—ಮೋಹಿನೀ ! ಎಲ್ಲಿ ಪಿಂಡಪ್ರದಾನಮಾಡಿದರೆ ಪಿತೃಗಳ ಉದ್ಧಾರವಾಗುವುದೋ ಅಂತಹ ಪುಣ್ಯಕರವಾದ ಪ್ರೇತಶಿಲೆಯ ಮಾಹಾತ್ಮ್ಯೆಯನ್ನು ಹೇಳುವೆನು ಕೇಳು.

೨. ಅತ್ರಿವಂಶಜನಾದ ಪ್ರಭಾಸನಿಂದ ಶಿಲಾಪಾದವು ಮುಚ್ಚಲ್ಪಟ್ಟಿದ್ದಿತು. ಬಳಿಕ ಪ್ರಭಾಸನು ಮುನಿಗಳಿಂದ ಸ್ತುತಿಸಲ್ಪಟ್ಟವನಾಗಿ ಪ್ರಸನ್ನನಾದನು. ಆಗ ಶಿಲಾಂಗುಷ್ಠವು ಹೊರಗೆ ಬಂದಿತು.

೩. ಅಂಗುಷ್ಠದಲ್ಲಿದ್ದ ಈಶ್ವರನೂ ಸಹ ಪ್ರಭಾಸೇಶನೆಂದು ಕರೆಸಿಕೊಳ್ಳುವನು. ಶಿಲಾಂಗುಷ್ಠದ ಒಂದುಭಾಗವು ಪ್ರೇತಶಿಲೆಯೆಂದು ಪ್ರಸಿದ್ಧವಾಗಿದೆ.

ಪಿಂಡದಾನಾದ್ಯತಸ್ತಸ್ಮಾತ್ಪ್ರೇತತ್ವಾನ್ಮುಚ್ಯತೇ ನರಃ ।
ಮಹಾನದೀಪ್ರಭಾಸಾತ್ರ್ಯೋಃ ಸಂಗಮೇ ಸ್ನಾನಕೃನ್ನರಃ ॥ ೪ ॥

ವಾಮದೇವಃ ಸ್ವಯಂ ಭೂಯಾದ್ವಾಮತೀರ್ಥಂ ತತಃ ಸ್ಮೃತಂ ।
ಪ್ರಾರ್ಥಿತೋಥ ಮಹಾನದ್ಯಾಮಸ್ನಾತಶ್ಚಾಭವದ್ಯದಿ ॥ ೫ ॥

ರಾಮತೀರ್ಥಂ ತ್ವತ್ರಜಾತಂ ಸರ್ವಲೋಕಸುಪಾವನಂ ।
ಜನ್ಮಾಂತರಸಹಸ್ರೈಸ್ತು ಯತ್ಕೃತಂ ಪಾತಕಂ ನರೈಃ ॥ ೬ ॥

ತತ್ಸರ್ವಂ ವಿಲಯಂ ಯಾತಿ ರಾಮತೀರ್ಥಾಭಿಷೇಚನಾತ್ ।
ಮಂತ್ರೇಣಾನೇನ ಯಃ ಸ್ನಾತ್ವಾ ಶ್ರಾದ್ಧಂ ಕುರ್ವೀತ ಮಾನವಃ ॥ ೭ ॥

ರಾಮತೀರ್ಥೇ ಪಿಂಡದಸ್ತು ವಿಷ್ಣುಲೋಕೇ ಮಹೀಯತೇ ।
ರಾಮರಾಮ ಮಹಾಬಾಹೋ ದೇವಾನಾಮಭಯಂಕರ ॥ ೮ ॥

---

೪-೫. ಆ ಪ್ರೇತಶಿಲೆಯಲ್ಲಿ ಪಿಂಡದಾನಮಾಡುವುದರಿಂದ ಮನುಷ್ಯನು ಪ್ರೇತಜನ್ಮದಿಂದ ಮುಕ್ತನಾಗುವನು. ಮಹಾನದೀಪ್ರಭಾಸಾತ್ರಿಗಳ ಸಂಗಮದಲ್ಲಿ ಸ್ನಾನಮಾಡಿದ ಮನುಷ್ಯನು ಸಾಕ್ಷಾದ್ವಾಮದೇವನಾಗುವನು ಎಂದರೆ ರುದ್ರದೇವರ ಅನುಗ್ರಹಕ್ಕೆ ಪಾತ್ರನಾಗುವನು ಎಂದು ಭಾವ. ಆದಕಾರಣ ಅದು ವಾಮತೀರ್ಥವೆಂದು ಹೇಳಲ್ಪಟ್ಟಿದೆ. ಮಹಾನದಿಯಲ್ಲಿ ಸ್ನಾನಮಾಡಲಾಗದಿದ್ದರೆ ಅದರ ಧ್ಯಾನವನ್ನಾದರೂ ಮಾಡಬೇಕು.

೬-೭. ಇಲ್ಲಿ ಸಕಲಲೋಕಗಳಿಗೂ ಅತ್ಯಂತ ಪವಿತ್ರತೆಯನ್ನುಂಟುಮಾಡುವ ರಾಮತೀರ್ಥವು ಉದ್ಭವಿಸಿದೆ. ಅದರಲ್ಲಿ ಸ್ನಾನಮಾಡುವುದರಿಂದ ಮನುಷ್ಯರು ಸಾವಿರಾರು ಜನ್ಮಗಳಲ್ಲಿ ಮಾಡಿದ ಪಾಪವೆಲ್ಲವೂ ನಾಶವಾಗುವುದು.

೭-೮. "ರಾಮರಾಮ ಮಹಾಬಾಹೋ ದೇವಾನಾಮಭಯಂಕರ । ತ್ವಾಂ ನಮಸ್ಯೇ ತು ದೇವೇಶ ಮಮ ನಶ್ಯತು ಪಾತಕಂ ॥" (ಮಹಾ ಪರಾಕ್ರಮಿಯೂ, ದೇವತೆಗಳಿಗಭಯದಾತೃವೂ ಆದ ರಾಮನೇ! ನಿನಗೆ ನಮಸ್ಕಾರ

ತ್ವಾಂ ನಮಸ್ಯೇ ತು ದೇವೇಶ ಮಮ ನಶ್ಯತು ಪಾತಕಂ ।
ನಮಸ್ಕೃತ್ಯ ಪ್ರಭಾಸೇಶಂ ಭಾಸಮಾನಂ ಶಿವಂ ವ್ರಜೇತ್ ॥ ೯ ॥

ತಂ ಚ ಶಂಭುಂ ನಮಸ್ಕೃತ್ಯ ಕುರ್ಯಾದ್ಯಾಮ್ಯಬಲಿಂ ತತಃ ।
ಆಪಸ್ತ್ವಮಸಿ ದೇವೇಶ ಜ್ಯೋತಿಷಾಂ ಪತಿರೇವ ಚ ॥ ೧೦ ॥

ಪಾಪಂ ನಾಶಯ ಮೇ ಶೀಘ್ರಂ ಮನೋವಾಕ್ಕಾಯಕರ್ಮಜಂ ।
ಶಿಲಾಯಾ ಜಘನಂ ಭೂಯಃ ಸಮಾಕ್ರಾಂತಂ ಯಮೇನ ಚ ॥ ೧೧ ॥

ಧರ್ಮರಾಜೇನಾದ್ಭಿರುಕ್ತೋ ನ ಗಚ್ಛೇತಿ ನಗಃ ಸ್ಮೃತಃ ।
ಯಮರಾಜಧರ್ಮರಾಜೌ ನಿಶ್ಚಲಾಯೇರಿತೌ ಸ್ಮೃತೌ ॥ ೧೨ ॥

---

ಮಾಡುವೆನು. ದೇವೇಶ್ವರನೇ! ನನ್ನ ಪಾಪವು ನಾಶವಾಗಲಿ) ಎಂಬೀಮಂತ್ರದಿಂದ ರಾಮತೀರ್ಥದಲ್ಲಿ ಸ್ನಾನಮಾಡಿ ಶ್ರಾದ್ಧಮಾಡಬೇಕು. ಅಲ್ಲಿ ಪಿಂಡಪ್ರದಾನಮಾಡಿದವನು ವಿಷ್ಣುಲೋಕದಲ್ಲಿ ಸುಖಭಾಗಿಯಾಗುವನು. ಪ್ರಭಾಸೇಶ್ವರನಿಗೆ ನಮಸ್ಕಾರಮಾಡಿದರೆ ಪ್ರಕಾಶಮಾನನಾದ ಶಿವನ ಸಾನ್ನಿಧ್ಯವನ್ನು ಪಡೆಯುವನು.

೧೦-೧೧. ಆ ಶಂಭುವನ್ನು ನಮಸ್ಕರಿಸಿ ಯಾಮ್ಯಬಲಿಯನ್ನು ಸಮರ್ಪಿಸಬೇಕು. "ದೇವೇಶನೇ! ನೀನು ಜಲನಿಯಾಮಕದೇವತೆಯಾಗಿರುವೆ! ಮತ್ತು ತೇಜಸ್ಸಿಗೂ ಸಹ ಅಧಿಪತಿಯಾಗಿರುವೆ! ನನ್ನ ಮನಸ್ಸು ವಾಕ್ಕು ಮತ್ತು ಶರೀರಸಂಬಂಧವಾದ ವ್ಯಾಪಾರಗಳಿಂದುಂಟಾಗುವ ಪಾಪವನ್ನು ಬೇಗ ನಾಶಮಾಡು'' ಎಂದು ಪ್ರಾರ್ಥಿಸಬೇಕು. ಶಿಲೆಯಮಧ್ಯಭಾಗವು ಪುನಃ ಯಮನಿಂದ ಆಕ್ರಮಿಸಲ್ಪಟ್ಟಿತು.

೧೨. ಜಲನಿಯಾಮಕನಾದ ಧರ್ಮರಾಜನು ಅದನ್ನು ಚಲಿಸಕೂಡದೆಂದು ಹೇಳಲಾಗಿ ಅದು ಸ್ಥಿರವಾಗಿನಿಂತು "ನಗ" ಎಂಬುದಾಗಿ ಉಕ್ತವಾಯಿತು. ಯಮರಾಜ ಮತ್ತು ಧರ್ಮರಾಜರಿಬ್ಬರೂ ಆ ಶಿಲೆಯನ್ನು ಚಲಿಸದಂತೆ ಸ್ಥಿರವಾಗಿ ನಿಲ್ಲಲು ಪ್ರೇರಕರೆಂದು ಹೇಳಿದೆ.

ತಾಭ್ಯಾಂ ಬಲಿಮಕೃತ್ವಾ ಸ್ಯಾದ್ಗಯಾಶ್ರಾದ್ಧಮಪಾರ್ಥಕಂ ।
ಶ್ವಾನೌ ದ್ವೌ ಶ್ಯಾಮಶಬಲೌ ವೈವಸ್ವತಕುಲೋದ್ಭವೌ ॥ ೧೩ ॥

ತಾಭ್ಯಾಂ ಪಿಂಡಂ ಪ್ರದಾಸ್ಯಾಮಿ ಸ್ಯಾತಾಮೇತಾವಹಿಂಸಕೌ ।
ತೀರ್ಥೇ ಪ್ರೇತಶಿಲಾದೌ ಚ ಚರುಣಾ ಸಘೃತೇನ ಚ ॥ ೧೪ ॥

ಪಿತೄನಾವಾಹ್ಯ ತೇಭ್ಯಶ್ಚ ಮಂತ್ರೈಃ ಪಿಂಡಾಂಸ್ತು ನಿರ್ವಪೇತ್ ।
ಕೃತ್ವಾ ಧ್ಯಾನಂ ಪಿತೄಣಾಂ ತು ಪ್ರಯತಃ ಪ್ರೇತಪರ್ವತೇ ॥ ೧೫ ॥

ಪ್ರಾಚೀನಾವೀತಿಕೋ ಭೂಯೋದ್ದಕ್ಷಿಣಾಭಿಮುಖಃ ಸ್ಮರೇತ್ ।
ಕವ್ಯವಾಲೋಽನಲಃ ಸೋಮೋ ಯಮಶ್ಚೈವಾರ್ಯಮಾ ತಥಾ ॥ ೧೬ ॥

ಅಗ್ನಿಷ್ವಾತ್ತಾ ಬರ್ಹಿಷದಃ ಸೋಮಪಾಃ ಪಿತೃದೇವತಾಃ ।
ಆಗಚ್ಛಂತು ಮಹಾಭಾಗಾ ಯುಷ್ಮಾಭೀ ರಕ್ಷಿತಸ್ತ್ವಹಂ ॥ ೧೭ ॥

---

೧೩-೧೪. ಆದಕಾರಣ ಅವರಿಬ್ಬರಿಗೆ ಬಲಿಪ್ರದಾನವಮಾಡದೆ ಆಚರಿಸುವ ಗಯಾಶ್ರಾದ್ಧವು ನಿಷ್ಪ್ರಯೋಜನವು. ಯಮನವಂಶದಲ್ಲಿ ಶ್ಯಾಮ, ಶಬಲ ಎಂಬ ಎರಡು ನಾಯಿಗಳು ಹುಟ್ಟಿವೆ. ಅವುಗಳಿಗೆ ಪಿಂಡವನ್ನು ಹಾಕುವೆನು. ಅವು ನಮಗೆ ಹಿಂಸೆಯನ್ನುಮಾಡದಿರಲಿ ಎಂದು ಪ್ರಾರ್ಥಿಸಬೇಕು.

೧೪-೧೫. ಪ್ರೇತಶಿಲೆ ಮುಂತಾದ ತೀರ್ಥಗಳಲ್ಲಿ ಘೃತಸಹಿತವಾದ ಅನ್ನ ದಿಂದ ಪಿಂಡಗಳನ್ನು ಮಾಡಿ ಪಿತೃಗಳನ್ನು ಆಹ್ವಾನಿಸಿ ಮಂತ್ರಪೂರ್ವಕವಾಗಿ ಅವನ್ನು ಅವರಿಗರ್ಪಿಸಬೇಕು.

೧೫-೧೭. ಪ್ರೇತಪರ್ವತದಲ್ಲಿ ನಿಯಮದಿಂದ ಪಿತೃಗಳ ಧ್ಯಾನಮಾಡಿ ಯಜ್ಞೋಪವೀತವನ್ನು ಎಡಭುಜಕ್ಕೆ ಹಾಕಿಕೊಂಡು ದಕ್ಷಿಣದಿಕ್ಕಿಗೆ ಇದಿರಾಗಿ ಕುಳಿತು ಧನ್ಯರಾದ ಕವ್ಯವಾಲ, ಅಗ್ನಿ, ಸೋಮ, ಯಮ, ಸೂರ್ಯ, ಅಗ್ನಿಷ್ವಾತ್ತ ಎಂಬ ಗಣಗಳು, ಬರ್ಹಿಷದರು ಮತ್ತು ಸೋಮಪಾನಮಾಡಿದ ಪಿತೃದೇವತೆಗಳೇ! ನೀವು ಇಲ್ಲಿ ಸನ್ನಿಹಿತರಾಗಬೇಕು! ನಿಮ್ಮಿಂದ ನಾನು ರಕ್ಷಿತನಾಗಿರುವೆನು ಎಂದು ಸ್ಮರಿಸಿಬೇಕು.

ಮದೀಯಾಃ ಪಿತರೋ ಯೇ ಚ ಕುಲೇ ಜಾತಾಃ ಸನಾಭಯಃ ।
ತೇಷಾಂ ಪಿಂಡಪ್ರದಾನಾರ್ಥಮಾಗತೋಽಸ್ಮಿ ಗಯಾಮಿಮಾಂ ॥ ೧೮ ॥

ತೇ ಸರ್ವೇ ತೃಪ್ತಿಮಾಯಾಂತು ಶ್ರಾದ್ಧೇನಾನೇನ ಶಾಶ್ವತೀಂ ।
ಆಚಮ್ಯೋಕ್ತ್ವಾಥ ಸಂಚಾಂಗಂ ಪ್ರಾಣಾನಾಯಮ್ಯ ಯತ್ನತಃ ॥ ೧೯ ॥

ಪುನರಾವರ್ತಯೇ ಪಿಂಡಾನ್ ಬ್ರಹ್ಮಲೋಕಾಪ್ತಿಹೇತವೇ ।
ಏವಂ ಸಂಕಲ್ಪ್ಯ ವಿಧಿವಚ್ಛ್ರಾದ್ಧಂ ಕುರ್ಯಾದ್ಯಥಾಕ್ರಮಂ ॥ ೨೦ ॥

ಪಿತ್ರ್ಯಾನಾವಾಹ್ಯ ಚಾಭ್ಯರ್ಚ್ಯ ಮಂತ್ರೈಃ ಪಿಂಡಪ್ರದೋ ಭವೇತ್ ।
ಪ್ರಕ್ಷಾಲ್ಯ ಪೂರ್ವಂ ತತ್ಸ್ಥಾನಂ ಪಂಚಗವ್ಯೈಃ ಪೃಥಕ್ ಪೃಥಕ್ ॥೨೧॥

---

೧೮. ಸನಾಭಿಗಳಾಗಿ ನಮ್ಮ ಕುಲದಲ್ಲಿ ಹಟ್ಟಿದ ಪಿತೃಗಳಿಗೆ ಪಿಂಡಪ್ರದಾನ ಮಾಡುವುದಕ್ಕೋಸ್ಕರವಾಗಿ ಈ ಗಯಾಕ್ಷೇತ್ರಕ್ಕೆ ಬಂದಿರುವೆನು.

೧೯. ಆ ಪಿತೃಗಳೆಲ್ಲರೂ ನಾನು ಮಾಡುವ ಈ ಶ್ರಾದ್ಧದಿಂದ ಶಾಶ್ವತವಾದ ತೃಪ್ತಿಯನ್ನು ಹೊಂದಲಿ—ಎಂಬುದಾಗಿ ಅನುಸಂಧಾನಮಾಡಿಕೊಂಡು ಬಳಿಕ ಆಚಮನಮಾಡಿ ಪ್ರಾಣಾಯಾಮುವನ್ನೂ ಮಾಡಿ ದೇಶಕಾಲಾದಿಗಳನ್ನು ಹೇಳಬೇಕು.

೨೦. ಅನಂತರ ಪಿತೃಗಳಿಗೆ ಬ್ರಹ್ಮಲೋಕವು ಲಭಿಸುವುದಕ್ಕಾಗಿ ಪಿಂಡಗಳನ್ನು ಪುನರಾವರ್ತಿಮಾಡುವೆನು ಎಂಬುದಾಗಿ ಸಂಕಲ್ಪಿಸಿ ವಿಧಾನೋಕ್ತಕ್ರಮದಿಂದ ಶ್ರಾದ್ಧಮಾಡಬೇಕು.

೨೧. ಆದಿಯಲ್ಲಿ ಪಿಂಡಪ್ರದಾನಮಾಡುವ ಸ್ಥಳವನ್ನು ಪಂಚಗವ್ಯಗಳಿಂದ ಪ್ರತ್ಯೇಕ ಪ್ರತ್ಯೇಕವಾಗಿ ತೊಳೆದು ಅಲ್ಲಿ ಪಿತೃಗಳನ್ನು ಆವಾಹನೆ ಮಾಡಿ ಮಂತ್ರಗಳಿಂದ ಪೂಜಿಸಿ ಪಿಂಡಪ್ರದಾನಮಾಡುವವನಾಗಬೇಕು.

ದತ್ವಾ ಶ್ರಾದ್ಧಂ ಸಪಿಂಡಾನಾಂ ತೇಷಾಂ ದಕ್ಷಿಣಭಾಗತಃ ।
ಕುಶೈರಾಸ್ತೀರ್ಯ ತೇಷಾಂ ತು ಸಕೃದ್ದತ್ವಾ ತಿಲೋದಕಂ ॥ ೨೨ ॥

ಗೃಹೀತ್ವಾಂಜಲಿನಾ ತೇಭ್ಯಃ ಪಿತೃತೀರ್ಥೇನ ಯತ್ನತಃ ।
ಸಕ್ತುನಾ ಮುಷ್ಟಿಮಾತ್ರೇಣ ದದ್ಯಾದಕ್ಷಯ್ಯಪಿಂಡಕಂ ॥ ೨೩ ॥

ತಿಲಾಜ್ಯದಧಿಮಧ್ವಾದಿ ಪಿಂಡದ್ರವ್ಯೇಷು ಯೋಜಯೇತ್ ।
ಸಂಬಂಧಿನಸ್ತಿಲಾದ್ಯೈಶ್ಚ ಕುಶೇಷ್ವಾವಾಹಯೇತ್ತತಃ ॥ ೨೪ ॥

ಏತಾಂಸ್ತು ಮಂತ್ರಾಂಸ್ತ್ರೀಶ್ರಾದ್ಧೇ ಸ್ತ್ರೀಲಿಂಗಾನ್ಯೈ ಸಮುಚ್ಚರೇತ್ ।
ಪಿಂಡಾನ್ ದದ್ಯಾದ್ಯಥಾ ಪೂರ್ವಂ ಪಿತೄನಾವಾಹ್ಯ ಪೂರ್ವವತ್ ॥ ೨೫ ॥

ಸ್ವಗೋತ್ರೇ ವಾ ವಿಗೋತ್ರೇ ವಾ ದಂಪತ್ಯೋಃ ಪಿಂಡಪಾತನೇ ।
ಅಪೃಥಙ್ನಿಷ್ಫಲಂ ಶ್ರಾದ್ಧಂ ಪಿಂಡಂ ಚೋದಕತರ್ಪಣಂ ॥ ೨೬ ॥

---

೨೨. ಸಪಿಂಡರಿಗೆ ಶ್ರಾದ್ಧವನ್ನು ಸಮರ್ಪಿಸಿ ಅವರ ದಕ್ಷಿಣಭಾಗದಲ್ಲಿ ದರ್ಭೆಗಳನ್ನು ಹರಡಿ ಅಲ್ಲಿ ಪಿತೃಗಳಿಗೆ ಒಂದೊಂದಾವರ್ತಿ ತಿಲೋದಕವನ್ನು ಕೊಟ್ಟು ಪಿಂಡಪ್ರದಾನವನ್ನು ಮಾಡಬೇಕು

೨೩. ಬೊಗಸೆಯಿಂದ ಒಂದುಹಿಡಿ ಸಕ್ತುವನ್ನು ತೆಗೆದುಕೊಂಡು ಪಿತೃತೀರ್ಥವನ್ನು ಸೇರಿಸಿ ಅಕ್ಷಯ್ಯಪಿಂಡವನ್ನರ್ಪಿಸಬೇಕು.

೨೪-೨೫. ಪಿಂಡಮಾಡುವ ಅನ್ನಾದಿಗಳಲ್ಲಿ ಎಳ್ಳು, ತುಪ್ಪ, ಮೊಸರು, ಜೇನುತುಪ್ಪ ಮುಂತಾದುವುಗಳನ್ನು ಸೇರಿಸಬೇಕು. ಸಂಬಂಧಿಗಳಾದ ಪಿತೃಗಳನ್ನು ದರ್ಭೆಗಳಲ್ಲಿ ತಿಲಾದಿಗಳಿಂದ ಆವಾಹನೆ ಮಾಡಬೇಕು. ಅನಂತರ ಶ್ರಾದ್ಧದಲ್ಲಿ ಈ ಮೂರು ಮಂತ್ರಗಳನ್ನು ಸ್ತ್ರೀಲಿಂಗಗಳಾಗಿ ಉಚ್ಚರಿಸಬೇಕು. ಹಿಂದೆ ಹೇಳಿರುವಪ್ರಕಾರ ಪಿತೃಗಳನ್ನು ಆವಾಹನೆಮಾಡಿ ಪಿಂಡಗಳನ್ನು ಕೊಡಬೇಕು.

೨೬. ಸ್ವಗೋತ್ರ ಅಥವಾ ಭಿನ್ನಗೋತ್ರಜರಾದ ದಂಪತಿಗಳಿಗೆ ಪಿಂಡ ಹಾಕುವಾಗ ಪಿಂಡಪ್ರದಾನ ಮತ್ತು ಜಲತರ್ಪಣಗಳನ್ನು ಪೃಥಕ್ಕಾಗಿ ಮಾಡಬೇಕು. ಹಾಗೆಮಾಡದೆ ಒಟ್ಟಿಗೆಮಾಡಿದರೆ ಆ ಶ್ರಾದ್ಧವು ನಿಷ್ಫಲವಾಗುವುದು.

ಪಿಂಡಪಾತ್ರೇ ತಿಲಾನ್ ದತ್ವಾ ಪೂರಯಿತ್ವಾ ಶುಭೋದಕೈಃ |
ಮಂತ್ರೇಣಾನೇನ ಪಿಂಡಾಂಸ್ತಾನ್ ಪ್ರದಕ್ಷಿಣಕರಂ ಯಥಾ || ೨೭ ||

ಪರಿಷೇಚಯೇತ್ತ್ರಿಧಾ ಸರ್ವಾನ್ ಪ್ರಣಿಪತ್ಯ ಕ್ಷಮಾಪಯೇತ್ |
ಪಿತ್ರ್ನ್ ವಿಸೃಜ್ಯ ಚಾಚಮ್ಯ ಸಾಕ್ಷಿಣಃ ಶ್ರಾವಯೇತ್ಸುರಾನ್ || ೨೮ ||

ಸರ್ವಸ್ಥಾನೇಷು ಚೈವಂ ಸ್ಯಾತ್ಪಿಂಡದಾನಂ ತು ಮೋಹಿನಿ |
ಗಯಾಯಾಂ ಪಿಂಡದಾನೇ ತು ನ ಚ ಕಾಲಂ ವಿಚಿಂತಯೇತ್ || ೨೯ ||

ಅಧಿಮಾಸೇ ಜನಿದಿನೇ ಹ್ಯಸ್ತೇ ಚ ಗುರುಶುಕ್ರಯೋಃ |
ನ ತ್ಯಜೇತ್ತು ಗಯಾಶ್ರಾದ್ಧಂ ಸಿಂಹಸ್ಥೇ ಚ ಬೃಹಸ್ಪತೌ || ೩೦ ||

---

೨೭-೨೮. ಪಿಂಡಮಾಡಿದ ಪಾತ್ರೆಯಲ್ಲಿ ಎಳ್ಳನ್ನು ಹಾಕಿ ಒಳ್ಳೆಯ ನೀರನ್ನು ತುಂಬಿ ಈ ಮಂತ್ರದಿಂದ ಆ ಪಿಂಡಗಳಿಗೆ ಪ್ರದಕ್ಷಿಣಾಕಾರವಾಗಿ ಮೂರಾವರ್ತಿ ಪರಿಷೇಚನೆಮಾಡಿ ಎಲ್ಲಕ್ಕೂ ನಮಸ್ಕಾರಮಾಡಿ ಕ್ಷಮಾಪಣೆಯನ್ನು ಕೇಳಿಕೊಳ್ಳಬೇಕು. ಅನಂತರ ಪಿತೃಗಳನ್ನು ವಿಸರ್ಜನೆಮಾಡಿ. ಆಚಮನಮಾಡಿ, ಸಾಕ್ಷಿಗಳಾದ ದೇವತೆಗಳಲ್ಲಿ ವಿಜ್ಞಾಪಿಸಬೇಕು.

೨೯. ಮೋಹಿನೀ! ಸಕಲತೀರ್ಥಗಳಲ್ಲಿಯೂ ಇದೇರೀತಿಯಾಗಿ ಪಿಂಡಪ್ರದಾನಮಾಡಬೇಕು. ಗಯೆಯಲ್ಲಿ ಪಿಂಡದಾನಮಾಡಬೇಕಾದರೆ ಕಾಲವನ್ನು ಚಿಂತಿಸಬೇಕಾಗಿಲ್ಲ. ಎಂದರೆ ಗಯೆಯಲ್ಲಿ ಯಾವಾಗಲಾದರೂ ಪಿಂಡದಾನಮಾಡಬಹುದು-

೩೦. ಅಧಿಕಮಾಸ, ಜನ್ಮದಿನ, ಗುರು ಶುಕ್ರಾಸ್ತಗಳು ಮತ್ತು ಬೃಹಸ್ಪತಿಯು ಸಿಂಹರಾಶಿಯಲ್ಲಿರುವ ಸಮಯಗಳಲ್ಲಿ ಗಯಾಶ್ರಾದ್ಧವನ್ನು ಬಿಡಲೇಬಾರದು,

ದಂಡಂ ಪ್ರದರ್ಶಯೇದ್ಭಿಕ್ಷುರ್ಗಯಾಂ ಗತ್ವಾ ನ ಪಿಂಡಕಃ ।
ನ್ಯಸ್ಯ ವಿಷ್ಣುಪದೇ ದಂಡಂ ಮುಚ್ಯತೇ ಪಿತೃಭಿಃ ಸಹ ॥ ೩೧ ॥

ಪಾಯಸೇನ ಗಯಾಯಾಂ ಚ ಸಕ್ತುನಾ ಪಿಷ್ಟಕೇನ ವಾ ।
ಚರುಣಾ ತಂಡುಲಾದ್ಯೈರ್ವಾ ಪಿಂಡದಾನಂ ವಿಧೀಯತೇ ॥ ೩೨ ॥

ಗಯಾಂ ದೃಷ್ಟ್ವಾ ತು ಸುಭಗೇ ಮಹಾಪಾಪೋಽಪಿ ಪಾತಕೀ ।
ಪೂತಃ ಕೃತ್ಯಾಧಿಕಾರೀ ಚ ಶ್ರಾದ್ಧಕೃದ್ಬ್ರಹ್ಮಲೋಕಭಾಕ್ ॥ ೩೩ ॥

ಅಶ್ವಮೇಧಸಹಸ್ರಾಣಾಂ ಸಹಸ್ರಂ ಯಃ ಸಮಾಚರೇತ್ ।
ನಾಸೌ ತತ್ಫಲಮಾಪ್ನೋತಿ ಫಲ್ಗುತೀರ್ಥೇ ಯದಾಪ್ನುಯಾತ್ ॥ ೩೪ ॥

---

೩೧. ಸಂನ್ಯಾಸಿಯು ಗಯೆಗೆ ಹೋಗಿ ದಂಡವನ್ನು ಪ್ರದರ್ಶಿಸಬೇಕು. ಅವನು ಪಿಂಡಪ್ರದಾನವನ್ನು ಮಾಡಬೇಕಾದುದಿಲ್ಲ. ವಿಷ್ಣುಪಾದದಲ್ಲಿ ದಂಡವನ್ನು ಸ್ಥಾಪಿಸಿದರೆ ಅವನು ಪಿತೃಗಳ ಸಹಿತವಾಗಿ ಮುಕ್ತನಾಗುವನು.

೩೨. ಪಾಯಸ, ಸಕ್ತು, ಹಿಟ್ಟು, ಅನ್ನ, ಅಕ್ಕಿ ಮುಂತಾದುವು ಇವುಗಳಲ್ಲಿ ಯಾವುದರಿಂದಲಾದರೂ ಗಯೆಯಲ್ಲಿ ಪಿಂಡದಾನಮಾಡಬೇಕೆಂದು ವಿಧಿಸಲ್ಪಟ್ಟಿದೆ.

೩೩. ಮನೋಹರಳೇ! ಗಯೆಯು ದರ್ಶನಮಾಡಿದರೆ ಮಹಾಪಾಪ ಮಾಡಿದ ಪಾತಕಿಯಾದರೂ ಪರಿಶುದ್ಧನಾಗುವನು. ಪಿತೃಕರ್ಮಕ್ಕೆ ಅಧಿಕಾರಿಯಾದವನು ಅಲ್ಲಿ ಶ್ರಾದ್ಧಮಾಡಿದರೆ ಬ್ರಹ್ಮಲೋಕವನ್ನು ಹೊಂದುವನು.

೩೪. ಫಲ್ಗುತೀರ್ಥದಲ್ಲಿ ಸ್ನಾನಾದಿಗಳನ್ನು ಮಾಡುವುದರಿಂದ ಲಭಿಸುವಷ್ಟು ಫಲವು ಸಾವಿರಾರು ಅಶ್ವಮೇಧಗಳನ್ನು ಮಾಡಿದವನಿಗೂ ಸಹ ಬರುವುದಿಲ್ಲ.

ಗಯಾಂ ಪ್ರಾಪ್ಯಾರ್ಪಯೇತ್ಪಿಂಡಾನ್ ಪಿತೄಣಾಂ ಚಾತಿವಲ್ಲಭಾನ್ ।
ವಿಲಂಬೋ ನೈವ ಕರ್ತವ್ಯೋ ನೈವ ವಿಘ್ನಂ ಸಮಾಚರೇತ್ ॥ ೩೫ ॥

ಪಿತಾ ಪಿತಾಮಹಶ್ಚೈವ ತಥೈವ ಪ್ರಪಿತಾಮಹಃ ।
ಮಾತಾ ಪಿತಾಮಹೀ ಚೈವ ತಥೈವ ಪ್ರಪಿತಾಮಹೀ ॥ ೩೬ ॥

ಮಾತಾಮಹಸ್ತತ್ಪಿತಾ ಚ ಪ್ರಮಾತಾಮಹಕಾದಯಃ ।
ತೇಷಾಂ ಪಿಂಡೋ ಮಯಾ ದತ್ತೋ ಹ್ಯಕ್ಷಯ್ಯಮುಪತಿಷ್ಠತಾಂ ॥ ೩೭ ॥

ಅಸ್ಮತ್ಕುಲೇ ಮೃತಾ ಯೇ ಚ ಗತಿರ್ಯೇಷಾಂ ನ ವಿದ್ಯತೇ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಂ ॥ ೩೮ ॥

ಬಂಧುವರ್ಗಕುಲೇ ಯೇ ಚ ಗತಿರ್ಯೇಷಾಂ ನ ವಿದ್ಯತೇ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಂ ॥ ೩೯ ॥

---

೩೫. ಗಯೆಗೆ ಹೋಗಿ ಪಿತೃಗಳಿಗೆ ಅತ್ಯಂತ ಪ್ರಿಯವಾದ ಪಿಂಡದಾನವನ್ನು ಮಾಡಬೇಕು, ಸಾವಕಾಶಮಾಡಬಾರದು. ಅಲ್ಲಿ ಪಿಂಡದಾನಮಾಡುವವರಿಗೆ ವಿಘ್ನಮಾಡಬಾರದು.

೩೬-೩೭. ಗಯೆ ಮುಂತಾದ ತೀರ್ಥಗಳಲ್ಲಿ ಯಾರು ಯಾರಿಗೆ ಹೇಗೆ ಪಿಂಡದಾನಮಾಡಬೇಕೆಂಬುದನ್ನು ಮುಂದಿನ ಶ್ಲೋಕಗಳಲ್ಲಿ ವಿವರಿಸಿದೆ :—ಪಿತೃ, ಪಿತಾಮಹ, ಪ್ರಪಿತಾಮಹ, ಮಾತೃ, ಪಿತಾಮಹಿ, ಪ್ರಪಿತಾಮಹಿ, ಮಾತಾಮಹ, ಅವನತಂದೆ, ತಾತ ಮತ್ತು ಮಾತಾಮಹಾದಿಗಳ ಪತ್ನಿಯರು ಇವರುಗಳಿಗೆ ನಾನು ಪಿಂಡವನ್ನರ್ಪಿಸಿರುವೆನು. ಅದು ಅಕ್ಷಯವಾಗಲಿ!

೩೮. ನಮ್ಮವಂಶದಲ್ಲಿ ಮೃತರಾಗಿ ಗತಿಯನ್ನು ಹೊಂದದಿರುವವರನ್ನುದ್ಧರಿಸುವುದಕ್ಕೋಸ್ಕರ ಈ ಪಿಂಡವನ್ನರ್ಪಿಸುವೆನು. (ಎಂದು ಹೇಳಿ ಒಂದು ಪಿಂಡವನ್ನರ್ಪಿಸಬೇಕು. ಹೀಗೆಯೇ ಮುಂದಿನ ಶ್ಲೋಕಗಳಲ್ಲಿ ಹೇಳಿರುವ ಉದ್ದೇಶಗಳಿಂದಲೂ ಒಂದೊಂದು ಪಿಂಡವನ್ನು ಸಮರ್ಪಿಸಬೇಕು.)

೩೯. ನನ್ನ ಬಂಧುಗಳ ವಂಶದಲ್ಲಿ ಮೃತರಾಗಿ ಸದ್ಗತಿಯನ್ನು ಹೊಂದದಿರುವವರನ್ನುದ್ಧರಿಸುವುದಕ್ಕಾಗಿ ನಾನು ಈ ಪಿಂಡವನ್ನು ಕೊಡುವೆನು.

ಅಜಾತದಂತಾ ಯೇ ಕೇಚಿದ್ಯೇ ಚ ಗರ್ಭೇ ಪ್ರಪೀಡಿತಾಃ |
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಂ || ೪೦ ||

ಅಗ್ನಿದಗ್ಧಾಶ್ಚ ಯೇ ಕೇಚಿನ್ನಾಗ್ನಿದಗ್ಧಾಸ್ತಥಾ ಪರೇ |
ವಿದ್ಯುಚ್ಚೌರಹತಾ ಯೇ ಚ ತೇಭ್ಯಃ ಪಿಂಡಂ ದದಾಮ್ಯಹಂ || ೪೧ ||

ದಾವದಾಹೇ ಮೃತಾ ಯೇ ಚ ಸಿಂಹವ್ಯಾಘ್ರಹತಾಶ್ಚ ಯೇ |
ದಂಷ್ಟ್ರಿಭಿಃ ಶೃಂಗಿಭಿರ್ವಾಪಿ ತೇಭ್ಯಃ ಪಿಂಡಂ ದದಾಮ್ಯಹಂ || ೪೨ ||

ಉದ್ಬಂಧನಮೃತಾ ಯೇ ಚ ವಿಷಶಸ್ತ್ರಹತಾಶ್ಚ ಯೇ |
ಆತ್ಮನೋ ಘಾತಿನೋ ಯೇ ಚ ತೇಭ್ಯಃ ಪಿಂಡಂ ದದಾಮ್ಯಹಂ || ೪೩ ||

---

೪೦. ಹಲ್ಲುಹುಟ್ಟುವುದಕ್ಕೆ ಮುಂಚೆಯೇ ಮೃತರಾದವರು ಮತ್ತು ಗರ್ಭದಲ್ಲಿಯೇ ಸತ್ತವರನ್ನುದ್ಧರಿಸುವುದಕ್ಕೋಸ್ಕರ ನಾನು ಈ ಪಿಂಡವನ್ನು ಕೊಡುವೆನು.

೪೧. ಅಗ್ನಿದಗ್ಧರು, ಅಗ್ನಿದಗ್ಧರಲ್ಲದವರು, ಸಿಡಿಲು, ಕಳ್ಳರಿಂದ ಮೃತರಾದವರು ಇವರಿಗಾಗಿ ಪಿಂಡವನ್ನು ಕೊಡುವೆನು.

೪೨. ಕಾಡುಗಿಚ್ಚಿನಿಂದ ದಹಿಸಲ್ಪಟ್ಟು ಮೃತರಾದವರು, ಸಿಂಹವ್ಯಾಘ್ರಗಳಿಂದ ಹತರಾದವರು ಮತ್ತು ಕೋರೆಹಲ್ಲುಳ್ಳ ಹಂದಿ ಮುಂತಾದುವುಗಳಿಂದ, ಕೊಂಬುಳ್ಳ ಪ್ರಾಣಿಗಳಿಂದಲೂ ಸಹ ಕೊಲ್ಲಲ್ಪಟ್ಟವರುಗಳಿಗಾಗಿ ಪಿಂಡದಾನ ಮಾಡುವೆನು.

೪೩. ಗಲ್ಲಿಗೇರಿಸಲ್ಪಟ್ಟು ಸತ್ತವರು, ವಿಷ ಮತ್ತು ಶಸ್ತ್ರಗಳಿಂದ ಮೃತರು, ಆತ್ಮಹತ್ಯೆಮಾಡಿಕೊಂಡವರು ಇವರಿಗೆ ಸದ್ಗತಿಯುಂಟಾಗುವುದಕ್ಕಾಗಿ ಪಿಂಡವನ್ನು ಕೊಡುವೆನು.

ಅರಣ್ಯೇ ವರ್ತ್ಮನಿ ವನೇ ಕ್ಷುಧಯಾ ತೃಷಯಾ ಹತಾಃ ।
ಭೂತಪ್ರೇತಪಿಶಾಚೈಶ್ಚ ತೇಭ್ಯಃ ಪಿಂಡಂ ದದಾಮ್ಯಹಂ ॥ ೪೪ ॥

ರೌರವೇ ಯೇ ಚ ತಾಮಿಸ್ರೇ ಕಾಲಸೂತ್ರೇ ಚ ಯೇ ಸ್ಥಿತಾಃ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಂ ॥ ೪೫ ॥

ಅನೇಕಯಾತನಾಸಂಸ್ಥಾಃ ಪ್ರೇತಲೋಕಂ ಚ ಯೇ ಗತಾಃ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಂ ॥ ೪೬ ॥

ದುರ್ಗತಿಂ ಸಮನುಪ್ರಾಪ್ಯ ಅಭಿಶಾಪಾದಿನಾ ಹತಾಃ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಂ ॥ ೪೭ ॥

ನರಕೇಷು ಸಮಸ್ತೇಷು ಯಮದೂತವಶಂ ಗತಾಃ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಂ ॥ ೪೮ ॥

---

೪೪. ಅರಣ್ಯ ಅಥವಾ ಮಾರ್ಗಗಳಲ್ಲಿ ಹಸಿವು ಬಾಯಾರಿಕೆಗಳಿಂದ ಹತರಾದವರು ಮತ್ತು ಭೂತ, ಪ್ರೇತ, ಪಿಶಾಚಗಳಿಂದ ಕೊಲ್ಲಲ್ಪಟ್ಟವರ ಸಲುವಾಗಿ ಪಿಂಡವನ್ನು ಕೊಡುವೆನು.

೪೫. ರೌರವ, ತಾಮಿಸ್ರ ಮತ್ತು ಕಾಲಸೂತ್ರ ಎಂಬ ನರಕಗಳಲ್ಲಿದ್ದವರನ್ನು ಉದ್ಧರಿಸುವುದಕ್ಕಾಗಿ ಈ ಪಿಂಡವನ್ನು ಕೊಡುವೆನು.

೪೬. ಅನೇಕನರಕಗಳಲ್ಲಿರುವವರು ಮತ್ತು ಪ್ರೇತಲೋಕಕ್ಕೆ ಹೋಗಿರುವ ಪಿತೃಗಳ ಉದ್ಧಾರಕ್ಕಾಗಿ ಈ ಪಿಂಡವನ್ನು ಕೊಡುವೆನು.

೪೭. ಶಾಪಾದಿಗಳಿಂದ ಹತರಾಗಿ ದುರ್ಗತಿಹೊಂದಿದ ಪಿತೃಗಳನ್ನುದ್ಧರಿಸುವುದಕ್ಕಾಗಿ ಈ ಪಿಂಡವನ್ನು ಕೊಡುವೆನು.

೪೮. ಸಕಲನರಕಗಳಲ್ಲಿಯೂ ಯಮದೂತರ ವಶದಲ್ಲಿರುವವರ ಉದ್ಧಾರಕ್ಕಾಗಿ ಈ ಪಿಂಡವನ್ನು ಕೊಡುವೆನು.

ಪಶುಯೋನಿಗತಾ ಯೇ ಚ ಪಕ್ಷಿಕೀಟಸರೀಸೃಪಾಃ ।
ಅಥವಾ ವೃಕ್ಷಯೋನಿಸ್ಥಾಸ್ತೇಭ್ಯಃ ಪಿಂಡಂ ದದಾಮ್ಯಹಂ ॥ ೪೯ ॥

ಜಾತ್ಯಂತರಸಹಸ್ರೇಷು ಯೇ ಭ್ರಮಂತಿ ಸ್ವಕರ್ಮಣಾ ।
ಮಾನುಷಂ ದುರ್ಲಭಂ ಯೇಷಾಂ ತೇಭ್ಯಃ ಪಿಂಡಂ ದದಾಮ್ಯಹಂ॥ ೫೦ ॥

ದಿವ್ಯಂತರಿಕ್ಷಭೂಮಿಷ್ಠಾಃ ಪಿತರೋ ಬಾಂಧವಾದಯಃ ।
ಅಸಂಸ್ಕೃತಮೃತಾ ಯೇ ಚ ತೇಭ್ಯಃ ಪಿಂಡಂ ದದಾಮ್ಯಹಂ ॥ ೫೧ ॥

ಯೇ ಕೇಚಿತ್ ಪ್ರೇತರೂಪೇಣ ವರ್ತಂತೇ ಪಿತರೋ ಮಮ ।
ತೇ ಸರ್ವೇ ತೃಪ್ತಿಮಾಯಾಂತು ಪಿಂಡೇನಾನೇನ ಸರ್ವದಾ ॥ ೫೨ ॥

ಯೇ ಬಾಂಧವಾ ಬಾಂಧವಾ ವಾ ಯೇಽನ್ಯಜನ್ಮನಿ ಬಾಂಧವಾಃ ।
ತೇಷಾಂ ಪಿಂಡೋ ಮಯಾ ದತ್ತೋ ಹ್ಯಕ್ಷಯ್ಯಮುಪತಿಷ್ಠತಾಂ ॥ ೫೩ ॥

---

೪೯. ಪಶುಜನ್ಮವನ್ನು ಹೊಂದಿರುವವರು, ಪಕ್ಷಿ, ಕೀಟ ಮತ್ತು ಸರ್ಪಗಳಾಗಿ ಹುಟ್ಟಿರುವವರು ಅಥವಾ ವೃಕ್ಷಗಳಾಗಿರುವವರು ಅಂತಹವರ ಉದ್ಧಾರಕ್ಕೋಸ್ಕರ ಪಿಂಡಪ್ರದಾನ ಮಾಡುವೆನು.

೫೦. ಮನುಷ್ಯಜನ್ಮವೇ ದುರ್ಲಭವಾಗಿ ತಮ್ಮ ಕರ್ಮದಿಂದ ಸಾವಿರಾರು ಬೇರೆಜಾತಿಗಳಲ್ಲಿ ಹುಟ್ಟಿ ನರಳುತ್ತಿರುವವರಿಗೆ ಸದ್ಗತಿಯನ್ನು ದೊರಕಿಸಲು ಪಿಂಡವನ್ನು ಕೊಡುವೆನು.

೫೧. ಸ್ವರ್ಗ. ಅಂತರಿಕ್ಷ ಮತ್ತು ಭೂಲೋಕಗಳಲ್ಲಿರುವ ಪಿತೃಗಳ ಮತ್ತು ಸಂಸ್ಕಾರವಿಲ್ಲದೆ ಮೃತರಾದ ಬಂಧುಗಳಿಗಾಗಿ ಪಿಂಡವನ್ನು ಕೊಡುವೆನು.

೫೨. ಪ್ರೇತಜನ್ಮದಲ್ಲಿರುವ ನನ್ನ ಪಿತೃಗಳೆಲ್ಲರೂ ನಾನು ಮಾಡಿದ ಈ ಪಿಂಡಪ್ರದಾನದಿಂದ ಯಾವಾಗಲೂ ತೃಪ್ತಿಯನ್ನು ಹೊಂದಲಿ!

೫೩. ಬಂಧುಗಳು ಬಂಧುಬಂಧುಗಳು ಮತ್ತು ಜನ್ಮಾಂತರದಲ್ಲಿ ಬಂಧುಗಳಾಗಿದ್ದವರು ಅವರಿಗೆಲ್ಲಾ ಸದ್ಗತಿಯಾಗಲು ಈ ಪಿಂಡವನ್ನು ಕೊಟ್ಟಿರುವೆನು. ಇದು ಅಕ್ಷಯವಾಗಲಿ!

**ಪಿತೃವಂಶೇ ಮೃತಾ ಯೇ ಚ ಮಾತೃವಂಶೇ ಚ ಯೇ ಮೃತಾಃ ।**
**ಗುರುಶ್ವಶುರಬಂಧೂನಾಂ ಯೇ ಚಾನ್ಯೇ ಬಾಂಧವಾ ಮೃತಾಃ ॥ ೫೪ ॥**

**ಯೇ ಮೇ ಕುಲೇ ಲುಪ್ತಪಿಂಡಾಃ ಪುತ್ರದಾರವಿವರ್ಜಿತಾಃ ।**
**ಕ್ರಿಯಾಲೋಪಗತಾ ಯೇ ಚ ಜಾತ್ಯಂಧಾಃ ಪಂಗವಶ್ಚ ಯೇ ॥ ೫೫ ॥**

**ವಿರೂಪಾ ಆಮಗರ್ಭಾಶ್ಚ ಜ್ಞಾತಾಜ್ಞಾತಾ ಕುಲೇ ಮಮ ।**
**ತೇಷಾಂ ಪಿಂಡೋ ಮಯಾ ದತ್ತೋ ಹ್ಯಕ್ಷಯ್ಯಮುಪತಿಷ್ಠತಾಂ ॥ ೫೬ ॥**

**ಆಬ್ರಹ್ಮಣೋ ಯೇ ಪಿತೃವಂಶಜಾತಾ**
**ಮಾತುಸ್ತಥಾ ವಂಶಭವಾ ಮದೀಯಾಃ ।**
**ಕುಲದ್ವಯೇ ಯೇ ಮಮ ಸಂಗತಾಶ್ಚ**
**ತೇಭ್ಯಃ ಸ್ವಧಾ ಪಿಂಡಮಹಂ ದದಾಮಿ ॥ ೫೭ ॥**

**ಸಾಕ್ಷಿಣಃ ಸಂತು ಮೇ ದೇವಾ ಬ್ರಹ್ಮೇಶಾನಾದಯಸ್ತಥಾ ।**
**ಮಯಾ ಗಯಾಂ ಸಮಾಸಾದ್ಯ ಪಿತೄಣಾಂ ನಿಷ್ಕೃತಿಃ ಕೃತಾ ॥ ೫೮ ॥**

---

೫೪-೫೬. ತಂದೆಯ ಕುಲದಲ್ಲಿ ಮೃತರಾದವರು, ತಾಯಿಯ ವಂಶದಲ್ಲಿ ಸತ್ತಿರುವವರು, ಗುರು, ಶ್ವಶುರ, ಬಂಧು ಇನ್ನೂ ಇತರ ಮೃತಬಂಧುಗಳು, ನನ್ನ ವಂಶದಲ್ಲಿ ಮಕ್ಕಳು ಹೆಂಡತಿಯರಿಲ್ಲದೆ ಶ್ರಾದ್ಧಲೋಪವನ್ನು ಹೊಂದಿರುವವರು, ಕ್ರಿಯಾಲೋಪವನ್ನು ಹೊಂದಿರುವವರು, ಜಾತ್ಯಂಧರು, ಕುಂಟರು, ವಿರೂಪರು, ಆಮಗರ್ಭರು ಮತ್ತು ತಿಳಿದ ತಿಳಿಯದಿರುವ ನನ್ನವಂಶದವರೆಲ್ಲರಿಗೂ ಪಿಂಡಪ್ರದಾನ ಮಾಡಿರುವೆನು. ಇದು ಅಕ್ಷಯವಾಗಲಿ !

೫೭. ಬ್ರಹ್ಮನವರೆಗೆ ಪಿತೃವಂಶದಲ್ಲಿ ಜನಿಸಿದವರು, ಹಾಗೆಯೇ ಮಾತೃವಂಶದಲ್ಲಿ ಹುಟ್ಟಿದ ನಮ್ಮವರು ಮತ್ತು ಉಭಯಕುಲಗಳಲ್ಲಿಯೂ ನನಗೆ ಸಂಬಂಧಿಗಳಾಗಿರುವವರಿಗೆ ಸ್ವಧಾಕಾರದಿಂದ ಪಿಂಡವನ್ನು ಕೊಡುವೆನು.

೫೮. ಬ್ರಹ್ಮ, ರುದ್ರಮುಂತಾದ ದೇವತೆಗಳು ನನಗೆ ಸಾಕ್ಷಿಗಳಾಗಿರಲಿ, ನಾನು ಗಯೆಗೆ ಬಂದು ಪಿತೃಗಳಿಗೆ ಉದ್ಧಾರವಾಗುವ ಕರ್ಮಮಾಡಿರುವೆನು.

ಆಗತೋಽಸ್ಮಿ ಗಯಾಂ ದೇವ ಪಿತೃಕಾರ್ಯೇ ಗದಾಧರ ।
ತ್ವಮೇವ ಸಾಕ್ಷೀ ಭಗವಾನನೃಣೋಽಹಮೃಣತ್ರಯಾತ್ ॥ ೫೯ ॥

ಅಪರೇಽಹ್ನಿ ಶುಚಿರ್ಭೂತ್ವಾ ಗಚ್ಛೇತ್ತು ಪ್ರೇತಪೂರ್ವಕಂ ।
ಬ್ರಹ್ಮಕುಂಡೇ ತತಃ ಸ್ನಾತ್ವಾ ದೇವಾದೀಂಸ್ತರ್ಪಯೇತ್ಸುಧೀಃ ॥ ೬೦ ॥

ಕೃತ್ವಾಹ್ವಾನಂ ಪಿತೄಣಾಂ ತು ಪ್ರಯತಃ ಪ್ರೇತಪರ್ವತೇ ।
ಪೂರ್ವವಚ್ಚೈವ ಸಂಕಲ್ಪ್ಯ ತತಃ ಪಿಂಡಾನ್ ಪ್ರದಾಪಯೇತ್ ॥ ೬೧ ॥

ಸ್ವಮಂತ್ರೈರಥ ಸಂಪೂಜ್ಯ ಪರಮಾಃ ಪಿತೃದೇವತಾಃ ।
ಯಾವಂತಸ್ತು ತಿಲಾಃ ಪುಂಭಿರ್ಗೃಹೀತಾಃ ಪಿತೃಕರ್ಮಣಿ ॥ ೬೨ ॥

ಗಚ್ಛಂತಿ ಭೀತಾ ಅಸುರಾಸ್ತಾವಂತೋ ಗರುಡಾಹಿವತ್ ।
ಪೂರ್ವವತ್ಸಕಲಂ ಕರ್ಮ ಕುರ್ಯಾತ್ತತ್ರಾಪಿ ಮೋಹಿನಿ ॥ ೬೩ ॥

---

೫೯. ಗದಾಧರದೇವನೇ! ಪಿತೃಕಾರ್ಯಕ್ಕಾಗಿ ಗಯೆಗೆ ಬಂದಿರುವೆನು. ಭಗವಂತನಾದ ನೀನೇ ಸಾಕ್ಷಿಯು! ನಾನು ಮೂರು ಋಣಗಳನ್ನು ಪರಿಹರಿಸಿ ಕೊಂಡಿರುವೆನು.

೬೦. ಶುಚಿಯಾಗಿ ಅಪರಾಹ್ಣದಲ್ಲಿ ಪ್ರೇತಪರ್ವತಕ್ಕೆ ಹೋಗಬೇಕು. ಬಳಿಕ ಅಲ್ಲಿ ಬ್ರಹ್ಮಕುಂಡದಲ್ಲಿ ಸ್ನಾನಮಾಡಿ ಜ್ಞಾನಿಯು ದೇವಾದಿಗಳಿಗೆ ತರ್ಪಣಮಾಡಬೇಕು.

೬೧. ಪ್ರೇತಪರ್ವತದಲ್ಲಿ ನಿಯಮದಿಂದ ಪಿತೃಗಳನ್ನು ಆಹ್ವಾನಿಸಿ ಹಿಂದಿನಂತೆಯೇ ಸಂಕಲ್ಪಮಾಡಿ ಪಿಂಡಪ್ರದಾನಮಾಡಬೇಕು.

೬೨-೬೩. ಉತ್ತಮರಾದ ಪಿತೃದೇವತೆಗಳನ್ನು ಅವರವರ ಮಂತ್ರಗಳಿಂದ ಪೂಜಿಸಬೇಕು. ಪಿತೃಕರ್ಮದಲ್ಲಿ ಮನುಷ್ಯರು ಎಷ್ಟು ಎಳ್ಳನ್ನು ವಿನಿಯೋಗಿಸುವರೊ ಅಷ್ಟು ಜನ ಅಸುರರು ಆದರಿಂದ ಭಯಪಟ್ಟು, ಗರುಡನನ್ನು ನೋಡಿ ಸರ್ಪವು ಓಡಿಹೋಗುವಂತೆ ಓಡಿಹೋಗುವರು. ಮೋಹಿನಿಯೇ! ಅಲ್ಲಿಯೂ ಸಹ ಹಿಂದೆಮಾಡಿದಂತೆ ಸಕಲ ಕರ್ಮವನ್ನೂ ಮಾಡಬೇಕು.

ತಿಲಮಿಶ್ರಾಂಸ್ತಥಾ ಸಕ್ತೂನ್ನಿಕ್ಷಿಪೇತ್ಪ್ರೇತಪರ್ವತೇ ।
ಯೇ ಕೇಚಿತ್ ಪ್ರೇತರೂಪೇಣ ವರ್ತಂತೇ ಪಿತರೋ ಮಮ || ೬೪ ||

ತೇ ಸರ್ವೇ ತೃಪ್ತಿಮಾಯಾಂತು ಸಕ್ತುಭಿಸ್ತಿಲಮಿಶ್ರಿತೈಃ ।
ಆಬ್ರಹ್ಮಸ್ತಂಬಪರ್ಯಂತಂ ಯತ್ಕಿಂಚಿತ್ಸಚರಾಚರಂ || ೬೫ ||

ಮಯಾ ದತ್ತೇನ ಪಿಂಡೇನ ತೃಪ್ತಿಮಾಯಾಂತು ಸರ್ವಶಃ ।
ಆದೌ ತು ಪಂಚತೀರ್ಥೇಷು ಚೋತ್ತರೇ ಮಾನಸೇ ವಿಧಿಃ || ೬೬ ||

ಆಚಮ್ಯ ಕುಶಹಸ್ತೇನ ಶಿರಶ್ಚಾಭ್ಯುಕ್ಷ್ಯ ವಾರಿಣಾ ।
ಉತ್ತರಂ ಮಾನಸಂ ಗತ್ವಾ ಮಂತ್ರೇಣ ಸ್ನಾನಮಾಚರೇತ್ || ೬೭ ||

ಉತ್ತರೇ ಮಾನಸೇ ಸ್ನಾನಂ ಕರೋಮ್ಯಾತ್ಮವಿಶುದ್ಧಯೇ ।
ಸೂರ್ಯಲೋಕಾದಿಸಂಪ್ರಾಪ್ತಿಸಿದ್ಧಯೇ ಪಿತೃಮುಕ್ತಯೇ || ೬೮ ||

---

೬೪-೬೫. ಪ್ರೇತಪರ್ವತದಲ್ಲಿ ಪ್ರೇತರೂಪದಿಂದ ವಾಸಿಸುತ್ತಿರುವ ನನ್ನ ಪಿತೃಗಳೆಲ್ಲರೂ ಎಳ್ಳುಸಹಿತವಾದ ಸಕ್ತುಗಳಿಂದ ತೃಪ್ತಿಹೊಂದಲಿ. ಎಂದು ಹೇಳಿ ತಿಲಮಿಶ್ರವಾದ ಸಕ್ತುಗಳನ್ನು ಅಲ್ಲಿ ಹಾಕಬೇಕು.

೬೫-೬೬. ಚತುರ್ಮುಖನನ್ನು ಮೊದಲು ಮಾಡಿಕೊಂಡು ತೃಣಜೀವ ಪರ್ಯಂತವಾದ ಚರಾಚರ ಜಂತುಗಳೆಲ್ಲವೂ ನಾನು ಕೊಟ್ಟಿರುವ ಪಿಂಡದಿಂದ ತೃಪ್ತಿಯನ್ನು ಹೊಂದಲಿ !

೬೬. ಆದಿಯಲ್ಲಿ ಪಂಚತೀರ್ಥಗಳು ಮತ್ತು ಉತ್ತರ ಮಾನಸಗಳಲ್ಲಿ ವಿಧಾನವನ್ನಾಚರಿಸಬೇಕು.

೬೭. ದರ್ಭಪಾಣಿಯಾಗಿ ಆಚಮನೆ ಮಾಡಿ, ನೀರಿನಿಂದ ತಲೆಯನ್ನು ಪ್ರೋಕ್ಷಿಸಿಕೊಂಡು ಉತ್ತರ ಮಾನಸಕ್ಕೆ ಹೋಗಿ ಮಂತ್ರಪೂರ್ವಕವಾಗಿ ಸ್ನಾನ ಮಾಡಬೇಕು.

೬೮. ಆತ್ಮವಿಶುದ್ಧಿ, ಸೂರ್ಯಲೋಕಾದಿಪ್ರಾಪ್ತಿ ಮತ್ತು ಪಿತೃಗಳಿಗೆ ಮುಕ್ತಿ ಇವುಗಳು ಸಿದ್ಧಿಸುವುದಕ್ಕಾಗಿ ಉತ್ತರಮಾನಸದಲ್ಲಿ ಸ್ನಾನಮಾಡುವೆನು.

**ಸ್ನಾತ್ವಾಥ ತರ್ಪಣಂ ಕುರ್ಯಾದ್ದೇವಾದೀನಾಂ ಯಥಾವಿಧಿ ।**
**ಆಬ್ರಹ್ಮಸ್ತಂಬಪರ್ಯಂತಂ ದೇವರ್ಷಿಪಿತೃಮಾನವಾಃ ॥ ೬೯ ॥**

**ತೃಪ್ಯಂತು ಪಿತರಃ ಸರ್ವೇ ಮಾತೃಮಾತಾಮಹಾದಯಃ ।**
**ಶ್ರಾದ್ಧಂ ಸಪಿಂಡಕಂ ಕುರ್ಯಾತ್ಸ್ವಸೂತ್ರೋಕ್ತವಿಧಾನತಃ ॥ ೭೦ ॥**

**ಅಷ್ಟಕಾಸು ಚ ವೃದ್ಧೌ ಚ ಗಯಾಯಾಂ ಚ ಕ್ಷಯೇಹನಿ ।**
**ಮಾತುಃ ಶ್ರಾದ್ಧಂ ಪೃಥಕ್ಕುರ್ಯಾದನ್ಯತ್ರ ಸ್ವಾಮಿನಾ ಸಹ ॥ ೭೧ ॥**

**ಓಂ ನಮೋಸ್ತು ಭಾನವೇ ಭರ್ತ್ರೇ ಸೋಮಭೌಮಜ್ಞರೂಪಿಣೇ ।**
**ಜೀವಭಾರ್ಗವಶನ್ಯೈಶ್ಚರರಾಹುಕೇತುಸ್ವರೂಪಿಣೇ ॥ ೭೨ ॥**

**ಸೂರ್ಯಂ ನತ್ವಾರ್ಚಯಿತ್ವಾ ಚ ಸೂರ್ಯಲೋಕಂ ನಯೇತ್ಪಿತೄನ್ ।**
**ಮಾನಸಂ ಹಿ ಸರೋ ಹ್ಯತ್ರ ತಸ್ಮಾದುತ್ತರಮಾನಸಂ ॥ ೭೩ ॥**

---

೬೯-೭೦. ಸ್ನಾನ ಮಾಡಿದಮೇಲೆ ದೇವಾದಿಗಳಿಗೆ ವಿಧಿವತ್ತಾಗಿ ತರ್ಪಣ ಕೊಡಬೇಕು. ಅನಂತರ ಬ್ರಹ್ಮನಿಂದ ತೃಣಜೀವದ ವರೆಗಿನ ದೇವ, ಋಷಿ, ಮನುಷ್ಯರೂ, ಮಾತೃ, ಮಾತಾಮಹಾದಿ ಸಕಲಪಿತೃಗಳೂ ಸಹ ಇದರಿಂದ ತೃಪ್ತರಾಗಲೆಂದು ಪ್ರಾರ್ಥಿಸಬೇಕು.

೭೦. ಶ್ರಾದ್ಧಕರ್ತನು ತನ್ನ ಶಾಖೆಗೆ ವಿಹಿತಕ್ರಮದಿಂದ ಪಿಂಡಪ್ರದಾನ ಸಹಿತವಾಗಿ ಶ್ರಾದ್ಧವನ್ನು ಮಾಡಬೇಕು.

೭೧. ಅಷ್ಟಕಾ ತಿಥಿಗಳು, ವೃದ್ಧಿ ಮತ್ತು ಕ್ಷಯ ತಿಥಿ (ಅಮಾವಾಸ್ಯೆ) ಗಳಲ್ಲಿ ಗಯಾತೀರ್ಥದಲ್ಲಿ ತಾಯಿಯ ಶ್ರಾದ್ಧವನ್ನು ಪ್ರತ್ಯೇಕವಾಗಿ ಮಾಡಬೇಕು ಇತರದಿನಗಳಲ್ಲಿ ಪತಿಯೊಡನೆ ಮಾಡಬೇಕು.

೭೨. ಚಂದ್ರ, ಕುಜ, ಬುದ, ಗುರು, ಶುಕ್ರ, ಶನೈಶ್ಚರ, ರಾಹು, ಕೇತು ಸ್ವರೂಪನಾದ ಭರಣಕರ್ತನೇ ! ಸೂರ್ಯನೇ ! ನಿನಗೆ ನಮಸ್ಕಾರ !

೭೩. ಹೀಗೆ ಸೂರ್ಯನನ್ನು ನಮಸ್ಕರಿಸಿ ಪೂಜಿಸಿದರೆ ಪಿತೃಗಳನ್ನು ಅವನು ಸೂರ್ಯಲೋಕಕ್ಕೆ ಒಯ್ಯುವನು. ಇಲ್ಲಿ ಮಾನಸ ಸರೋವರವಿದೆ. ಅಲ್ಲಿಂದ ಮುಂದಕ್ಕೆ ಉತ್ತರಮಾನಸವಿದೆ.

ಉತ್ತರಾತ್ ಮಾನಸಾತ್ ಮೌನೀ ವ್ರಜೇದ್ದಕ್ಷಿಣಮಾನಸಂ ।
ಉದೀಚೀತೀರ್ಥಮಿತ್ಯುಕ್ತಂ ತತೋಽದೀಚ್ಯಾಂ ವಿಮುಕ್ತಿದಂ ॥ ೭೪ ॥

ಉದೀಚ್ಯಾಂ ಮುಂಡಪೃಷ್ಠಸ್ಯ ದೇವರ್ಷಿಪಿತೃತರ್ಪಣಂ ।
ಮಧ್ಯೇ ಕನಖಲಂ ತೀರ್ಥಂ ಪಿತ್ರ್ಯಾಣಾಂ ಗತಿದಾಯಕಂ ॥ ೭೫ ॥

ಸ್ನಾತಃ ಕನಕವದ್ಭಾತಿ ನರೋ ಯಾತಿ ಪವಿತ್ರತಾಂ ।
ಅತಃ ಕನಖಲಂ ಲೋಕೇ ಖ್ಯಾತಂ ತೀರ್ಥಮನುತ್ತಮಂ ॥ ೭೬ ॥

ತಸ್ಮಾದ್ದಕ್ಷಿಣಭಾಗೇ ತು ತೀರ್ಥಂ ದಕ್ಷಿಣಮಾನಸಂ ।
ದಕ್ಷಿಣೇ ಮಾನಸೇ ಚೈವಂ ತೀರ್ಥತ್ರಯಮುದಾಹೃತಂ ॥ ೭೭ ॥

ಸ್ನಾತ್ವಾ ತೇಷು ವಿಧಾನೇನ ಕುರ್ಯಾಚ್ಛ್ರಾದ್ಧಂ ಪೃಥಕ್ ಪೃಥಕ್ ।
ದಿವಾಕರ ಕರೋಮೀಹ ಸ್ನಾನಂ ದಕ್ಷಿಣಮಾನಸೇ ॥ ೭೮ ॥

---

೭೪. ಮೌನಿಯು ಕ್ರಮವಾಗಿ ಉತ್ತರ ಮಾನಸದಿಂದ ದಕ್ಷಿಣ ಮಾನಸಕ್ಕೂ ಅನಂತರ ಉತ್ತರದಲ್ಲಿ ಮೋಕ್ಷದಾಯಕವಾದ ಉದೀಚೀ ತೀರ್ಥಕ್ಕೂ ಹೋಗಬೇಕು.

೭೫. ಮುಂಡಪೃಷ್ಠದ ಉದೀಚೀ ತೀರ್ಥದಲ್ಲಿ ದೇವ ಋಷಿ ಪಿತೃಗಳ ತರ್ಪಣ ಮಾಡಬೇಕು. ಮಧ್ಯದಲ್ಲಿ ಪಿತೃಗಳಿಗೆ ಗತಿದಾಯಕವಾದ ಕನಖಲ ತೀರ್ಥವಿದೆ.

೭೬. ಅಲ್ಲಿ ಸ್ನಾನಮಾಡಿದ ಮನುಷ್ಯನು ಬಂಗಾರದಂತೆ ಹೊಳೆಯುವನು. ಮತ್ತು ಪರಿಶುದ್ಧನಾಗುವನಾದಕಾರಣ ಆ ತೀರ್ಥವು ಲೋಕದಲ್ಲಿ ಸರ್ವೋತ್ಕೃಷ್ಟವಾದ ಕನಖಲತೀರ್ಥವೆಂದು ವಿಖ್ಯಾತವಾಗಿದೆ.

೭೭. ಅದರ ದಕ್ಷಿಣಭಾಗದಲ್ಲಿ ದಕ್ಷಿಣ ಮಾನಸತೀರ್ಥವಿದೆ. ಹೀಗೆ ದಕ್ಷಿಣಮಾನಸದಲ್ಲಿ ಮೂರು ತೀರ್ಥಗಳಿವೆಯೆಂದು ಉಕ್ತವಾಗಿದೆ.

೭೮-೭೯. ಆ ಮೂರರಲ್ಲಿಯೂ ವಿಹಿತಕ್ರಮದಿಂದ ಸ್ನಾನಮಾಡಿ ಒಂದೊಂದರಲ್ಲಿಯೂ ಪೃಥಕ್ಕಾಗಿ ಶ್ರಾದ್ಧಮಾಡಬೇಕು. ಸೂರ್ಯದೇವನೇ!

ಬ್ರಹ್ಮಹತ್ಯಾದಿಪಾಪೌಘಘಾತನಾಯ ವಿಮುಕ್ತಯೇ ।
ಅನೇನ ಸ್ನಾನಪೂಜಾದಿ ಕುರ್ಯಾಚ್ಛ್ರಾದ್ಧಂ ಸಪಿಂಡಕಂ ॥ ೭೯ ॥
ನಮಾಮಿ ಸೂರ್ಯಂ ತೃಪ್ತ್ಯರ್ಥಂ ಪಿತೄಣಾಂ ತಾರಣಾಯ ಚ ।
ಪುತ್ರಪೌತ್ರಧನೈಶ್ವರ್ಯ ಆಯುರಾರೋಗ್ಯವೃದ್ಧಯೇ ॥ ೮೦ ॥
ದೃಷ್ಟ್ವಾ ಸಂಪೂಜ್ಯ ಮೌನಾರ್ಕಮಿಮಂ ಮಂತ್ರಮುದೀರಯೇತ್ ।
ಕವ್ಯವಾಡಾದಯೋ ಯೇ ಚ ಪಿತೄಣಾಂ ದೇವತಾಸ್ತಥಾ ॥ ೮೧ ॥
ಮದೀಯೈಃ ಪಿತೃಭಿಃ ಸಾರ್ಧಂ ತರ್ಪಿತಾಃ ಸ್ಥ ಸ್ವಧಾಭುಜಃ ।
ಫಲ್ಗುತೀರ್ಥಂ ವ್ರಜೇತ್ತಸ್ಮಾತ್ ಸರ್ವತೀರ್ಥೋತ್ತಮೋತ್ತಮಂ ॥ ೮೨ ॥
ಮುಕ್ತಿರ್ಭವತಿ ಕರ್ತೄಣಾಂ ಪಿತೄಣಾಂ ಶ್ರಾದ್ಧತಃ ಸದಾ ।
ಬ್ರಹ್ಮಣಾ ಪ್ರಾರ್ಥಿತೋ ವಿಷ್ಣುಃ ಫಲ್ಗುಕೋ ಹ್ಯಭವತ್ಪುರಾ ॥ ೮೩ ॥

---

ಬ್ರಹ್ಮಹತ್ಯೆ ಮುಂತಾದ ಪಾಪರಾಶಿಗಳನ್ನು ನಾಶಪಡಿಸಿಕೊಂಡು ಮುಕ್ತಿಯನ್ನು ಪಡೆಯುವುದಕ್ಕಾಗಿ ಈ ದಕ್ಷಿಣಮಾನಸದಲ್ಲಿ ಸ್ನಾನಮಾಡುವೆನು ಎಂದು ಹೇಳಿ ಸ್ನಾನ, ಪೂಜೆ, ಪಾರ್ವಣ ಶ್ರಾದ್ಧ ಮುಂತಾದುವನ್ನು ಮಾಡಬೇಕು

೮೦. ಪಿತೃಗಳತೃಪ್ತಿ, ನರಕಾದಿಗಳಿಂದ ಉದ್ಧಾರ, ಪುತ್ರ, ಪೌತ್ರ, ಧನ, ಐಶ್ವರ್ಯ ಆಯುಸ್ಸು ಮತ್ತು ಆರೋಗ್ಯಗಳ ಅಭಿವೃದ್ಧಿ ಇವುಗಳಿಗಾಗಿ ಸೂರ್ಯನನ್ನು ನಮಸ್ಕರಿಸುವೆನು !

೮೧-೮೨. ಮೌನದಿಂದ ಸೂರ್ಯನನ್ನು ನೋಡಿ ಪೂಜಿಸಿ ಕವ್ಯವಾಟ್ ಮುಂತಾದ ಪಿತೃದೇವತೆಗಳು ನಮ್ಮ ಪಿತೃಗಳ ಸಹಿತವಾಗಿ ಈಸ್ವಧಾ (ಪಿತೃಗಳಿಗಾಗಿ ಕೊಟ್ಟ ಅನ್ನ) ದ್ರವ್ಯವನ್ನು ಭೋಜನಮಾಡಿ ತೃಪ್ತರಾಗಲಿ ಎಂಬುದಾಗಿ ಹೇಳಬೇಕು.

೮೨. ಅಲ್ಲಿಂದ ಮುಂದೆ ಉತ್ತಮವಾದ ಸಕಲ ತೀರ್ಥಗಳಿಗಿಂತಲೂ ಶ್ರೇಷ್ಠವಾದ ಫಲ್ಗುತೀರ್ಥಕ್ಕೆ ಹೋಗಬೇಕು.

೮೩. ಅಲ್ಲಿ ಶ್ರಾದ್ಧಮಾಡುವುದರಿಂದ ಶ್ರಾದ್ಧಕರ್ತ ಮತ್ತು ಪಿತೃಗಳಿಗೂ ಸಹ ಮುಕ್ತಿಯಾಗುವುದು. ಪೂರ್ವದಲ್ಲಿ ವಿಷ್ಣುವು ಬ್ರಹ್ಮನಿಂದ ಪ್ರಾರ್ಥಿಸಲ್ಪಟ್ಟು ಫಲ್ಗುಕನಾದನು.

ದಕ್ಷಿಣಾಗ್ನೌ ಕೃತಂ ನೂನಂ ತದ್ಭವಂ ಫಲ್ಗುತೀರ್ಥಕಂ ।
ಯಸ್ಮಿನ್ ಫಲತಿ ಫಲ್ಗ್ವಾಂ ಗೌಃ ಕಾಮಧೇನುರ್ಜಲಂ ಮಹೀ ॥ ೮೪ ॥

ಸೃಷ್ಟಿರಂತರ್ಗತಂ ಯಸ್ಮಾತ್ ಫಲ್ಗುತೀರ್ಥಂ ನ ನಿಷ್ಫಲಂ ।
ತೀರ್ಥಾನಿ ಯಾನಿ ಸರ್ವಾಣಿ ಭುವನೇಷ್ವಖಿಲೇಷು ಚ ॥ ೮೫ ॥

ತಾನಿ ಸ್ನಾತುಂ ಸಮಾಯಾಂತಿ ಫಲ್ಗುತೀರ್ಥಂ ನ ಸಂಶಯಃ ।
ಗಂಗಾ ಪಾದೋದಕಂ ವಿಷ್ಣೋಃ ಫಲ್ಗುಶ್ಚಾದಿಗದಾಧರಃ ॥ ೮೬ ॥

ಹಿಮಂ ಚ ದ್ರವರೂಪೇಣ ತಸ್ಮಾದ್ಗಂಗಾಧಿಕಂ ವಿದುಃ ।
ಅಶ್ವಮೇಧಸಹಸ್ರಾಣಾಂ ಫಲಂ ಫಲ್ಗುಜಲಾಪ್ಲವಾತ್ ॥ ೮೭ ॥

ಫಲ್ಗುತೀರ್ಥೇ ವಿಷ್ಣುಜಲೇ ಕರೋಮಿ ಸ್ನಾನಮದ್ಯ ವೈ ।
ಪಿತ್ರೂಣಾಂ ವಿಷ್ಣುಲೋಕಾಯ ಭುಕ್ತಿಮುಕ್ತಿಪ್ರಸಿದ್ಧಯೇ ॥ ೮೮ ॥

---

೮೪-೮೫. ದಕ್ಷಿಣಾಗ್ನಿಯಲ್ಲಿ ಕೃತವಾಗಿ ಹುಟ್ಟಿದುದು ಫಲ್ಗುತೀರ್ಥವು. ಗೋವು, ಕಾಮಧೇನು, ಜಲ ಭೂಮಿ ಇವು ಫಲ್ಗುತೀರ್ಥದಲ್ಲಿ ಫಲಿಸುವುದರಿಂದಲೂ ಸೃಷ್ಟಿಯು ಅಂತರ್ಗತವಾಗಿರುವುದರಿಂದಲೂ ಫಲ್ಗುತೀರ್ಥವು ನಿಷ್ಫಲವಲ್ಲ.

೮೫-೮೬. ಸಕಲಲೋಕಗಳಲ್ಲಿಯೂ ಇರುವ ತೀರ್ಥದೇವತೆಗಳೂ ಸಹ ಫಲ್ಗುತೀರ್ಥಕ್ಕೆ ಸ್ನಾನಕ್ಕಾಗಿ ಬರುವರು. ಸಂಶಯವಿಲ್ಲ.

೮೬-೮೭. ಗಂಗೆಯು ವಿಷ್ಣುವಿನ ಪಾದೋದಕವು. ಫಲ್ಗುವಾದರೋ ಆದಿಗದಾಧರನೇ ಮಾಡಿದ ದ್ರವರೂಪವಾದ ಹಿಮವು. ಆದಕಾರಣ ಫಲ್ಗುವು ಗಂಗೆಗಿಂತಲೂ ಮೇಲಾದುದೆಂದು ಜ್ಞಾನಿಗಳು ತಿಳಿದಿರುವರು ಫಲ್ಗುತೀರ್ಥದ ನೀರಿನಲ್ಲಿ ಸ್ನಾನಮಾಡುವುದರಿಂದ ಸಾವಿರ ಅಶ್ವಮೇಧಗಳ ಫಲವು ಬರುತ್ತದೆ.

೮೮. ಪಿತೃಗಳಿಗೆ ವಿಷ್ಣುಲೋಕ, ಭೋಗ ಮೋಕ್ಷಗಳು ಸಿದ್ಧಿಸುವುದಕ್ಕಾಗಿ ಫಲ್ಗುತೀರ್ಥವೆಂಬ ವಿಷ್ಣುಜಲದಲ್ಲಿ ಈಗ ಸ್ನಾನಮಾಡುವೆನು ಎಂಬುದಾಗಿ ಅನುಸಂಧಾನ ಮಾಡಬೇಕು.

ಫಲ್ಗುತೀರ್ಥೇ ನರಃ ಸ್ನಾತ್ವಾ ತರ್ಪಣಂ ಶ್ರಾದ್ಧಮಾಚರೇತ್ |
ಸಪಿಂಡಕಂ ಸ್ವಸೂತ್ರೋಕ್ತಂ ನಮೇದಥ ಪಿತಾಮಹಂ || ೮೯ ||

ನಮಃ ಶಿವಾಯ ದೇವಾಯ ಈಶಾನಪುರುಷಾಯ ಚ |
ಅಘೋರವಾಮದೇವಾಯ ಸದ್ಯೋಜಾತಾಯ ಶಂಭವೇ || ೯೦ ||

ನತ್ವಾ ಪಿತಾಮಹಂ ದೇವಂ ಮಂತ್ರೇಣಾನೇನ ಪೂಜಯೇತ್ |
ಫಲ್ಗುತೀರ್ಥೇ ನರಃ ಸ್ನಾತ್ವಾ ದೃಷ್ಟ್ವಾ ದೇವಂ ಗದಾಧರಂ || ೯೧ ||

ಆನಮ್ಯ ಪಿತೃಭಿಃ ಸಾರ್ಧಂ ತಾನ್ನಯೇದ್ವೈಷ್ಣವಂ ಪದಂ |
ಓಂ ನಮೋ ವಾಸುದೇವಾಯ ನಮಃ ಸಂಕರ್ಷಣಾಯ ಚ || ೯೨ ||

ಪ್ರದ್ಯುಮ್ನಾಯಾನಿರುದ್ಧಾಯ ಶ್ರೀಧರಾಯ ಚ ವಿಷ್ಣವೇ |
ಪಂಚತೀರ್ಥೇ ನರಃ ಸ್ನಾತ್ವಾ ಬ್ರಹ್ಮಲೋಕಂ ನಯೇತ್ಪಿತೄನ್ || ೯೩ ||

---

೮೯. ಮನುಷ್ಯನು ಫಲ್ಗುತೀರ್ಥದಲ್ಲಿ ಸ್ನಾನಮಾಡಿ ತನ್ನ ಶಾಖೆಗೆ ವಿಹಿತರೀತಿಯಿಂದ ಸಪಿಂಡಶ್ರಾದ್ಧವನ್ನು ಮಾಡಬೇಕು. ಅನಂತರ ಪಿತಾಮಹನಿಗೆ ನಮಸ್ಕಾರ ಮಾಡಬೇಕು.

೯೦-೯೧. ಪಿತಾಮಹ ದೇವನನ್ನು ನಮಸ್ಕರಿಸಿ "ನಮಃ ಶಿವಾಯ ದೇವಾಯ ಈಶಾನಪುರುಷಾಯ ಚ | ಅಘೋರವಾಮದೇವಾಯ ಸದ್ಯೋಜಾತಾಯ ಶಂಭವೇ" ಎಂಬ ಮಂತ್ರದಿಂದ ಪೂಜಿಸಬೇಕು.

೯೨-೯೩. ಫಲ್ಗುತೀರ್ಥದಲ್ಲಿ ಸ್ನಾನಮಾಡಿದ ಮನುಷ್ಯನು ಗದಾಧರ ದೇವನ ಸಂದರ್ಶನಮಾಡಿ ನಮಸ್ಕರಿಸಿ "ಓನ್ನಮೋ ವಾಸುದೇವಾಯ ನಮಃ ಸಂಕರ್ಷಣಾಯ ಚ | ಪ್ರದ್ಯುಮ್ನಾಯಾನಿರುದ್ಧಾಯ ಶ್ರೀಧರಾಯ ಚ ವಿಷ್ಣವೇ"|| ಎಂಬ ಮಂತ್ರವನ್ನು ಹೇಳಿ ಪಿತೃಗಳ ಸಹಿತವಾಗಿ ಅವರನ್ನು ವಿಷ್ಣುಲೋಕಕ್ಕೆ ಒಯ್ಯುವನು.

೯೩. ಪಂಚತೀರ್ಥಗಳಲ್ಲಿ ಸ್ನಾನಮಾಡಿದರೆ ಅವನು ಪಿತೃಗಳನ್ನು ಬ್ರಹ್ಮಲೋಕಕ್ಕೆ ಕರೆದುಕೊಂಡು ಹೋಗುವನು.

ಅಮೃತೈಃ ಪಂಚಭಿಃ ಸ್ನಾತಂ ಪುಷ್ಪವಸ್ತ್ರಾದ್ಯಲಂಕೃತಂ |
ನ ಕುರ್ಯಾದ್ಯೋ ಗದಾಪಾಣಿಂ ತಸ್ಯ ಶ್ರಾದ್ಧಮಪಾರ್ಥಕಂ || ೯೪ ||

ನಾಗಕೂಟಾದ್ಗೃಧ್ರಕೂಟಾದ್ವಿಷ್ಣೋಶ್ಚೋತ್ತರಮಾನಸಾತ್ |
ಏತದ್ಗಯಾಶಿರಃ ಪ್ರೋಕ್ತಂ ಫಲ್ಗುತೀರ್ಥಂ ತದುಚ್ಯತೇ || ೯೫ ||

ಮುಂಡಪೃಷ್ಠನಗಾಧಸ್ತಾತ್ಫಲ್ಗುತೀರ್ಥಮನುತ್ತಮಂ |
ಅತ್ರ ಶ್ರಾದ್ಧಾದಿನಾ ಸರ್ವೇ ಪಿತರೋ ಮೋಕ್ಷಮಾಪ್ನುಯುಃ || ೯೬ ||

ಶಮೀಪತ್ರಪ್ರಮಾಣೇನ ಪಿಂಡಂ ದದ್ಯಾದ್ಗಯಾಶಿರೇ |
ಯನ್ನಾಮ್ನಾ ಪಾತಯೇತ್ಪಿಂಡಂ ತಂ ನಯೇದ್ಬ್ರಹ್ಮ ಶಾಶ್ವತಂ || ೯೭ ||

ಅವ್ಯಕ್ತರೂಪೀ ಯೋ ದೇವೋ ಮುಂಡಪೃಷ್ಠಾದ್ರಿರೂಪತಃ |
ಫಲ್ಗುತೀರ್ಥಾದಿರೂಪೇಣ ನಮಸ್ಯತಿ ಗದಾಧರಂ || ೯೮ ||

---

೯೪. ಗದಾಧರನಿಗೆ ಪಂಚಾಮೃತಾಭಿಷೇಕ ಮಾಡಿ ಪುಷ್ಪವಸ್ತ್ರಗಳಿಂದ ಅಲಂಕಾರ ಮಾಡದಿರುವವನು ಮಾಡಿದ ಶ್ರಾದ್ಧವು ನಿಷ್ಫಲವು.

೯೫. ನಾಗಕೂಟ, ಗೃಧ್ರಕೂಟ, ವಿಷ್ಣು, ಉತ್ತರಮಾನಸ ಇವುಗಳ ನಂತರ ಗಯಾಶಿರಸ್ಸು ಇದೆ. ಅದೇ ಫಲ್ಗುತೀರ್ಥವೆಂದೂ ಉಕ್ತವಾಗಿದೆ.

೯೬. ಮುಂಡಪೃಷ್ಠಪರ್ವತದ ಕೆಳಭಾಗದಲ್ಲಿ ಉತ್ಕೃಷ್ಟವಾದ ಫಲ್ಗುತೀರ್ಥವಿದೆ. ಅಲ್ಲಿ ಶ್ರಾದ್ಧಾದಿಗಳನ್ನು ಮಾಡುವುದರಿಂದ ಪಿತೃಗಳೆಲ್ಲರೂ ಮುಕ್ತಿಯನ್ನು ಹೊಂದುವರು.

೯೭. ಗಯಾಶಿರಸ್ಸಿನಲ್ಲಿ ಶಮೀ ಪತ್ರಪರಿಮಿತವಾದ ಪಿಂಡವನ್ನು ಹಾಕಬೇಕು. ಅಲ್ಲಿ ಯಾರ ಹೆಸರಿನಿಂದ ಪಿಂಡಹಾಕುವರೋ ಅವನು ಶಾಶ್ವತವಾಗಿ ಬ್ರಹ್ಮನನ್ನು ಹೊಂದುವನು.

೯೮. ಅವ್ಯಕ್ತಸ್ವರೂಪಿಯಾದ ದೇವನು ಮುಂಡಪೃಷ್ಠಪರ್ವತ, ಫಲ್ಗುತೀರ್ಥ ಮುಂತಾದ ರೂಪದಿಂದ ಗದಾಧರನನ್ನು ನಮಸ್ಕರಿಸುತ್ತಿರುವನು.

ಶಿಲಾಪರ್ವತಫಲ್ಗ್ವಾದಿರೂಪೇಣಾವ್ಯಕ್ತವಾಸ್ಥಿತಃ ।
ಗದಾಧರಾದಿರೂಪೇಣ ವ್ಯಕ್ತಮಾದಿಧರಸ್ತಥಾ ॥ ೯೯ ॥

ಧರ್ಮಾರಣ್ಯಂ ತತೋ ಗಚ್ಛೇದ್ಧರ್ಮೋ ಯತ್ರ ವ್ಯವಸ್ಥಿತಃ ।
ಮತಂಗವಾಪ್ಯಾಂ ಸ್ನಾತ್ವಾ ತು ತರ್ಪಣಂ ಶ್ರಾದ್ಧಮಾಚರೇತ್ ॥ ೧೦೦ ॥

ಗತ್ವಾ ನತ್ವಾ ಮತಂಗೇಶಂ ಇಮಂ ಮಂತ್ರಮುದೀರಯೇತ್ ।
ಪ್ರಮಾಣಂ ದೇವತಾಃ ಶಂಭುರ್ಲೋಕಪಾಲಾಶ್ಚ ಸಾಕ್ಷಿಣಃ ॥ ೧೦೧ ॥

ಮಯಾಗತ್ಯ ಮತಂಗೇಸ್ಮಿನ್ ಪಿತೄಣಾಂ ನಿಷ್ಕೃತಿಃ ಕೃತಾ ।
ಪೂರ್ವಂ ತು ಬ್ರಹ್ಮತೀರ್ಥಂ ಚ ಕೂಪೇ ಶ್ರಾದ್ಧಾದಿ ಕಾರಯೇತ್ ॥೧೦೨॥

ತತ್ಕೂಪಯೂಪಯೋರ್ಮಧ್ಯೇ ಕುರ್ವಂಸ್ತು ತ್ರಾಯತೇ ಪಿತೄನ್ ।
ಧರ್ಮೋ ಧರ್ಮೇಶ್ವರಂ ನತ್ವಾ ಮಹಾಬೋಧಿತರುಂ ನಮೇತ್ ॥ ೧೦೩ ॥

---

೯೯. ಶಿಲಾ, ಪರ್ವತ, ಫಲ್ಗುತೀರ್ಥ ಮೊದಲಾದವುಗಳ ರೂಪದಿಂದ ಅವ್ಯಕ್ತನಾಗಿರುವ ದೇವನು ಗದಾಧರಾದಿ ರೂಪದಿಂದ ವ್ಯಕ್ತನಾಗಿ ಆದಿಧರ ನೆನಿಸಿರುವನು.

೧೦೦. ಅನಂತರ ಧರ್ಮವು ವ್ಯವಸ್ಥಿತವಾಗಿರುವ ಧರ್ಮಾರಣ್ಯಕ್ಕೆ ಹೋಗ ಬೇಕು. ಅಲ್ಲಿ ಮತಂಗ ಸರೋವರದಲ್ಲಿ ಸ್ನಾನಮಾಡಿ ತರ್ಪಣ ಶ್ರಾದ್ಧಗಳನ್ನು ಮಾಡಬೇಕು.

೧೦೧-೧೦೨. ಅನಂತರ ದೇವಾಲಯಕ್ಕೆ ಹೋಗಿ ಮತಂಗೇಶನಿಗೆ ನಮ ಸ್ಕರಿಸಿ "ನಾನು ಇಲ್ಲಿಗೆ ಒಂದು ಈ ಮತಂಗತೀರ್ಥದಲ್ಲಿಯೂ ಹಿಂದೆ ಬ್ರಹ್ಮ ತೀರ್ಥದಲ್ಲಿಯೂ ಸಹ ಪಿತೃಗಳಿಗೆ ತಾರಕವಾದ ಶ್ರಾದ್ಧಾದಿಗಳನ್ನು ಮಾಡಿರುವೆನು. ಇದಕ್ಕೆ ಲೋಕಪಾಲಕರೇ ಸಾಕ್ಷಿಗಳು. ಶಂಭುದೇವನೇ ಪ್ರಮಾಣವು" ಎಂಬು ದಾಗಿ ಅನುಸಂಧಾನ ಮಾಡಿಕೊಂಡು ಈ ಮಂತ್ರವನ್ನು ಹೇಳಬೇಕು. ಬಳಿಕ ಕೂಪದಲ್ಲಿ ಶ್ರಾದ್ಧವನ್ನು ಮಾಡಬೇಕು.

೧೦೩. ಆ ಕೂಪಯೂಪಗಳ ಮಧ್ಯದಲ್ಲಿ ಶ್ರಾದ್ಧಗಳನ್ನು ಮಾಡುವವನು

ದ್ವಿತೀಯದಿವಸೇ ಕೃತ್ಯಂ ಮತಂಗೇಶ ಉದಾಹೃತಂ |
ಸ್ನಾನತರ್ಪಣಪಿಂಡಾರ್ಚಾನತ್ಯಾದ್ಯೈಃ ಪಿತೃಸೌಖ್ಯದಂ ॥ ೧೦೪ ॥

ಇತಿ ಶ್ರೀನಾರದೀಯಮಹಾಪುರಾಣೋತ್ತರಭಾಗೇ ಮೋಹಿನೀ
ವಸುಸಂವಾದೇ ಗಂಗಾಮಾಹಾತ್ಮ್ಯೇ ಪಿಂಡದಾನವಿಧಿ
ರ್ನಾಮ ಪಂಚಚತ್ವಾರಿಂಶತ್ತಮೋಽಧ್ಯಾಯಃ

---

ಪಿತೃಗಳನ್ನು ಸಂರಕ್ಷಿಸುವನು. ಧರ್ಮಕ್ಷೇತ್ರದಲ್ಲಿ ಧರ್ಮೇಶ್ವರನನ್ನು ನಮಸ್ಕರಿಸಿ ಮಹಾಬೋಧಿ ಎಂಬ ವೃಕ್ಷವನ್ನು ನಮಸ್ಕರಿಸಬೇಕು.

೧೦೪. ಎರಡನೆಯ ದಿವಸದಲ್ಲಿ ಮತಂಗೇಶಕ್ಷೇತ್ರದಲ್ಲಿ ಮಾಡಬೇಕಾದ ಪಿತೃಸೌಖ್ಯದಾಯಕವಾದ ಸ್ನಾನ, ತರ್ಪಣ, ಪಿಂಡದಾನ, ಮತಂಗೇಶನ ಅರ್ಚನೆ ನಮಸ್ಕಾರ ಇವುಗಳು ಹೇಳಲ್ಪಟ್ಟವು.

ಇಂತು ಶ್ರೀನಾರದೀಯಪುರಾಣೋತ್ತರಭಾಗದಲ್ಲಿ ಮೋಹಿನೀ ವಸುಸಂವಾದ
ದೊಳು ಗಯಾಮಾಹಾತ್ಮ್ಯವರ್ಣನೆಯ ಪ್ರಕರಣದಲ್ಲಿ ಪಿಂಡದಾನ
ವಿಧಿನಿರೂಪಣೆಯೆಂಬ ನಲವತ್ತೈದನೆಯ
ಅಧ್ಯಾಯವು ಮುಗಿದುದು.

# ಷಟ್ಚತ್ವಾರಿಂಶತ್ತಮೋಽಧ್ಯಾಯಃ

## ವಸುರುವಾಚ

ಅಥ ತೇ ಸಂಪ್ರವಕ್ಷ್ಯಾಮಿ ಭುಕ್ತಿಮುಕ್ತಿಪ್ರದಾಯಕಂ ।
ತೃತೀಯದಿವಸೇ ಕೃತ್ಯಂ ಗಯಾಸಂಗಫಲಪ್ರದಂ ॥ ೧ ॥

ಸ್ನಾತ್ವಾ ತು ಬ್ರಹ್ಮಸರಸಿ ಶ್ರಾದ್ಧಂ ಕುರ್ಯಾತ್ಸಪಿಂಡಕಂ ।
ಸ್ನಾನಂ ಕರೋಮಿ ತೀರ್ಥೇಽಸ್ಮಿನ್ನೃಣತ್ರಯವಿಮುಕ್ತಯೇ ॥ ೨ ॥

ಶ್ರಾದ್ಧಾಯ ಪಿಂಡದಾನಾಯ ತರ್ಪಣಾಯಾರ್ಥಸಿದ್ಧಯೇ ।
ತತ್ಕೂಪಯೂಪಯೋರ್ಮಧ್ಯೇ ಕುರ್ವಂಸ್ತಾರಯತೇ ಪಿತೄನ್ ॥ ೩ ॥

---

## ನಲವತ್ತಾರನೆಯ ಅಧ್ಯಾಯ

೧. ವಸುವು ಹೇಳಿದನು :—ಈಗ ಭೋಗಮೋಕ್ಷಗಳನ್ನು ಕೊಡುವ, ಗಯೆಗೆ ಹೋದುದನ್ನು ಸಫಲಗೊಳಿಸುವಂತಹ ಮೂರನೆಯ ದಿವಸದಲ್ಲಿ ಮಾಡಬೇಕಾದುದನ್ನು ನಿನಗೆ ಹೇಳುವೆನು.

೨-೩. ಬ್ರಹ್ಮಸರೋವರದಲ್ಲಿ ಸ್ನಾನಮಾಡಿ ಪಾರ್ವಣಶ್ರಾದ್ಧ ಮಾಡಬೇಕು. ಈ ತೀರ್ಥದಲ್ಲಿ ಪಿಂಡಪ್ರದಾನಪೂರ್ವಕವಾಗಿ ಶ್ರಾದ್ಧ ತರ್ಪಣಗಳನ್ನು ಮಾಡಿ ಋಣತ್ರಯವನ್ನು ಪರಿಹರಿಸಿಕೊಂಡು ಪುರುಷಾರ್ಥವನ್ನು ಸಂಪಾದಿಸುವುದಕ್ಕಾಗಿ ಸ್ನಾನಮಾಡುವೆನೆಂದು ಸಂಕಲ್ಪಿಸಿ ಆ ಕೂಪಯೂಪಗಳ ಮಧ್ಯದಲ್ಲಿ ಸ್ನಾನಾದಿಗಳನ್ನು ಮಾಡುವವನು ಪಿತೃಗಳನ್ನು ನರಕಾದಿಗಳಿಂದ ದಾಟಿಸುವನು.

ಸ್ನಾನಂ ಕೃತ್ವೋಚ್ಛ್ರಿತೋ ಯೂಪೋ ಬ್ರಹ್ಮಣೋ ಯೂಪ ಇತ್ಯುತ |
ಕೃತ್ವಾ ಬ್ರಹ್ಮಸರಃಶ್ರಾದ್ಧಂ ಬ್ರಹ್ಮಲೋಕಂ ನಯೇತ್ಪಿತೄನ್ || ೪ ||

ಗೋಪ್ರಚಾರಸಮೀಪಸ್ಥಾ ಆಮ್ರಾ ಬ್ರಹ್ಮಪ್ರಕಲ್ಪಿತಾಃ |
ತೇಷಾಂ ಸೇವನಮಾತ್ರೇಣ ಪಿತರೋ ಮೋಕ್ಷಗಾಮಿನಃ || ೫ ||

ಆಮ್ರಂ ಬ್ರಹ್ಮಸರೋದ್ಭೂತಂ ಸರ್ವದೇವಮಯಂ ವಿಭುಂ |
ವಿಷ್ಣುರೂಪಂ ಪ್ರಸಿಂಚಾಮಿ ಪಿತೄಣಾಂ ಚೈವ ಮುಕ್ತಯೇ || ೬ ||

ಏಕೋ ಮುನಿಃ ಕುಂಭಕುಶಾಗ್ರಹಸ್ತ
ಆಮ್ರಸ್ಯ ಮೂಲೇ ಸಲಿಲಂ ದದಾತಿ |
ಆಮ್ರಾಶ್ಚ ಸಿಕ್ತಾಃ ಪಿತರಶ್ಚ ತೃಪ್ತಾ
ಏಕಾ ಕ್ರಿಯಾ ದ್ವ್ಯರ್ಥಕರೀಪ್ರಸಿದ್ಧಾ
ಆಚಮ್ಯ ಮೂಲೇ ಸಲಿಲಂ ದದಾನೋ
ನೋಪೇಕ್ಷಣೀಯೋ ವಿಬುಧೈರ್ಮನುಷ್ಯಃ || ೭ ||

---

೪. ಸ್ನಾನವಮಾಡಿದ ನಂತರ ಎತ್ತರವಾದ ಬ್ರಹ್ಮಯೂಪದಲ್ಲಿ ಬ್ರಹ್ಮ ಸರೋವರ ಶ್ರಾದ್ಧವನ್ನು ಮಾಡಿದರೆ ಅವನು ಪಿತೃಗಳನ್ನು ಬ್ರಹ್ಮಲೋಕಕ್ಕೆ ಒಯ್ಯುವನು.

೫. ಗೋಪ್ರಚಾರ ಸಮೀಪದಲ್ಲಿ ಬ್ರಹ್ಮನು ಕಲ್ಪಿಸಿರುವ ಆಮ್ರ (ಮಾವಿನ) ವೃಕ್ಷಗಳಿವೆ. ಅವುಗಳನ್ನು ಸೇವಿಸುವ ಮಾತ್ರದಿಂದ ಪಿತೃಗಳು ಮೋಕ್ಷಕ್ಕೆ ಹೋಗುವರು.

೬. ಬ್ರಹ್ಮಸರೋವರದಲ್ಲಿ ಹುಟ್ಟಿದ, ಸಕಲ ದೇವತಾಮಯವಾದ ವ್ಯಾಪಕವಾದ ವಿಷ್ಣು ಪ್ರತಿಮೆಯಂತಿರುವ ಆಮ್ರವೃಕ್ಷವನ್ನು ಪಿತೃಗಳಿಗೆ ಮುಕ್ತಿಯಾಗುವುದಕ್ಕಾಗಿ ಸೇಚನೆಮಾಡುತ್ತೇನೆಂದು ಸಂಕಲ್ಪಿಸಬೇಕು.

೭. ಕಲಶ ದರ್ಭಾಗ್ರಗಳನ್ನು ಕೈಯಲ್ಲಿ ಹಿಡಿದುಕೊಂಡಿರುವ ಒಬ್ಬ ಋಷಿಯು ಆಮ್ರವೃಕ್ಷದ ಮೂಲಭಾಗದಲ್ಲಿ ನೀರನ್ನು ಹಾಕುತ್ತಾನೆ ಆದರಿಂದ ಆಮ್ರವೃಕ್ಷಗಳು ಸೇಚನೆ ಮಾಡಲ್ಪಟ್ಟವು. ಪಿತೃಗಳೂ ತೃಪ್ತಿಹೊಂದಿದರು.

ಯೂಪಂ ಪ್ರದಕ್ಷಿಣೀಕೃತ್ಯ ವಾಜಪೇಯಫಲಂ ಲಭೇತ್ ।
ಬ್ರಹ್ಮಾಣಂ ಚ ನಮಸ್ಕೃತ್ಯ ಪಿತೄನ್ ಬ್ರಹ್ಮಪುರಂ ನಯೇತ್ ॥ ೮ ॥

ಓಂ ನಮೋ ಬ್ರಹ್ಮಣೇಽಜಾಯ ಜಗಜ್ಜನ್ಮಾದಿಕಾರಿಣೇ ।
ಭಕ್ತಾನಾಂ ಚ ಪಿತೄಣಾಂ ಚ ತಾರಕಾಯ ನಮೋನಮಃ ॥ ೯ ॥

ತತೋ ಯಮಬಲಿಂ ಕ್ಷಿಪ್ತ್ವಾ ಮಂತ್ರೇಣಾನೇನ ಸಂಯುತಃ ।
ಯಮರಾಜಧರ್ಮರಾಜೌ ನಿಶ್ಚಲಾರ್ಥಾವಿತಿ ಸ್ಥಿತೌ ॥ ೧೦ ॥

ತಾಭ್ಯಾಂ ಬಲಿಂ ಪ್ರಯಚ್ಛಾಮಿ ಪಿತೄಣಾಂ ಮುಕ್ತಿಹೇತವೇ ।
ತತಃ ಶ್ವಾನಬಲಿಂ ಕೃತ್ವಾ ಪೂರ್ವಮಂತ್ರೇಣ ಮೋಹಿನಿ ॥ ೧೧ ॥

---

ಹೀಗೆ ಒಂದು ಕರ್ಮವು ಎರಡು ಪ್ರಯೋಜನಗಳನ್ನುಂಟುಮಾಡುವುದು ಪ್ರಸಿದ್ಧವಾಗಿದೆ. ಆಚಮನಮಾಡಿ ಮೂಲದಲ್ಲಿ ನೀರುಹಾಕುವ ಮನುಷ್ಯನನ್ನು ಜ್ಞಾನಿಗಳು ಉಪೇಕ್ಷೆಮಾಡಲಾಗದು.

೮. ಯೂಪವನ್ನು ಪ್ರದಕ್ಷಿಣೆಮಾಡಿದರೆ ವಾಜಪೇಯ ಯಜ್ಞದ ಫಲವು ಬರುತ್ತದೆ. ಬ್ರಹ್ಮನಿಗೆ ನಮಸ್ಕಾರಮಾಡಿದವನು ಪಿತೃಗಳನ್ನು ಬ್ರಹ್ಮಪುರಕ್ಕೆ ಒಯ್ಯುವನು.

೯. ಜಗತ್ಸೃಷ್ಟ್ಯಾದಿ ಕರ್ತನು, ಭಕ್ತರು ಮತ್ತು ಪಿತೃಗಳಿಗೆ ತಾರಕನು, ನಾರಾಯಣನ ನಾಭಿಕಮಲದಲ್ಲಿ ಉದ್ಭವಿಸಿದವನೂ ಆಗಿರುವ ಬ್ರಹ್ಮನಿಗೆ ನಮಸ್ಕಾರ! ನಮಸ್ಕಾರ!

೧೦-೧೧. ಯಮರಾಜ ಮತ್ತು ಧರ್ಮರಾಜರು ನಿಶ್ಚಲಾರ್ಥರಾಗಿರುವರು. ಪಿತೃಗಳ ಮುಕ್ತ್ಯರ್ಥವಾಗಿ ಅವರಿಗೆ ಬಲಿಯನ್ನರ್ಪಿಸುವೆನೆಂಬ ಮಂತ್ರವನ್ನು ಹೇಳಿ ಯಮಬಲಿಯನ್ನು ಕೊಡಬೇಕು. ಹಿಂದೆ ಹೇಳಿದ ಮಂತ್ರದಿಂದ ಶ್ವಾನಬಲಿಯನ್ನು ಕೊಡಬೇಕು.

ತತಃ ಶ್ವಾನಬಲಿಂ ಕುರ್ಯಾನ್ಮಂತ್ರೇಣಾನೇನ ಸಂಯುತಃ ।
ಐಂದ್ರವಾರುಣವಾಯವ್ಯಾ ಯಾಮ್ಯಾ ವೈ ನೈರುತಾಸ್ತಥಾ ॥ ೧೨ ॥

ವಾಯಸಾಃ ಪ್ರತಿಗೃಹ್ಣಂತು ಭೂಮಿಪಿಂಡಂ ಮಯಾರ್ಪಿತಂ ।
ತತಃ ಸ್ನಾನಂ ಪ್ರಕುರ್ವೀತ ಬ್ರಹ್ಮತೀರ್ಥೇ ಕುಶಾನ್ವಿತಃ ॥ ೧೩ ॥

ಏವಂ ತೃತೀಯದಿವಸೇ ಸಮಾಪ್ಯ ನಿಯಮಂ ಸುಧೀಃ ।
ನತ್ವಾ ಗದಾಧರಂ ದೇವಂ ಬ್ರಹ್ಮಚರ್ಯಪರೋ ಭವೇತ್ ॥ ೧೪ ॥

ಫಲ್ಗುತೀರ್ಥೇ ಚತುರ್ಥೇ ಚ ಸ್ನಾನಾದಿಕಮಥಾಚರೇತ್ ।
ಗಯಾಶಿರಸ್ಯಥೋ ಶ್ರಾದ್ಧಂ ಪದೇ ಕುರ್ಯಾತ್ಸಪಿಂಡಕಂ ॥ ೧೫ ॥

---

೧೨-೧೩. ಮೋಹಿನಿಯೇ! ಅನಂತರ ನಿಯಮಯುಕ್ತನಾಗಿ "ಐಂದ್ರವಾರುಣವಾಯವ್ಯಾ ಯಾಮ್ಯಾ ವೈ ನೈಋತಾಸ್ತಥಾ । ವಾಯಸಾಃ ಪ್ರತಿಗೃಹ್ಣಂತು ಭೂಮಿಪಿಂಡಂ ಮಯಾರ್ಪಿತಂ ॥" (ಐಂದ್ರ, ವಾರುಣ, ವಾಯುವ್ಯ, ಯಾಮ್ಯ, ನೈರುತ್ಯ ದಿಕ್ಕುಗಳಲ್ಲಿರುವ ವಾಯಸಗಳೇ ನಾನು ಭೂಮಿಯಲ್ಲಿ ಸಮರ್ಪಿಸಿರುವ ಪಿಂಡವನ್ನು ಸ್ವೀಕರಿಸಿರಿ) ಎಂಬೀ ಮಂತ್ರದಿಂದ ಕಾಕಬಲಿಯನ್ನು ಕೊಡಬೇಕು. ತರುವಾಯ ದರ್ಭೆಯಿಂದ ಸಹಿತನಾಗಿ ಬ್ರಹ್ಮತೀರ್ಥದಲ್ಲಿ ಸ್ನಾನಮಾಡಬೇಕು.

೧೪. ಈ ಪ್ರಕಾರವಾಗಿ ಮೂರನೆಯ ದಿವಸದ ಕರ್ತವ್ಯನಿಯಮವನ್ನು ಪೂರ್ತಿಗೊಳಿಸಿ ಗದಾಧರದೇವನಿಗೆ ನಮಸ್ಕರಿಸಿ ಬ್ರಹ್ಮಚರ್ಯ ನಿರತನಾಗಬೇಕು.

೧೫. ಅನಂತರ ನಾಲ್ಕನೆಯ ದಿನದಲ್ಲಿ ಫಲ್ಗುತೀರ್ಥದಲ್ಲಿ ಸ್ನಾನಾದಿಗಳನ್ನು ಮಾಡಬೇಕು. ಬಳಿಕ ಗಯಾಶಿರಸ್ಸಿನಲ್ಲಿ, ವಿಷ್ಣುಪಾದದಲ್ಲಿ ಪಾರ್ವಣಶ್ರಾದ್ಧ ಮಾಡಬೇಕು.

೧೬. ಅಲ್ಲಿ ಫಲ್ಗುತೀರ್ಥವನ್ನಾಶ್ರಯಿಸಿದ ಗಯಾಸುರನ ಶಿರಸ್ಸೇ ಸಾಕ್ಷಾತ್ತಾಗದೆ. ಕ್ರೌಂಚಪಾದದಿಂದ ಫಲ್ಗುತೀರ್ಥದವರೆಗಿನ ಕ್ಷೇತ್ರವು ಗಯಾಶಿರಸ್ಸೆನಿಸುವುದು.

ಸಾಕ್ಷಾದ್ಗಯಾಶಿರಸ್ತತ್ರ ಫಲ್ಗುತೀರ್ಥಾಶ್ರಯಂ ಕೃತಂ ।
ಕ್ರೌಂಚಪಾದಾತ್ಫಲ್ಗುತೀರ್ಥಂ ಯಾವತ್ಸಾಕ್ಷಾದ್ಗಯಾಶಿರಃ ॥ ೧೬ ॥

ಗಯಾಶಿರೇ ನಗಾದ್ಯಾಶ್ಚ ಸಾಕ್ಷಾತ್ತತ್ಫಲ್ಗುತೀರ್ಥಕಂ ।
ಮುಖಂ ಗಯಾಸುರಸ್ಯೈತತ್ತಸ್ಮಿನ್ಸ್ನಾತ್ವಾ ಶ್ರಾದ್ಧಂ ಸಮಾಚರೇತ್ ॥ ೧೭ ॥

ಆದ್ಯೋ ಗದಾಧರೋ ದೇವೋ ವ್ಯಕ್ತಾವ್ಯಕ್ತಾರ್ಥಮಾಸ್ಥಿತಃ ।
ವಿಷ್ಣ್ವಾದಿಪದರೂಪೇಣ ಪಿತೄಣಾಂ ಮುಕ್ತಿಹೇತವೇ ॥ ೧೮ ॥

ತತ್ರ ವಿಷ್ಣುಪದಂ ದಿವ್ಯಂ ದರ್ಶನಾತ್ಪಾಪನಾಶನಂ ।
ಸ್ಪರ್ಶನಾತ್ಪೂಜನಾಚ್ಚಾಪಿ ಪಿತೄಣಾಂ ಮೋಕ್ಷದಾಯಕಂ ॥ ೧೯ ॥

ಶ್ರಾದ್ಧಂ ಸಪಿಂಡಕಂ ಕೃತ್ವಾ ಸಹಸ್ರಕುಲಮಾತ್ಮನಃ ।
ವಿಷ್ಣುಲೋಕಂ ಸಮುದ್ಧೃತ್ಯ ನಯೇದ್ವಿಷ್ಣುಪದೇ ನರಃ ॥ ೨೦ ॥

---

೧೭. ಗಯಾಶಿರಸ್ಸಿನಲ್ಲಿ ಫಲ್ಗುತೀರ್ಥ ಮುಂತಾದುವುಗಳಿವೆ. ಫಲ್ಗುತೀರ್ಥವು ಗಯಾಸುರನ ಮುಖವು. ಅಲ್ಲಿ ಸ್ನಾನಮಾಡಿ ಶ್ರಾದ್ಧಮಾಡಬೇಕು.

೧೮. ಆದಿಯಾದ ಗದಾಧರದೇವನು ಪಿತೃಗಳಿಗೆ ಮುಕ್ತಿಯನ್ನು ಕೊಡುವುದಕ್ಕಾಗಿ ವಿಷ್ಣುಪಾದ ಮುಂತಾದ ರೂಪದಿಂದ ವ್ಯಕ್ತ ಮತ್ತು ಅವ್ಯಕ್ತವಸ್ತುಗಳಲ್ಲಿ ಸನ್ನಿಹಿತನಾಗಿರುವನು.

೧೯. ಅದರಲ್ಲಿ ದಿವ್ಯವಾದ ವಿಷ್ಣುಪದವು ದರ್ಶನಮಾತ್ರದಿಂದ ಪಾಪವನ್ನು ಪರಿಹರಿಸುತ್ತದೆ. ಅದು ಸ್ಪರ್ಶಪೂಜೆಗಳಿಂದ ಪಿತೃಗಳಿಗೆ ಮೋಕ್ಷದಾಯಕವಾಗುವುದು.

೨೦. ವಿಷ್ಣುಪಾದದಲ್ಲಿ ಪಿಂಡಪ್ರದಾನ ಸಹಿತವಾದ ಶ್ರಾದ್ಧವನ್ನು ಮಾಡುವ ಮನುಜನು ತನ್ನ ಸಹಸ್ರಕುಲವನ್ನುದ್ಧರಿಸಿ ವಿಷ್ಣುಲೋಕಕ್ಕೆ ಒಯ್ಯುವನು.

ಶ್ರಾದ್ಧಂ ಕೃತ್ವಾ ರುದ್ರಪದೇ ನಯೇತ್ಕುಲಶತಂ ನರಃ ।
ಘುಣಾತ್ಮನಾ ಶಿವಪುರಂ ತಥಾ ಬ್ರಹ್ಮಪದೇ ಶುಭೇ ॥ ೨೧ ॥

ದಕ್ಷಿಣಾಗ್ನಿಪದೇ ಶ್ರಾದ್ಧೀ ವಾಜಪೇಯಫಲಂ ಲಭೇತ್ ।
ಗಾರ್ಹಪತ್ಯಪದೇ ಶ್ರಾದ್ಧೀ ರಾಜಸೂಯಫಲಂ ಲಭೇತ್ ॥ ೨೨ ॥

ಶ್ರಾದ್ಧಂ ಕೃತ್ವಾ ಚಂದ್ರಪದೇ ವಾಜಿಮೇಧಫಲಂ ಲಭೇತ್ ।
ಶ್ರಾದ್ಧಂ ಕೃತ್ವಾ ಸತ್ಯಪದೇ ಜ್ಯೋತಿಷ್ಟೋಮಫಲಂ ಲಭೇತ್ ॥ ೨೩ ॥

ಆವಸಥ್ಯಪದೇ ಶ್ರಾದ್ಧೀ ಸೋಮಲೋಕಮವಾಪ್ನುಯಾತ್ ।
ಶ್ರಾದ್ಧಂ ಕೃತ್ವಾ ಚಂದ್ರಪದೇ ಶಕ್ರಲೋಕಂ ನಯೇತ್ಪಿತೄನ್ ॥ ೨೪ ॥

ಅನ್ಯೇಷಾಂ ಚ ಪದೇ ಶ್ರಾದ್ಧೀ ಪಿತೄನ್ ಬ್ರಹ್ಮಪದೇ ನಯೇತ್ ।
ಶ್ರಾದ್ಧೀ ಸೂರ್ಯಪದೇ ಯಶ್ಚ ಪಾಪಿನೋಽರ್ಕಪುರಂ ನಯೇತ್ ॥ ೨೫ ॥

---

೨೧. ರುದ್ರಪದದಲ್ಲಿ ಶ್ರಾದ್ಧವನ್ನು ಮಾಡಿದರೆ ಮನುಷ್ಯನು ನೂರು ಕುಲಗಳನ್ನುದ್ಧರಿಸಿ, ಅವರನ್ನು ಶಿವಪುರಕ್ಕೆ ಕರೆದುಕೊಂಡು ಹೋಗುವನು. ಅಂತೆಯೇ ಶುಭವಾದ ಬ್ರಹ್ಮಪದದಲ್ಲಿ ಶ್ರಾದ್ಧಮಾಡಿದರೂ ನೂರುಕುಲಗಳನ್ನುದ್ಧರಿಸಿ ಅವರನ್ನು ಬ್ರಹ್ಮಸದನಕ್ಕೆ ಒಯ್ಯುವನು.

೨೨. ದಕ್ಷಿಣಾಗ್ನಿಪದದಲ್ಲಿ ಶ್ರಾದ್ಧಮಾಡುವವನು ವಾಜಪೇಯಯಾಗ ಫಲವನ್ನೂ, ಗಾರ್ಹಪತ್ಯಪದದಲ್ಲಿ ಶ್ರಾದ್ಧಮಾಡುವವನು ರಾಜಸೂಯಯಾಗ ಫಲವನ್ನೂ ಹೊಂದುವನು.

೨೩. ಚಂದ್ರಪದದಲ್ಲಿ ಶ್ರಾದ್ಧಮಾಡುವವನು ಅಶ್ವಮೇಧ ಫಲವನ್ನೂ ಸತ್ಯಪದದಲ್ಲಿ ಶ್ರಾದ್ಧಮಾಡುವವನು ಜ್ಯೋತಿಷ್ಟೋಮ ಫಲವನ್ನೂ ಹೊಂದುವನು.

೨೪. ಆವಸಥ್ಯಪದದಲ್ಲಿ ಶ್ರಾದ್ಧಮಾಡುವವನು ಪಿತೃಗಳನ್ನು ಸೋಮಲೋಕಕ್ಕೂ, ಚಂದ್ರಪದದಲ್ಲಿ ಶ್ರಾದ್ಧಮಾಡುವವನು ಇಂದ್ರಲೋಕಕ್ಕೂ ಒಯ್ಯುವರು

೨೫. ಇತರಪದಗಳಲ್ಲಿ ಶ್ರಾದ್ಧಮಾಡುವವನು ಪಿತೃಗಳನ್ನು ಬ್ರಹ್ಮಲೋಕಕ್ಕೆ ಕರೆದುಕೊಂಡು ಹೋಗುವನು. ಸೂರ್ಯಪದದಲ್ಲಿ ಶ್ರಾದ್ಧಮಾಡುವವನು ಪಾಪಿಗಳಾದ ಪಿತೃಗಳನ್ನೂ ಸೂರ್ಯಲೋಕಕ್ಕೆ ಒಯ್ಯುವನು.

ಕಾರ್ತಿಕೇಯಪದೇ ಶ್ರಾದ್ಧೀ ಶಿವಲೋಕೇ ನಯೇತ್ಪಿತೄನ್ ।
ಶ್ರಾದ್ಧಂ ಕೃತ್ವಾಗಸ್ತ್ಯಪದೇ ಬ್ರಹ್ಮಲೋಕಂ ನಯೇತ್ಪಿತೄನ್ ॥ ೨೬ ॥

ಸರ್ವೇಷಾಂ ಕಾಶ್ಯಪಂ ಶ್ರೇಷ್ಠಂ ವಿಷ್ಣೋ ರುದ್ರಸ್ಯ ವೈ ಪದಂ ।
ಬ್ರಹ್ಮಣಶ್ಚ ಪದಂ ತತ್ರ ಸರ್ವಶ್ರೇಷ್ಠಮುದಾಹೃತಂ ॥ ೨೭ ॥

ಪ್ರಾರಂಭೇ ಚ ಸಮಾಪ್ತೌ ಚ ತೇಷಾಮನ್ಯತಮಂ ಸ್ಮೃತಂ ।
ಶ್ರೇಯಸ್ಕರಂ ಭವೇತ್ತತ್ರ ಶ್ರಾದ್ಧಕರ್ತುಶ್ಚ ಮೋಹಿನಿ ॥ ೨೮ ॥

ಕಶ್ಯಪಸ್ಯ ಪದೇ ದಿವ್ಯೋ ಭಾರದ್ವಾಜೋ ಮುನಿಃ ಪುರಾ ।
ಶ್ರಾದ್ಧಂ ಹಿ ಚೋದ್ಯತೋ ದಾತುಂ ಪಿತ್ರಾದಿಭ್ಯಶ್ಚ ಪಿಂಡಕಂ ॥ ೨೯ ॥

---

೨೬. ಕಾರ್ತಿಕೇಯಪದದಲ್ಲಿ ಶ್ರಾದ್ಧಮಾಡುವವನು ಪಿತೃಗಳನ್ನು ಶಿವಲೋಕದಲ್ಲಿ ವಾಸಿಸುವಂತೆ ಮಾಡುವನು. ಅಗಸ್ತ್ಯಪದದಲ್ಲಿ ಶ್ರಾದ್ಧಮಾಡಿದ ಮನುಷ್ಯನು ಪಿತೃಗಳನ್ನು ಬ್ರಹ್ಮಲೋಕಕ್ಕೆ ಒಯ್ಯುವನು.

೨೭. ಎಲ್ಲಾಪಾದಗಳಲ್ಲಿಯೂ ಕಾಶ್ಯಪವು ಶ್ರೇಷ್ಠವಾದುದು. ಅದರಲ್ಲಿಯೂ ವಿಷ್ಣು, ರುದ್ರ, ಬ್ರಹ್ಮ ಇವರ ಪಾದಗಳು ಸರ್ವೋತ್ತಮವೆಂದು ಉಕ್ತವಾಗಿವೆ.

೨೮. ಮೋಹಿನೀ! ಪ್ರಾರಂಭ ಮತ್ತು ಸಮಾಪ್ತಿಕಾಲಗಳಲ್ಲಿ ಈ ಸರ್ವಶ್ರೇಷ್ಠವಾದ ಪಾದಗಳ ಪೈಕಿ ಯಾವುದಾದರೊಂದು ಪಾದದಲ್ಲಿ ಶ್ರಾದ್ಧಮಾಡಿದರೆ ಕರ್ತೃವಿಗೆ ಶ್ರೇಯಸ್ಸಾಗುವುದು.

೨೯. ಪೂರ್ವದಲ್ಲಿ ದೇವಭಕ್ತನಾದ ಭಾರದ್ವಾಜಮುನಿಯು ಕಶ್ಯಪನ ಪಾದದಲ್ಲಿ ಶ್ರಾದ್ಧಮಾಡತೊಡಗಿ ಪಿತ್ರಾದಿಗಳಿಗೆ ಪಿಂಡಪ್ರದಾನ ಮಾಡಲು ಉದ್ಯುಕ್ತನಾದನು.

ಶುಕ್ಲಕೃಷ್ಣೌ ತದಾ ಹಸ್ತೌ ಪದಮುದ್ಭಿದ್ಯ ನಿಸ್ಸೃತೌ |
ದೃಷ್ಟ್ವಾ ಹಸ್ತದ್ವಯಂ ತತ್ರ ಪಿತೃಸಂಶಯಮಾಗತಃ || ೩೦ ||

ತತಃ ಸ್ವಮಾತರಂ ಶಾಂತಂ ಭಾರದ್ವಾಜಸ್ತು ಪೃಷ್ಟವಾನ್ |
ಕಶ್ಯಪಸ್ಯ ಪದೇ ಕಸ್ಮಿನ್ ಶುಕ್ಲೇ ಕೃಷ್ಣೇ ಪದೇ ಪುನಃ || ೩೧ ||

ಪಿಂಡೋ ದೇಯೋ ಮಯಾ ಮಾತರ್ಜಾನಾಸಿ ಪಿತರಂ ವದ |
ತಚ್ಛ್ರುತ್ವಾ ವಚನಂ ತಸ್ಯ ಭಾರದ್ವಾಜಸ್ಯ ಧೀಮತಃ || ೩೨ ||

ಶಾಂತೋವಾಚ ಪ್ರಸನ್ನಾಸ್ಯಾ ಪುತ್ರಂ ಶ್ರಾದ್ಧಪ್ರದಾಯಿನಂ |
ಭಾರದ್ವಾಜ ಮಹಾಪ್ರಾಜ್ಞ ಪಿಂಡಂ ಕೃಷ್ಣಾಯ ದೇಹಿ ಭೋಃ || ೩೩ ||

---

೩೦. ಆಗ ಆ ಪಾದವನ್ನು ಭೇದಿಸಿಕೊಂಡು, ಬಿಳುಪು ಮತ್ತು ಕಪ್ಪು ಬಣ್ಣದ ಎರಡು ಕೈಗಳು ಹೊರಗೆಬಂದುವು. ಆ ಹಸ್ತದ್ವಯವನ್ನು ನೋಡಿ ಭಾರದ್ವಾಜಮುನಿಯು ಅವುಗಳಲ್ಲಾವುದು ಪಿತೃಹಸ್ತವೆಂಬುದನ್ನು ನಿರ್ಣಯಿಸಲಾಗದೆ ಸಂಶಯಗ್ರಸ್ತನಾದನು.

೩೧-೩೩. ಅನಂತರ ಭಾರದ್ವಾಜನು ತನ್ನ ತಾಯಿಯಾದ ಶಾಂತಾದೇವಿಯನ್ನು ಕುರಿತು ಜನನಿಯೇ! ಈ ಎರಡು ಕೈಗಳಲ್ಲಿ ಕಶ್ಯಪನ ಹಸ್ತವಾವುದ್ದು? ಬಿಳಿಯದೇ? ಅಥವಾ ಕರಿಯದೇ? ನಾನು ಯಾವ ಹಸ್ತದಲ್ಲಿ ಪಿಂಡವನ್ನು ಹಾಕಬೇಕು? ತಂದೆಯ ಹಸ್ತವನ್ನು ತಿಳಿದಿದ್ದರೆ ನನಗೆ ನಿರ್ಧರವಾಗಿ ಹೇಳು ಎಂಬುದಾಗಿ ಕೇಳಿದನು.

ಜ್ಞಾನಿಯಾದ ಆ ಭಾರದ್ವಾಜನ ಮಾತನ್ನು ಕೇಳಿ ಪ್ರಸನ್ನಮುಖಳಾದ ಶಾಂತಾದೇವಿಯು ಮಹಾಜ್ಞಾನಿಯಾದ ಭಾರದ್ವಾಜನೇ! ಕಪ್ಪಗಿರುವ ಹಸ್ತಕ್ಕೆ ಪಿಂಡವನ್ನು ಕೊಡು ಎಂಬುದಾಗಿ ಶ್ರಾದ್ಧಮಾಡುತ್ತಿರುವ ಮಗನಿಗೆ ಹೇಳಿದಳು.

ಭಾರದ್ವಾಜಸ್ತತಃ ಪಿಂಡಂ ದಾತುಂ ಕೃಷ್ಣಾಯ ಚೋದ್ಯತಃ ।
ಶ್ವೇತೋ ದೃಶ್ಯೋಽಬ್ರವೀತ್ಪುತ್ರ ದೇಹಿ ಪುತ್ರೋ ಮಮೌರಸಃ ॥ ೩೪ ॥
ಕೃಷ್ಣೋಽಬ್ರವೀತ್ ಕ್ಷೇತ್ರಜಸ್ತ್ವಂ ತತೋ ಮೇ ದೇಹಿ ಪಿಂಡಕಂ ।
ಶುಕ್ಲೋಽಬ್ರವೀತ್ಸ್ವೈರಿಣೀಯಂ ಯತೋಽತಸ್ತ್ವಂ ಮಮೌರಸಃ ॥ ೩೫ ॥
ಸ್ವೈರಿಣೀತೋ ದದೌ ಚಾದೌ ಕ್ಷೇತ್ರಿಣೇ ಬೀಜಿನೇ ತತಃ ।
ತತೋ ಭಕ್ತ್ಯಾ ಮಹಾಭಾಗೇ ದತ್ವಾ ಪಿಂಡಾನ್ ಮಹಾಮತಿಃ ॥ ೩೬ ॥
ಕೃತಕೃತ್ಯಂ ನಿಜಾತ್ಮಾನಂ ಮೇನೇ ಪ್ರತ್ಯಕ್ಷಭಾಷಣಾತ್ ।
ಭೀಷ್ಮೋ ವಿಷ್ಣುಪದೇ ಶ್ರಾದ್ಧೇ ಆಹೂಯ ತು ಪಿತ್ರ್ಯಾನ್ ಸ್ವಕಾನ್ ॥ ೩೭ ॥
ಶ್ರಾದ್ಧಂ ಕೃತ್ವಾ ವಿಧಾನೇನ ಪಿಂಡದಾನಾಯ ಚೋದ್ಯತಃ ।
ಪಿತುರ್ವಿನಿರ್ಗತೌ ಹಸ್ತೌ ಗಯಾಶಿರಸಿ ಶಂತನೋಃ ॥ ೩೮ ॥

---

೩೪. ಬಳಿಕ ಭಾರದ್ವಾಜನು ಕೃಷ್ಣಹಸ್ತದಲ್ಲಿ ಪಿಂಡವನ್ನರ್ಪಿಸಲುದ್ಯುಕ್ತನಾದನು. ಆಗ ಶ್ವೇತಹಸ್ತವು ಪುತ್ರ! ನೀನು ನನ್ನ ಔರಸಕುಮಾರನು. ನನಗೆ ಪಿಂಡವನ್ನು ಕೊಡು ಎಂದು ಹೇಳಿತು.

೩೫. ಕೃಷ್ಣಹಸ್ತವು ನೀನು ನನ್ನ ಕ್ಷೇತ್ರಜನಾದಕಾರಣ ನನಗೇ ಪಿಂಡವನ್ನು ಕೊಡು ಎಂದು ಹೇಳಿತು. ಶ್ವೇತಹಸ್ತವು ಇವಳು ಸ್ವೈರಿಣಿಯಾದುದರಿಂದ ನೀನು ನನಗೆ ಔರಸನಾಗಿರುವೆಯೆಂದು ಹೇಳಿತು.

೩೬-೩೭. ಅದೆಲ್ಲವನ್ನೂ ಕೇಳಿ ಮಹಾಪ್ರಾಜ್ಞನಾದ ಭಾರದ್ವಾಜನು ಸ್ವೈರಿಣಿಯಲ್ಲಿ ತಾನು ಹುಟ್ಟಿದುದರಿಂದ ಆದಿಯಲ್ಲಿ ಕ್ಷೇತ್ರಿಯಾದ ಕೃಷ್ಣಹಸ್ತನಿಗೂ, ಅನಂತರ ಬೀಜದಾತನಾದ ಶ್ವೇತಹಸ್ತನಿಗೂ ಭಕ್ತಿಯಿಂದ ಪಿಂಡಪ್ರದಾನ ಮಾಡಿ ಪ್ರತ್ಯಕ್ಷವಾಗಿ ಪಿತೃಗಳು ಮಾತನಾಡಿದುದರಿಂದ ನಾನು ಕೃತಕೃತನಾದೆನೆಂದು ತಿಳಿದನು.

೩೭-೩೮. ಭೀಷ್ಮನು ವಿಷ್ಣುಪಾದದಲ್ಲಿ ಶ್ರಾದ್ಧಮಾಡಲು ತನ್ನ ಪಿತೃಗಳನ್ನು ಆಹ್ವಾನಿಸಿ ವಿಧಿವತ್ತಾಗಿ ಶ್ರಾದ್ಧಮಾಡಿ ಪಿಂಡಪ್ರದಾನಮಾಡಲು ಉದ್ಯುಕ್ತನಾದಾಗ ಗಯಾಶಿರಸ್ಸಿನಲ್ಲಿ ತಂದೆಯಾದ ಶಂತನುವಿನ ಹಸ್ತಗಳು ಹೊರಗೆ ಬಂದುವು.

ಭೀಷ್ಮಃ ಪಿಂಡಂ ದದೌ ಭೂಮೌ ಸಾಧಿಕಾರಃ ಕರೇ ಯತಃ ।
ಶಂತನುಃ ಪ್ರಾಹ ಸಂತುಷ್ಟಃ ಶಾಸ್ತ್ರಾರ್ಥೇ ನಿಶ್ಚಲೋ ಭವಾನ್ ॥ ೩೯ ॥

ತ್ರಿಕಾಲದರ್ಶೀ ಭವ ಚ ವಿಷ್ಣುಶ್ಚಾಂತೇ ಗತಿಸ್ತವ ।
ಸ್ವೇಚ್ಛಯಾ ಮರಣಂ ಚಾಸ್ತು ಇತ್ಯುಕ್ತ್ವಾ ಮುಕ್ತಿಮಾಗತಃ ॥ ೪೦ ॥

ರಾಮೋ ರುದ್ರಪದೇ ರಮ್ಯೇ ಪಿಂಡಾರ್ಪಣಕೃತೋದ್ಯಮಃ ।
ಪಿತಾ ದಶರಥಃ ಸ್ವರ್ಗಾತ್ ಪ್ರಸಾರ್ಯ ಕರಮಾಗತಃ ॥ ೪೧ ॥

ನಾದಾತ್ಪಿಂಡಂ ಕರೇ ರಾಮೋ ದದೌ ರುದ್ರಪದೇ ತತಃ ।
ಶಾಸ್ತ್ರಾರ್ಥಾತಿಕ್ರಮಾದ್ಭೀತೋ ರಾಮಂ ದಶರಥೋಬ್ರವೀತ್ ॥ ೪೨ ॥

---

೩೯. ಭೀಷ್ಮನಾದರೋ ಹಸ್ತದಲ್ಲಿ ಪಿಂಡವನ್ನು ಕೊಡಲು ಅಧಿಕಾರ ವಿಲ್ಲವೆಂದರಿತು ಭೂಮಿಯಲ್ಲಿಯೇ ಪಿಂಡಪ್ರದಾನ ಮಾಡಿದನು. ಆದರಿಂದ ಸಂತುಷ್ಟನಾದ ಶಂತನುವು ನೀನು ದೃಢನಾದ ಶಾಸ್ತ್ರಾರ್ಥ ತತ್ವಜ್ಞಾನವನ್ನು ಹೊಂದಿರುವೆಯೆಂದು ಮಗನಿಗೆ ಹೇಳಿದನು.

೪೦. ಅವನು ಮುಂದುವರಿಯುತ್ತಾ "ಪುತ್ರ! ನೀನು ತ್ರಿಕಾಲ ಜ್ಞಾನಿಯಾಗು! ಕೊನೆಯಲ್ಲಿ ನಿನಗೆ ವಿಷ್ಣುವು ಗತಿದಾಯಕನಾಗುವನು! ನಿನ್ನ ಇಚ್ಛಾನುಸಾರವಾಗಿ ಮರಣವು ಲಭಿಸಲಿ!" ಎಂಬುದಾಗಿ ಹೇಳಿ ಮೋಕ್ಷಕ್ಕೆ ಹೋದನು.

೪೧. ರಾಮನು ಮನೋಹರವಾದ ರುದ್ರಪದದಲ್ಲಿ ಪಿಂಡವನ್ನರ್ಪಿಸ ಬೇಕೆಂದು ಉದ್ಯುಕ್ತನಾದಾಗ ತಂದೆಯಾದ ದಶರಥನು ಕೈಯನ್ನು ಚಾಚಿಕೊಂಡು ಸ್ವರ್ಗದಿಂದ ಇಳಿದುಬಂದನು.

೪೨-೪೫. ರಾಮನು ಹಸ್ತದಲ್ಲಿ ಪಿಂಡವನ್ನು ಕೊಡಲಿಲ್ಲ- ಶಾಸ್ತ್ರಾರ್ಥ ವನ್ನತಿಕ್ರಮಿಸಬಾರದೆಂದು ತಿಳಿಸುವುದಕ್ಕಾಗಿ ಭಯಪಟ್ಟವನಂತೆ ನಟಿಸುತ್ತ ರುದ್ರಪದದಲ್ಲಿಯೇ ಪಿಂಡಪ್ರದಾನ ಮಾಡಿದನು.

ತಾರಿತೋಽಹಂ ತ್ವಯಾ ಪುತ್ರ ರುದ್ರಲೋಕೋ ಹ್ಯಭೂನ್ಮಮ ।
ಪದೇ ಪಿಂಡಪ್ರದಾನೇನ ಹಸ್ತೇ ತು ಸ್ವರ್ಗತಿರ್ನ ಹಿ ॥ ೪೩ ॥

ತ್ವಂ ಚ ರಾಜ್ಯಂ ಚಿರಂ ಕೃತ್ವಾ ಪಾಲಯಿತ್ವಾ ನಿಜಾಃ ಪ್ರಜಾಃ ।
ಯಜ್ಞಾನ್ ಸದಕ್ಷಿಣಾನ್ ಕೃತ್ವಾ ವಿಷ್ಣುಲೋಕಂ ಗಮಿಷ್ಯಸಿ ॥ ೪೪ ॥

ಸಹಾಯೋಧ್ಯಾಜನೈಃ ಸರ್ವೈಃ ಕೃಮಿಕೀಟಾದಿಭಿಃ ಸಹ ।
ಇತ್ಯುಕ್ತ್ವಾ ಸ ನೃಪೋ ರಾಮಂ ರುದ್ರಲೋಕಂ ಪರಂ ಯಯೌ ॥ ೪೫ ॥

ಕನಖಲೇ ಚ ಕೇದಾರೇ ನಾರಸಿಂಹೇ ಚ ವಾಮನೇ ।
ರಥಮಾರ್ಗೇ ಸಮಭ್ಯರ್ಚ್ಯ ಪಿತೄನ್ ಸರ್ವಾಂಶ್ಚ ತಾರಯೇತ್ ॥ ೪೬ ॥

ಗಯಾಶಿರಸಿ ಯಃ ಪಿಂಡಂ ಯೇಷಾಂ ನಾಮ್ನಾ ತು ನಿರ್ವಪೇತ್ ।
ನರಕಸ್ಥಾ ದಿವಂ ಯಾಂತಿ ಸ್ವರ್ಗಸ್ಥಾ ಮೋಕ್ಷಗಾಮಿನಃ ॥ ೪೭ ॥

---

ಅನಂತರ ದಶರಥನು ಪುತ್ರ! ನನಗೆ ರುದ್ರಲೋಕವಾಗಿದ್ದಿತು. ರುದ್ರ ಪದದಲ್ಲಿ ನೀನು ಮಾಡಿದ ಪಿಂಡಪ್ರದಾನದಿಂದ ನಾನು ಉತ್ತೀರ್ಣನಾದೆನು. ಹಸ್ತದಲ್ಲಿ ಪಿಂಡದಾನಮಾಡಿದರೆ ಸ್ವರ್ಗಪ್ರಾಪ್ತಿಯಾಗುವುದಿಲ್ಲ. ನೀನು ಬಹುಕಾಲ ರಾಜ್ಯಭಾರಮಾಡಿ ನಿನ್ನ ಪ್ರಜೆಗಳನ್ನು ರಕ್ಷಿಸಿ, ದಕ್ಷಿಣೆಸಹಿತವಾದ ಯಜ್ಞಗಳನ್ನು ಮಾಡಿ ಕ್ರಿಮಿ, ಕೀಟಾದಿಗಳು ಮತ್ತು ಅಯೋಧ್ಯೆಯ ಪ್ರಜೆಗಳಸಹಿತನಾಗಿ ವಿಷ್ಣುಲೋಕಕ್ಕೆ ಹೋಗುವೆಯೆಂದು ರಾಮನಿಗೆ ಹೇಳಿದನು. ಅನಂತರ ದಶರಥನು ಉತ್ತಮವಾದ ರುದ್ರಲೋಕಕ್ಕೆ ಹೋದನು.

೪೬. ಕನಖಲ, ಕೇದಾರ, ನಾರಸಿಂಹ, ವಾಮನ ಮತ್ತು ರಥಮಾರ್ಗಗಳೆಂಬ ಕ್ಷೇತ್ರಗಳಲ್ಲಿ ಸಕಲ ಪಿತೃಗಳನ್ನೂ ಪೂಜಿಸಿ ಉದ್ಧರಿಸಬೇಕು.

೪೭. ಗಯಾಶಿರಸ್ಸಿನಲ್ಲಿ ಪಿತೃಗಳ ನಾಮಸಂಕೀರ್ತನ ಪೂರ್ವಕವಾಗಿ ಪಿಂಡದಾನಮಾಡಿದರೆ ಆ ಪಿತೃಗಳು ನರಕದಲ್ಲಿದ್ದರೆ ಸ್ವರ್ಗಕ್ಕೂ, ಸ್ವರ್ಗದಲ್ಲಿದ್ದರೆ ಮೋಕ್ಷಕ್ಕೂ ಹೋಗುವರು.

ಗಯಾಶಿರಸಿ ಯಃ ಪಿಂಡಂ ಶಮೀಪತ್ರಪ್ರಮಾಣತಃ |
ಕಂದಮೂಲಫಲಾದ್ಯೈರ್ವಾ ದದ್ಯಾತ್ಸ್ವರ್ಗಂ ನಯೇತ್ಪಿತೄನ್ || ೪೮ ||

ಪದಾನಿ ಯತ್ರ ದೃಶ್ಯಂತೇ ವಿಷ್ಣ್ವಾದೀನಾಂ ತದಗ್ರತಃ |
ಶ್ರಾದ್ಧಂ ಕೃತ್ವಾ ಪದೇ ಯೇಷಾಂ ತೇಷಾಂ ಲೋಕಾನ್ನಯೇತ್ಪಿತೄನ್ ||

ಪರ್ವತ್ರ ಮುಂಡಪೃಷ್ಠಾದ್ರಿಃ ಪದೈರೇಭಿಃ ಸ ಲಕ್ಷಿತಃ |
ಪ್ರಯಾಂತಿ ಪಿತರಸ್ತತ್ರ ಪೂಜಿತಾ ಬ್ರಹ್ಮಣಃ ಪದಂ || ೫೦ ||

ಗಯಾಸುರಸ್ಯ ತು ಶಿರೋ ಗದಯಾ ಯದ್ದ್ವಿಧಾ ಕೃತಂ |
ಯತಃ ಪ್ರಕ್ಷಾಲಿತಂ ತೀರ್ಥೇ ಗದಾಲೋಲಸ್ತದಾ ಸ್ಮೃತಃ || ೫೧ ||

---

೪೮. ಗಯಾಶಿರಸ್ಸಿನಲ್ಲಿ ಶಮೀಪತ್ರಪರಿಮಿತವಾದ ಪಿಂಡವನ್ನು ಅನ್ನದಿಂದ ಅಥವಾ ಕಂದಮೂಲಫಲಾದಿಗಳಿಂದಲಾದರೂ ದಾನಮಾಡುವವನು ಪಿತೃಗಳನ್ನು ಸ್ವರ್ಗಕ್ಕೆ ಒಯ್ಯುವನು.

೪೯. ವಿಷ್ಣು ಮುಂತಾದ ದೇವತೆಗಳ ಪಾದಗಳು ದೃಷ್ಟವಾಗಿರುವ ಸ್ಥಳಗಳಲ್ಲಿ ಅವುಗಳ ಮುಂದೆ ಶ್ರಾದ್ಧಮಾಡಿ ಯಾವ ಯಾವ ದೇವತೆಗಳ ಪಾದದಲ್ಲಿ ಪಿಂಡಪ್ರದಾನ ಮಾಡುವನೋ ಅವನ ಪಿತೃಗಳು ಆಯಾಯಾ ದೇವತೆಗಳ ಲೋಕಗಳಿಗೆ ಹೋಗುವರು.

೫೦. ಮುಂಡಪೃಷ್ಠ ಪರ್ವತವು ಎಲ್ಲಾಕಡೆಯಲ್ಲಿಯೂ ಈ ಪಾದಗಳಿಂದ ಯುಕ್ತವಾಗಿದೆ. ಅಲ್ಲಿ ಪೂಜಿಸಲ್ಪಟ್ಟ ಪಿತೃಗಳು ಬ್ರಹ್ಮಪದಕ್ಕೆ ಹೋಗುವರು.

೫೧. ವಿಷ್ಣುಗದೆಯಿಂದ ಛೇದಿಸಲ್ಪಟ್ಟು ಎರಡುಭಾಗವಾದ ಗಯಾಸುರನ ಶಿರಸ್ಸು ಈ ತೀರ್ಥದಲ್ಲಿ ತೊಳೆಯಲ್ಪಟ್ಟ ಕಾರಣ ಇದು ಗದಾಲೋಲವೆಂದು ಅಂದಿನಿಂದ ಪ್ರಸಿದ್ಧವಾಯಿತು.

ಕ್ರೌಂಚರೂಪೇಣ ಹಿ ಮುನಿರ್ಮುಂಡಪೃಷ್ಠೇ ತಪೋಽಕರೋತ್ ।
ತಸ್ಯ ಪಾದಾಂಕಕೋ ಯಸ್ಮಾತ್ ಕ್ರೌಂಚಪಾದಃ ಸ್ಮೃತಸ್ತತಃ ॥ ೫೨ ॥

ವಿಷ್ಣ್ವಾದೀನಾಂ ಪದಾನ್ಯತ್ರ ಲಿಂಗರೂಪಸ್ಥಿತಾನಿ ಚ ।
ದೇವಾದಿತರ್ಪಣಂ ಕೃತ್ವಾ ಶ್ರಾದ್ಧಂ ರುದ್ರಪದಾದಿತಃ ॥ ೫೩ ॥

ಚತುರ್ಥದಿವಸೇ ಕೃತ್ಯಮೇತತ್ ಕೃತ್ವಾ ತು ಮೋಹಿನಿ ।
ಪೂತಃ ಕರ್ಮಾಧಿಕಾರೀ ಸ್ಯಾಚ್ಛ್ರಾದ್ಧಕೃದ್ಬ್ರಹ್ಮಲೋಕಭಾಕ್ ॥ ೫೪ ॥

ಶಿಲಾಸ್ಥಿತೇಷು ತೀರ್ಥೇಷು ಸ್ನಾತ್ವಾ ಕೃತ್ವಾಥ ತರ್ಪಣಂ ।
ಶ್ರಾದ್ಧಂ ಸಪಿಂಡಕಂ ಯೇಷಾಂ ಬ್ರಹ್ಮಲೋಕಂ ಪ್ರಯಾಂತಿ ತೇ ॥ ೫೫ ॥

---

೫೨. ಮುಂಡಪೃಷ್ಠದಲ್ಲಿ ಮುನಿಯು ಕ್ರೌಂಚಪಕ್ಷಿಯ ರೂಪದಿಂದ ತಪಸ್ಸನ್ನು ಮಾಡಿದನು. ಅವನು ನಿಂತಸ್ಥಳವು ಕ್ರೌಂಚಪಾದವೆಂದು ಪ್ರಸಿದ್ಧವಾಗಿದೆ.

೫೩. ಇಲ್ಲಿರುವ ವಿಷ್ಣ್ವಾದಿಗಳ ಪಾದಗಳು ಮತ್ತು ಲಿಂಗಗಳಲ್ಲಿ ದೇವಾದಿತರ್ಪಣವನ್ನು ಮಾಡಿ ರುದ್ರಪದಾದಿಯಾಗಿ ಶ್ರಾದ್ಧವನ್ನು ಮಾಡಬೇಕು.

೫೪. ಮೋಹಿನೀ! ನಾಲ್ಕನೆಯ ದಿವಸದ ಕರ್ತವ್ಯವಾದ ಉಕ್ತವಿಧಾನವನ್ನಾಚರಿಸಿ ಪರಿಶುದ್ಧನಾದವನು ಕರ್ಮಾಧಿಕಾರಿಯಾಗುವನು. ಉಕ್ತತೀರ್ಥಗಳಲ್ಲಿ ಶ್ರಾದ್ಧಮಾಡಿದವನು ಬ್ರಹ್ಮಲೋಕವನ್ನು ಹೊಂದುವನು.

೫೫. ಶಿಲಾಸ್ಥಿತವಾದ ತೀರ್ಥಗಳಲ್ಲಿ ಸ್ನಾನ ತರ್ಪಣಗಳನ್ನು ಮಾಡಿ ಪಿತೃಶ್ರಾದ್ಧವನ್ನು ಪಿಂಡಪ್ರದಾನ ಪೂರ್ವಕವಾಗಿಮಾಡಿದರೆ ಆ ಪಿತೃಗಳು ಬ್ರಹ್ಮಲೋಕಕ್ಕೆ ಹೋಗುವರು.

ಸ್ಥಾಸ್ಯಂತಿ ಚ ರಮಿಷ್ಯಂತಿ ಯಾವದಾಭೂತಸಂಪ್ಲವಂ ।
ದೇಹಂ ತ್ಯಕ್ತ್ವಾ ಶಿಲಾಪೃಷ್ಠೇ ಸ್ವೇದಜಾಂಡಜರಾಯುಜಾಃ ॥ ೫೬ ॥
ಗಚ್ಛಂತಿ ವಿಷ್ಣುಸಾಯುಜ್ಯಂ ಕುಲೈಃ ಸಪ್ತಶತೈಃ ಸಹ ॥ ೫೭ ॥

ಇತಿ ಶ್ರೀನಾರದೀಯಮಹಾಪುರಾಣೋತ್ತರಭಾಗೇ ಮೋಹಿನೀ
ವಸುಸಂವಾದೇ ಗಯಾಮಾಹಾತ್ಮ್ಯೇ ವಿಷ್ಣ್ವಾದಿಪದೇ
ಪಿಂಡದಾನಮಾಹಾತ್ಮ್ಯಕಥನಂ ನಾಮ
ಷಟ್ಚತ್ವಾರಿಂಶತ್ತಮೋಽಧ್ಯಾಯಃ

---

೫೬. ಶಿಲಾಪೃಷ್ಠದಲ್ಲಿ ದೇಹತ್ಯಾಗಮಾಡಿದ ಕ್ರಿಮಿ, ಪಕ್ಷಿ ಮನುಷ್ಯಾದಿಗಳು ಪ್ರಳಯಪರ್ಯಂತವಾಗಿ ಬ್ರಹ್ಮಲೋಕದಲ್ಲಿದ್ದು ಆನಂದಿಸುವರು.

೫೭. ಅನಂತರ ಅವರು ಏಳುನೂರು ಕುಲಸಹಿತವಾಗಿ ವಿಷ್ಣುಸಾಯುಜ್ಯವನ್ನು ಹೊಂದುವರು.

ಇಂತು ಶ್ರೀನಾರದೀಯ ಪುರಾಣೋತ್ತರಭಾಗದಲ್ಲಿ ಮೋಹಿನೀ ವಸುಸಂವಾದ
ದಲ್ಲಿನ ಗಯಾಮಾಹಾತ್ಮ್ಯೆಯ ನಿರೂಪಣೆಯಲ್ಲಿ ವಿಷ್ಣುಪಾದಾದಿಗಳಲ್ಲಿ
ಪಿಂಡದಾನ ಮಹಿಮಾಕಥನವೆಂಬ ನಲವತ್ತಾರನೆಯ
ಅಧ್ಯಾಯವು ಮುಗಿದುದು.



# ಸಪ್ತಚತ್ವಾರಿಂಶತ್ತಮೋಽಧ್ಯಾಯಃ

ವಸುರುವಾಚ

ಪಂಚಮೇಽಹ್ನಿ ಗದಾಲೋಲೇ ಕೃತ್ವಾ ಸ್ನಾನಾದಿಪೂರ್ವವತ್ ।
ಶ್ರಾದ್ಧಂ ಸಪಿಂಡಕಂ ಕುರ್ಯಾತ್ತತೋಽಕ್ಷಯವಟೇ ನರಃ ॥ ೧ ॥

ತತ್ರ ಶ್ರಾದ್ಧಾದಿಕಂ ಕೃತ್ವಾ ಪಿತೄನ್ ಬ್ರಹ್ಮಪುರಂ ನಯೇತ್ ।
ಬ್ರಹ್ಮಪ್ರಕಲ್ಪಿತಾನ್ ವಿಪ್ರಾನ್ ಭೋಜಯೇತ್ಪೂಜಯೇದಥ ॥ ೨ ॥

ಕೃತಶ್ರಾದ್ಧೋಽಕ್ಷಯವಟೇ ಅನೇನೈವ ಪ್ರಯತ್ನತಃ ।
ದೃಷ್ಟ್ವಾ ನತ್ವಾಥ ಸಂಪೂಜ್ಯ ವಟೇ ಪಂಚ ಸಮಾಹಿತಂ ॥ ೩ ॥

---

## ನಲವತ್ತೇಳನೆಯ ಅಧ್ಯಾಯ

೧-೨. ವಸುವು ಹೇಳಿದನು :—ಐದನೆಯ ದಿವಸ ಗದಾಲೋಲತೀರ್ಥದಲ್ಲಿ ಎಂದಿನಂತೆ ಸ್ನಾನಾದಿಗಳನ್ನು ಮಾಡಿ ಪಿಂಡಪ್ರದಾನಸಹಿತ ಶ್ರಾದ್ಧವನ್ನು ಮಾಡಬೇಕು.

ಅನಂತರ ಅಕ್ಷಯವಟದಲ್ಲಿ ಶ್ರಾದ್ಧಮಾಡಿದರೆ ಆ ಮನುಷ್ಯನು ಪಿತೃಗಳನ್ನು ಬ್ರಹ್ಮಸದನಕ್ಕೆ ಕರೆದುಕೊಂಡುಹೋಗುವನು. ಅಕ್ಷಯವಟದಲ್ಲಿ ಶ್ರಾದ್ಧಮಾಡಿದ ಮನುಷ್ಯನು ಗಯೆಯಲ್ಲಿರುವ ಬ್ರಹ್ಮನಿರತರಾದ ಬ್ರಾಹ್ಮಣರನ್ನು ಪೂಜಿಸಿ ಭೋಜನಮಾಡಿಸಬೇಕು.

೩-೪. ಅನಂತರ ಅವನು ಪ್ರಯತ್ನಪೂರ್ವಕವಾಗಿ ವಟವೃಕ್ಷದಲ್ಲಿ ಸನ್ನಿಹಿತನಾದ ದೇವನನ್ನು ಸಂದರ್ಶಿಸಿ ನಮಸ್ಕಾರಮಾಡಿ ಭಕ್ತಿಯಿಂದ ಪೂಜಿಸಿದರೆ ಸನಾತನವೂ ಅಕ್ಷಯವೂ ಆದ ಬ್ರಹ್ಮಲೋಕವು ಪಿತೃಗಳಿಗೆ ಲಭಿಸುವುದು.

ಪಿತೄನ್ನಯೇದ್ಬ್ರಹ್ಮಪುರಮಕ್ಷಯಂ ತು ಸನಾತನಂ ।
ಗದಾಲೋಲೇ ಮಹಾತೀರ್ಥೇ ಗದಾಪ್ರಕ್ಷಾಲನೇ ವರೇ ॥ ೪ ॥

ಸ್ನಾನಂ ಕರೋಮಿ ಶುದ್ಧ್ಯರ್ಥಮಕ್ಷಯ್ಯಾಯ ಸುಖಾಪ್ತಯೇ ।
ಏಕಾಂತರೇ ವಟಸ್ಯಾಗ್ರೇ ಯಃ ಶೇತೇ ಯೋಗನಿದ್ರಯಾ ॥ ೫ ॥

ಬಾಲರೂಪಕೃತೇ ತಸ್ಮೈ ನಮಸ್ತೇ ಯೋಗಶಾಯಿನೇ ।
ಸಂಸಾರವೃಕ್ಷಶಸ್ತ್ರಾಯಾಶೇಷಪಾಪಕ್ಷಯಾಯ ಚ ॥ ೬ ॥

ಅಕ್ಷಯ್ಯಬ್ರಹ್ಮದಾತ್ರೇ ಚ ನಮೋಽಕ್ಷಯ್ಯವಟಾಯ ವೈ ।
ಕಲೌ ಮಾಹೇಶ್ವರಾ ಲೋಕಾ ಯೇನ ತಸ್ಮಾದ್ಗದಾಧರಃ ॥ ೭ ॥

ಲಿಂಗರೂಪೋಽಭವದ್ಯಸ್ಮಾನ್ನತ್ವಾ ತಂ ಪ್ರಪಿತಾಮಹಂ ।
ನಯೇತ್ಪಿತೄನ್ ಬ್ರಹ್ಮಪದಂ ನತ್ವಾ ತಂ ಪ್ರಪಿತಾಮಹಂ ॥ ೮ ॥

---

೪-೬. ಗದೆಯನ್ನು ತೊಳೆದ, ಉತ್ತಮವಾದ ಗದಾಲೋಲವೆಂಬ ಮಹಾತೀರ್ಥದಲ್ಲಿ ಶುದ್ಧಿಗಾಗಿಯೂ, ಶಾಶ್ವತಸುಖವುಂಟಾಗುವುದಕ್ಕೂ ಸ್ನಾನ ಮಾಡುತ್ತೇನೆ ಎಂದು ಸಂಕಲ್ಪಿಸಿ ವಟವೃಕ್ಷದ ಅಗ್ರಭಾಗದಲ್ಲಿ ಏಕಾಂತವಾಗಿ ಯೋಗನಿದ್ರೆಯಿಂದ ಮಲಗಿರುವ, ಬಾಲರೂಪಧಾರಿಯೂ, ಯೋಗಶಾಯಿಯೂ, ಸಂಸಾರವೆಂಬ ವೃಕ್ಷಕ್ಕೆ ಶಸ್ತ್ರದಂತಿರುವವನು, ಸಮಸ್ತ ಪಾಪಪರಿಹಾರಕನೂ ಆದ ಸ್ವಾಮಿಗೆ ನಮಸ್ಕಾರ ಎಂದು ಹೇಳಿ ವಂದಿಸಬೇಕು.

೬-೧೦. ಶಾಶ್ವತವಾದ ಆನಂದವನ್ನು ಕೊಡುವಂತಹ ಅಕ್ಷಯವಟಕ್ಕೆ ನಮಸ್ಕಾರ ಎಂಬುದಾಗಿ ನಮಿಸಬೇಕು. ಕಲಿಯುಗದಲ್ಲಿ ಜನರು ಮಹೇಶ್ವರ ಭಕ್ತರಾದ ಕಾರಣ ಗದಾಧರನು ಲಿಂಗರೂಪನಾದನು.

ಆ ಪ್ರಪಿತಾಮಹನನ್ನು ವಂದಿಸಿದರೆ ಪಿತೃಗಳಿಗೆ ಬ್ರಹ್ಮಲೋಕ ಪ್ರಾಪ್ತಿಯಾಗುವುದರಿಂದ ಅವನನ್ನು ವಂದಿಸಬೇಕು.

ಹೇತಿಂ ಹತ್ವಾಽಸುರಂ ತಸ್ಯ ಶಿರಶ್ಚೈವ ದ್ವಿಧಾ ಕೃತಂ ।
ಗದಯಾ ಸಾ ಗದಾ ಯತ್ರ ಕ್ಷಾಲಿತಾ ಪ್ರಭುಣಾಭವತ್ ॥ ೯ ॥

ಗದಾಲೋಲಮಿತಿಖ್ಯಾತಂ ತತ್ತೀರ್ಥಪ್ರವರಂ ಹ್ಯಭೂತ್ ।
ಹೇತೀ ರಕ್ಷೋ ಬ್ರಹ್ಮಪುತ್ರಸ್ತಪಸ್ತೇಪೇಽದ್ಭುತಂ ಮಹತ್ ॥ ೧೦ ॥

ಬ್ರಹ್ಮಾದೀಂಸ್ತಪಸಾ ತುಷ್ಟಾನ್ ವರಂ ವವ್ರೇ ವರಪ್ರದಾನ್ ।
ದೈತ್ಯಾದಿಭಿಶ್ಚ ಶಸ್ತ್ರಾದ್ಯೈರ್ವಿವಿಧೈರ್ಮನುಜೈರಪಿ ॥ ೧೧ ॥

ಕೃಷ್ಣಾಂಶೇನಾದಿಚಕ್ರಾದ್ಯೈರವಧ್ಯಃ ಸ್ಯಾಂ ಮಹಾಬಲಃ ।
ತಥೇತ್ಯುಕ್ತ್ವಾಂತರ್ಹಿತಾಸ್ತೇ ಹೇತಿರ್ದೇವಾನಥಾಜಯತ್ ॥ ೧೨ ॥

---

ಹೇತಿ ಎಂಬ ಅಸುರನನ್ನು ಕೊಂದು ಗದೆಯಿಂದ ಅವನ ಶಿರಸ್ಸನ್ನು ಎರಡು ಭಾಗಮಾಡಿ ಆ ಗದೆಯನ್ನು ಸ್ವಾಮಿಯು ಈ ತೀರ್ಥದಲ್ಲಿ ತೊಳೆದುದರಿಂದ ಇದು ಗದಾಲೋಲವೆಂದು ಪ್ರಸಿದ್ಧವಾಗಿ ಉತ್ತಮತೀರ್ಥವಾಯಿತು.

ಬ್ರಹ್ಮಪುತ್ರನಾದ ಹೇತಿಯೆಂಬ ರಾಕ್ಷಸನು ಅದ್ಭುತವಾದ ಮಹಾತಪಸ್ಸನ್ನು ಮಾಡಿದನು.

೧೧-೧೨. ಅದರಿಂದ ಸಂತುಷ್ಟರಾಗಿ ವರಕೊಡಲು ಸನ್ನಿಹಿತರಾಗಿ ಬಂದ ಬ್ರಹ್ಮಾದಿಗಳನ್ನು ಹೇತಿಯು " ದೇವತೆಗಳಿರಾ ! ದೈತ್ಯಾದಿಗಳು, ಶಸ್ತ್ರ ಮುಂತಾದುವು, ನಾನಾವಿಧ ಮನುಷ್ಯರು, ಕೃಷ್ಣಾಂಶವಾದ ಆದಿಚಕ್ರಾದಿಗಳು, ಇವುಗಳಿಂದ ಸಂಹರಿಸಲಶಕ್ಯನಾಗಿ ನಾನು ಮಹಾಬಲಿಷ್ಠನಾಗಿರುವಂತೆ ವರವನ್ನು ಕೊಡಿರಿ " ಎಂಬುದಾಗಿ ವರವನ್ನು ಕೇಳಿಕೊಂಡನು. ಆ ದೇವತೆಗಳು ಹಾಗೆಯೇ ಆಗಲೆಂದು ವರವನ್ನು ಕೊಟ್ಟು ಅಂತರ್ಧಾನರಾದರು. ಬಳಿಕ ಹೇತಿಯು ದೇವತೆಗಳನ್ನು ಜಯಿಸಿದನು.

ಇಂದ್ರತ್ವಮಕರೋದ್ಧೇತಿಸ್ತದಾ ಬ್ರಹ್ಮಹರಾದಯಃ ।
ದೇವಾ ಹರಿಂ ಪ್ರಪನ್ನಾಸ್ತಮೂಚುರ್ಹೇತಿಂ ಜಹೀತಿ ಚ ॥ ೧೩ ॥

ಊಚೇ ಹರಿರವಧ್ಯೋಽಯಂ ಹೇತಿರ್ದೇವಾಃ ಸುರಾಸುರೈಃ ।
ಬ್ರಹ್ಮಾಸ್ತ್ರಂ ಮೇ ಪ್ರಯಚ್ಛಧ್ವಂ ಹೇತಿಂ ಹನ್ಯಾಂ ಹಿ ಯೇನ ತಂ ॥೧೪॥

ಇತ್ಯುಕ್ತಾಸ್ತೇ ತತೋ ದೇವಾ ವಿಷ್ಣವೇ ತಾಂ ಗದಾಂ ದದುಃ
ಉಪೇಂದ್ರ ತ್ವಂ ಜಹೀತಿ ಚ ಹೇತಿಂ ಪ್ರೋಚುರಜಾದಯಃ ॥ ೧೫ ॥

ದಧಾರ ತಾಂ ಗದಾಮಾದೌ ದೇವೈರುಕ್ತೋ ಗದಾಧರಃ ।
ಗದಯಾ ಹೇತಿಮಾಹತ್ಯ ದೇವೇಭ್ಯಸ್ತ್ರಿದಿವಂ ದದೌ ॥ ೧೬ ॥

ಉಪೋಷಿತೋಽಥ ಗಾಯತ್ರೀತೀರ್ಥೇ ಮಹಾನದೀಸ್ಥಿತೇ ।
ಗಾಯತ್ರ್ಯಾಃ ಪುರತಃ ಸ್ನಾತಸ್ತತಃ ಸಂಧ್ಯಾಂ ಸಮಾಚರೇತ್ ॥ ೧೭ ॥

---

೧೩. ಅನಂತರ ಅವನು ಇಂದ್ರನ ಆಧಿಪತ್ಯವನ್ನು ನಡೆಸಿದನು. ಆಗ ಬ್ರಹ್ಮ, ರುದ್ರಾದಿದೇವತೆಗಳು ಹರಿಗೆ ಶರಣಾಗತರಾಗಿ ಹೇತಿಯನ್ನು ಸಂಹರಿಸಬೇಕೆಂದು ಕೇಳಿಕೊಂಡರು.

೧೪. ದೇವತೆಗಳಿರಾ ! ಈ ಹೇತಿಯನ್ನು ದೇವದೈತ್ಯರಾರೂ ಕೊಲ್ಲಲು ಸಾಧ್ಯವಿಲ್ಲ. ನೀವು ಬ್ರಹ್ಮಾಸ್ತ್ರವನ್ನು ತಂದುಕೊಡಿ. ಆದರಿಂದ ಅವನನ್ನು ಕೊಲ್ಲುವೆನು.

೧೫. ಎಂದು ಹೇಳಲು ಅದನ್ನು ಕೇಳಿ ದೇವತೆಗಳು ವಿಷ್ಣುವಿಗೆ ಆ ಗದೆಯನ್ನು ಕೊಟ್ಟು "ಉಪೇಂದ್ರನೇ ! ನೀನು ಹೇತಿಯನ್ನು ಸಂಹರಿಸು" ಎಂಬುದಾಗಿ ಬ್ರಹ್ಮಾದಿಗಳು ಹರಿಗೆ ಹೇಳಿದರು.

೧೬. ದೇವತೆಗಳ ಆ ಮಾತನ್ನು ಕೇಳಿ ಕೂಡಲೇ ಆ ಗದೆಯನ್ನು ಸ್ವೀಕರಿಸಿ ಗದಾಧರನು ಅದರಿಂದಲೇ ಹೇತಿಯನ್ನು ಸಂಹರಿಸಿ ದೇವತೆಗಳಿಗೆ ಸ್ವರ್ಗಲೋಕವನ್ನು ಕೊಟ್ಟನು.

೧೭. ಅನಂತರ ಮಹಾನದಿಯಲ್ಲಿರುವ ಗಾಯತ್ರೀತೀರ್ಥದ ಸನ್ನಿಧಾನದಲ್ಲಿ ವಾಸಮಾಡಿ ಅಲ್ಲಿ ಸ್ನಾನಸಂಧ್ಯಾವಂದನೆಗಳನ್ನು ಮಾಡಬೇಕು.

ಶ್ರಾದ್ಧಂ ಸಪಿಂಡಕಂ ಕೃತ್ವಾ ನಯೇದ್ಬ್ರಾಹ್ಮಣಾಂ ಕುಲಂ ।
ತೀರ್ಥೇ ಸಮುದ್ಯತೇ ಸ್ನಾತ್ವಾ ಸಾವಿತ್ರ್ಯಾಃ ಪುರತೋ ನರಃ ॥ ೧೮ ॥

ಸಂಧ್ಯಾಮುಪಾಸ್ಯ ಮಧ್ಯಾಹ್ನೇ ನಯೇತ್ಪಿತೄನ್ ವಿಧಿಕ್ಷಯಂ ।
ಪ್ರಾಚೀಸರಸ್ವತೀಸ್ನಾತಃ ಸರಸ್ವತ್ಯಾಸ್ತತೋಽಗ್ರತಃ ॥ ೧೯ ॥

ಸಂಧ್ಯಾಮುಪಾಸ್ಯ ಸಾಯಾಹ್ನೇ ನಯೇತ್ಸರ್ವಜ್ಞತಾಂ ಕುಲಂ ।
ಬಹುಜನ್ಮಕೃತಾತ್ಸಂಧ್ಯಾ ಲೋಪಪಾಪಾದ್ವಿಶುಧ್ಯತಿ ॥ ೨೦ ॥

ವಿಶಾಲಾಯಾಂ ಲಿಲೇಹಾನೇ ತೀರ್ಥೇ ಚ ಭರತಾಶ್ರಮೇ ।
ಪದಾಂಕಿತೇ ಮುಂಡಪೃಷ್ಠೇ ಗದಾಧರಸಮೀಪತಃ ॥ ೨೧ ॥

ತೀರ್ಥ ಆಕಾಶಗಂಗಾಯಾಂ ಗಿರಿಕರ್ಣಮುಖೇಷು ಚ ।
ಶ್ರಾದ್ಧದಃ ಪಿಂಡದೋ ಬ್ರಹ್ಮಲೋಕಂ ಪಿತೃಶತಂ ನಯೇತ್ ॥ ೨೨ ॥

---

೧೮-೧೯. ಬಳಿಕ ಅಲ್ಲಿ ಸಪಿಂಡಶ್ರಾದ್ಧವಾಡಿದರೆ ಅವನ ವಂಶಕ್ಕೇ ಬ್ರಹ್ಮಜ್ಞಾನವುಂಟಾಗುವುದು. ಸಾವಿತ್ರೀದೇವಿಯ ಸನ್ನಿಧಾನದಲ್ಲಿ ಸಮುದ್ಯತ ತೀರ್ಥದಲ್ಲಿ ಸ್ನಾನವಮಾಡಿ ಮನುಜನು ಮಾಧ್ಯಾಹ್ನಿಕ ಸಂಧ್ಯಾವಂದನೆಯನ್ನು ಮಾಡಿದರೆ ಪಿತೃಗಳ ಪಾಪಪರಿಹಾರವಾಗುವುದು.

೧೯-೨೦. ಪೂರ್ವದಿಕ್ಕಿನಲ್ಲಿರುವ ಸರಸ್ವತೀ ನದಿಯಲ್ಲಿ ಸರಸ್ವತೀ ದೇವಿಯ ಸನ್ನಿಧಾನದಲ್ಲಿ ಸಾಯಂಕಾಲದಲ್ಲಿ ಸಂಧ್ಯೋಪಾಸನೆಯನ್ನು ಮಾಡಿದರೆ ಅವರ ವಂಶದವರೆಲ್ಲರೂ ಸರ್ವಜ್ಞರಾಗುವರು. ಆದರಿಂದ ಬಹುಜನ್ಮಗಳಲ್ಲಿ ಸಂಧ್ಯಾವಂದನೆ ಲೋಪವಮಾಡಿದ ಪಾಪಗಳು ಪರಿಹಾರವಾಗುತ್ತವೆ.

೨೧-೨೨. ವಿಶಾಲೆ, ಭರತಾಶ್ರಮ, ಲಿಲೇಹಾನತೀರ್ಥ, ಪಾದದಿಂದ ಅಂಕಿತವಾದ ಮುಂಡಪೃಷ್ಠಪರ್ವತ, ಗದಾಧರನ ಸನ್ನಿಧಾನ, ಆಕಾಶಗಂಗೆ ಯೆಂಬ ತೀರ್ಥ ಮತ್ತು ಗಿರಿಕರ್ಣಮುಖ ಇವುಗಳಲ್ಲಿ ಪಿಂಡಪ್ರದಾನಪೂರ್ವಕ ಶ್ರಾದ್ಧವಮಾಡುವವನು ನೂರು ಪಿತೃಗಳನ್ನು ಬ್ರಹ್ಮಲೋಕಕ್ಕೆ ಒಯ್ಯುವನು.

ಸ್ನಾತೋ ಗೋದಾವೈತರಣ್ಯಾಂ ತ್ರಿಃಸಪ್ತಕುಲಮುದ್ಧರೇತ್ ।
ದೇವನದ್ಯಾಂ ಗೋಪ್ರಚಾರೇ ತಥಾ ಮಾನಸಕೇ ಪದೇ　　॥ ೨೩ ॥

ಪುಷ್ಕರಿಣ್ಯಾಂ ಗದಾಲೋಲೇ ತೀರ್ಥೇ ಚಾಮರಕೇ ತಥಾ ।
ಕೋಟಿತೀರ್ಥೇ ರುಕ್ಮಕುಂಡೇ ಪಿಂಡದಃ ಸ್ವರ್ಣಯೇತ್ಪಿತೄನ್　　॥ ೨೪ ॥

ಮಾರ್ಕಂಡೇಯೇಶಕೋಟೀಶೌ ನತ್ವಾ ಸ್ಯಾತ್ಪಿತೃತಾರಕಃ ।
ತಥಾ ಪಾಂಡುಶಿಲಾಯಾಸ್ತು ಪುಣ್ಯದಾಯಾಃ ಸುಲೋಚನೇ　　॥ ೨೫ ॥

ದೃಷ್ಟಿಮಾತ್ರೇಣ ಸಂಪೂತಾನ್ನರಕಸ್ಥಾನ್ ದಿವಂ ನಯೇತ್ ।
ಇತ್ಯುಕ್ತ್ವಾ ಪ್ರಯಯೌ ಪಾಂಡುಃ ಶಾಶ್ವತಂ ಪದಮವ್ಯಯಂ　　॥ ೨೬ ॥

ಘೃತಕುಲ್ಯಾ ಮಧುಕುಲ್ಯಾ ದೇವಿಕಾ ಚ ಮಹಾನದೀ ।
ಶಿಲಾಯಾಂ ಸಂಗತಾ ತತ್ರ ಮಧುಸ್ರಾವಾ ಪ್ರಕೀರ್ತಿತಾ　　॥ ೨೭ ॥

---

೨೩-೨೪. ಗೋದಾವೈತರಣಿಯಲ್ಲಿ ಸ್ನಾನಮಾಡುವವನು ಇಪ್ಪತ್ತೊಂದು ಕುಲಗಳನ್ನುದ್ಧರಿಸುವನು. ದೇವನದಿ, ಗೋಪ್ರಚಾರ, ಮಾನಸತೀರ್ಥ, ಪುಷ್ಕರಿಣೀ, ಗದಾಲೋಲತೀರ್ಥ, ಚಾಮರತೀರ್ಥ, ಕೋಟಿತೀರ್ಥ ಮತ್ತು ರುಕ್ಮಕುಂಡ ಇವುಗಳಲ್ಲಿ ಪಿಂಡಪ್ರದಾನಮಾಡಿದರೆ ಪಿತೃಗಳಿಗೆ ಸ್ವರ್ಗಪ್ರಾಪ್ತಿಯಾಗುತ್ತದೆ.

೨೫-೨೬. ಮಾರ್ಕಂಡೇಯೇಶ, ಕೋಟೀಶ ಇವರನ್ನು ನಮಸ್ಕರಿಸಿದರೆ ಪಿತೃಗಳ ಉದ್ಧಾರವಾಗುವುದು.

ಸುಲೋಚನೇ! ಅಂತೆಯೇ ಪುಣ್ಯಪ್ರದವಾದ ಪಾಂಡುಶಿಲೆಯ ದರ್ಶನಮಾತ್ರದಿಂದ ನರಕದಲ್ಲಿದ್ದ ಪಿತೃಗಳನ್ನು ಪರಿಶುದ್ಧರನ್ನಾಗಿ ಮಾಡಿ ಸ್ವರ್ಗಕ್ಕೆ ಒಯ್ಯುವನು. ಹೀಗೆ ಹೇಳಿ ಪಾಂಡುವು ನಾಶರಹಿತವಾದ ಶಾಶ್ವತಸ್ಥಾನಕ್ಕೆ ಹೋದನು.

೨೭. ಘೃತಕುಲ್ಯಾ, ಮಧುಕುಲ್ಯಾ, ದೇವಿಕಾ, ಮಹಾನದಿ ಇವುಗಳು ಶಿಲಾಸಂಗಮವನ್ನು ಹೊಂದುವ ಸ್ಥಳವು ಮಧುಸ್ರವಾ ಎಂದು ಉಕ್ತವಾಗಿದೆ.

ಅಯುತಂ ಹ್ಯಶ್ವಮೇಧಾನಾಂ ಸ್ನಾನೇನ ಲಭತೇ ನರಃ |
ತರ್ಪಯಿತ್ವಾ ಪಿತೃಗಣಂ ಶ್ರಾದ್ಧಂ ಕೃತ್ವಾ ಸಪಿಂಡಕಂ || ೨೮ ||

ಸಹಸ್ರಕುಲಮುದ್ಧೃತ್ಯ ನಯೇದ್ವಿಷ್ಣುಪುರಂ ನರಃ |
ಉದ್ಭಿಜ್ಜಾಃ ಸ್ವೇದಜಾ ವಾಪಿ ಹ್ಯಂಡಜಾ ಯೇ ಜರಾಯುಜಾಃ || ೨೯ ||

ಮಧುಸ್ರವಾಂ ಸಮಾಸಾದ್ಯ ಮೃತಾ ವಿಷ್ಣುಪದಂ ಯಯುಃ |
ದಶಾಶ್ವಮೇಧಿಕೇ ಹಂಸತೀರ್ಥೇ ಶ್ರಾದ್ಧಾದ್ದಿವಂ ವ್ರಜೇತ್ || ೩೦ ||

ದಶಾಶ್ವಮೇಧಹಂಸೌ ಚ ನತ್ವಾ ಶಿವಪುರಂ ವ್ರಜೇತ್ |
ಮತಂಗಸ್ಯ ಪದೇ ಶ್ರಾದ್ಧಕರ್ತಾ ಬ್ರಹ್ಮಪುರೇ ವಸೇತ್ || ೩೧ ||

ನಿರ್ಮಥ್ಯಾಗ್ನೀನ್ ಶಮೀಗರ್ಭೇ ವಿಧಿರ್ವಿಷ್ಣ್ವಾದಿಭಿಃ ಸಹ |
ಮಂಥೋಕುಂಡಂ ಹಿ ತತ್ತೀರ್ಥಂ ಪಿತೄಣಾಂ ಮುಕ್ತಿಕಾರಕಂ || ೩೨ ||

---

೨೮-೨೯. ಅಲ್ಲಿ ಸ್ನಾನಮಾಡುವುದರಿಂದ ಮನುಷ್ಯನು ಹತ್ತುಸಾವಿರ ಅಶ್ವಮೇಧಗಳ ಫಲವನ್ನು ಪಡೆಯುವನು. ಅಲ್ಲಿ ಪಿತೃವರ್ಗಕ್ಕೆ ತರ್ಪಣ ಮಾಡಿ ಪಿಂಡಸಹಿತ ಶ್ರಾದ್ಧವನ್ನು ಮಾಡಿದರೆ ಸಾವಿರ ಕುಲಗಳು ಉದ್ಧಾರವಾಗಿ ವಿಷ್ಣುಪುರಕ್ಕೆ ಹೋಗುತ್ತವೆ.

೨೯-೩೦. ತರುಗುಲ್ಮಾದಿಗಳು, ಕೃಮಿದಂಶಾದಿಗಳು, ಪಕ್ಷಿ ಮುಂತಾದುವು ಮತ್ತು ಮನುಷ್ಯರು ಮಧುಸ್ರವಾ ತೀರ್ಥಕ್ಕೆ ಹೋಗಿ ಅಲ್ಲಿ ಮೃತರಾದರೆ ಅವರು ವೈಕುಂಠಕ್ಕೆ ಹೋಗುವರು.

೩೧. ದಶಾಶ್ವಮೇಧಿಕ ಮತ್ತು ಹಂಸತೀರ್ಥಗಳಲ್ಲಿಶ್ರಾದ್ಧಮಾಡುವುದರಿಂದ ಸ್ವರ್ಗಲೋಕಪ್ರಾಪ್ತಿಯಾಗುವುದು.

ದಶಾಶ್ವಮೇಧ ಮತ್ತು ಹಂಸಗಳನ್ನು ಪೂಜಿಸಿ ನಮಸ್ಕರಿಸಿದರೆ ಶಿವಲೋಕಪ್ರಾಪ್ತಿಯಾಗುವುದು. ಮತಂಗಪದದಲ್ಲಿ ಶ್ರಾದ್ಧಮಾಡುವವನು ಬ್ರಹ್ಮಪುರಕ್ಕೆ ಹೋಗುವನು.

೩೨ ಬ್ರಹ್ಮನು ವಿಷ್ಣು ಮುಂತಾದವರ ಸಹಿತನಾಗಿ ಶಮೀಗರ್ಭದಲ್ಲಿ ಮಥನಮಾಡಿ ಅಗ್ನಿಗಳನ್ನು ಹುಟ್ಟಿಸಿದ ತೀರ್ಥವೇ ಮಂಥೋಕುಂಡವೆಂಬುದು. ಆ ತೀರ್ಥವು ಪಿತೃಗಳಿಗೆ ಮೋಕ್ಷದಾಯಕವು.

ತರ್ಪಣಾತ್ಪಿಂಡದಾನಾಚ್ಚ ಸ್ನಾನಕೃನ್ಮುಕ್ತಿಮಾಪ್ನುಯಾತ್ |
ಪಿತೄನ್ ಸ್ವರ್ಗೇ ನಯೇನ್ನತ್ವಾ ರಾಮೇಶಕರಕೇಶ್ವರೌ ॥ ೩೩ ॥

ಗಯಾಕೂಪೇ ಪಿಂಡದಾನಾದಶ್ವಮೇಧಫಲಂ ಲಭೇತ್ |
ತಸ್ಮಾತ್ಕೂಪಾದ್ಭಸ್ಮನಾಯಂ ಸ್ನಾನಾತ್ತಾರಯತೇ ಪಿತೄನ್ ॥ ೩೪. ॥

ಧೌತಪಾಪೇ ನಿಃಕ್ಷೀರಾಯಾಃ ಸಂಗಮೇ ಸ್ನಾನಕೃನ್ನರಃ |
ಶ್ರಾದ್ಧೀ ರಾಮಪುಷ್ಕರಿಣ್ಯಾಂ ಬ್ರಹ್ಮಲೋಕಂ ನಯೇತ್ಪಿತೄನ್ ॥ ೩೫ ॥

ಸುಷುಮ್ನಾಯಾಂ ಮಹಾನದ್ಯಾಂ ತ್ರಿಃಸಪ್ತಕುಲಮುದ್ಧರೇತ್ |
ಸ್ನಾತೋ ನತ್ವಾ ವಸಿಷ್ಠೇಶಂ ತಸ್ಯ ತೀರ್ಥೇಽಶ್ವಮೇಧಭಾಕ್ ॥ ೩೬ ॥

---

೩೩. ಅಲ್ಲಿ ಸ್ನಾನಮಾಡಿ ತರ್ಪಣ ಪಿಂಡದಾನಗಳನ್ನು ಮಾಡುವವನು ಮುಕ್ತಿಯನ್ನು ಪಡೆಯುವನು. ಅಲ್ಲಿರುವ ರಾಮೇಶ, ಕರಕೇಶ್ವರರನ್ನು ನಮಸ್ಕರಿಸುವವನು ಪಿತೃಗಳನ್ನು ಸ್ವರ್ಗಲೋಕಕ್ಕೆ ಒಯ್ಯುವನು.

೩೪. ಗಯಾಕೂಪದಲ್ಲಿ ಪಿಂಡಪ್ರದಾನಮಾಡುವುದರಿಂದ ಅಶ್ವಮೇಧ ಯಜ್ಞದ ಫಲವು ಬರುತ್ತದೆ. ಆ ಕೂಪದಲ್ಲಿ ಭಸ್ಮಸ್ನಾನಮಾಡುವವನು ಪಿತೃಗಳನ್ನು ದಾಟಿಸುವನು.

೩೫. ಧೌತಪಾಪ ಮತ್ತು ನಿಃಕ್ಷೀರಾಸಂಗಮತೀರ್ಥಗಳಲ್ಲಿ ಸ್ನಾನ ಮಾಡುವ ಮನುಷ್ಯನು ಮತ್ತು ರಾಮಪುಷ್ಕರಿಣಿಯಲ್ಲಿ ಶ್ರಾದ್ಧಮಾಡುವವನೂ ಸಹ ಪಿತೃಗಳನ್ನು ಬ್ರಹ್ಮಲೋಕಕ್ಕೆ ಒಯ್ಯುವನು.

೩೬. ಸುಷುಮ್ನಾ ಎಂಬ ಮಹಾನದಿಯಲ್ಲಿ ಸ್ನಾನಮಾಡುವವನು ಇಪ್ಪತ್ತೊಂದು ಕುಲವನ್ನುದ್ಧರಿಸುವನು.

ಅಲ್ಲಿರುವ ವಸಿಷ್ಠೇಶ್ವರನನ್ನು ನಮಿಸಿ ಪಿಂಡಪ್ರದಾನವನ್ನು ಮಾಡುವವನು ಆ ತೀರ್ಥದಲ್ಲಿ ಅಶ್ವಮೇಧಯಜ್ಞಮಾಡಿದ ಫಲಕ್ಕೆ ಭಾಗಿಯಾಗುವನು.

ಪಿಂಡದೋ ಧೇನುಕಾರಣ್ಯೇ ಕಾಮಧೇನುಪದೇಷು ಚ ।
ಸ್ನಾತೋ ನತ್ವಾ ತು ತಂ ದೇವಂ ಬ್ರಹ್ಮಲೋಕಂ ನಯೇತ್ಪಿತೄನ್ ॥ ೩೭॥

ಕರ್ದಮಾಲೇ ಗಯಾನಾಭೌ ಮುಂಡಪೃಷ್ಠಸಮೀಪತಃ ।
ಸ್ನಾತ್ವಾ ಶ್ರಾದ್ಧೀ ನಯೇತ್ಸ್ವರ್ಗೇ ಪಿತೄನ್ನತ್ವಾ ಚ ಚಂಡಿಕಾಂ ॥ ೩೮ ॥

ಫಲ್ಗುಚಂಡೀಶನಾಮಾನೌ ಸಂಗಮಾಧೀಶಮರ್ಚ್ಯ ಚ ।
ಗಯಾಗಜೋ ಗಯಾದಿತ್ಯೋ ಗಾಯತ್ರೀ ಚ ಗದಾಧರಃ ॥ ೩೯ ॥

ಗಯಾ ಗಯಾಶಿರಶ್ಚೈವ ಷಡ್ಗಯಾ ಮುಕ್ತಿದಾಯಿಕಾಃ ।
ಗಯಾಯಾಂ ತು ವೃಷೋತ್ಸರ್ಗಾತ್ತ್ರಿಃಸಪ್ತಕುಲಮುದ್ಧರೇತ್ ॥ ೪೦ ॥

ಯತ್ರ ತತ್ರ ಸ್ಥಿತೋ ವಿಪ್ರ ಉದಿತೋ ವಿಜಿತೇಂದ್ರಿಯಃ ।
ಆದ್ಯಂ ಗದಾಧರಂ ಧ್ಯಾಯನ್ ಶ್ರಾದ್ಧಪಿಂಡಾದಿ ಕಾರಯೇತ್ ॥ ೪೧ ॥

---

೩೭. ಧೇನುಕಾರಣ್ಯ ಮತ್ತು ಕಾಮಧೇನು ಪದಗಳಲ್ಲಿ ಸ್ನಾನಮಾಡಿ ಆ ದೇವನನ್ನು ಪೂಜಿಸಿದರೆ ಪಿತೃಗಳಿಗೆ ಬ್ರಹ್ಮಲೋಕಪ್ರಾಪ್ತಿಯಾಗುವುದು.

೩೮. ಕರ್ದಮಾಲ, ಗಯಾನಾಭಿ ಮತ್ತು ಮುಂಡಪೃಷ್ಠ ಸಮೀಪಗಳಲ್ಲಿ ಸ್ನಾನಮಾಡಿ ಚಂಡಿಕೆಯನ್ನು ವಂದಿಸಿ ಶ್ರಾದ್ಧಮಾಡುವವನು ಪಿತೃಗಳನ್ನು ಸ್ವರ್ಗಕ್ಕೆ ಒಯ್ಯುವನು.

೩೯-೪೦. ಫಲ್ಗು, ಚಂಡೀಶನಾಮಕರು ಮತ್ತು ಸಂಗಮಾಧೀಶ ಇವರನ್ನು ಪೂಜಿಸಬೇಕು. ಗಯಾಗಜ, ಗಯಾದಿತ್ಯ, ಗಾಯತ್ರೀ, ಗದಾಧರ, ಗಯಾ, ಮತ್ತು ಗಯಾಶಿರಸ್ಸು ಎಂಬುದಾಗಿ ಆರು ಗಯೆಗಳು ಮುಕ್ತಿದಾಯಕಗಳು. ಗಯೆಯಲ್ಲಿ ವೃಷೋತ್ಸರ್ಗಮಾಡಿದರೆ ಇಪ್ಪತ್ತೊಂದು ಕುಲಗಳ ಉದ್ಧಾರವಾಗುವುದು.

೪೧. ಬ್ರಾಹ್ಮಣನು ಅಲ್ಲಲ್ಲಿ ಇದ್ದು ಜಿತೇಂದ್ರಿಯನಾಗಿ ಆದ್ಯನಾದ ಗದಾಧರನನ್ನು ಧ್ಯಾನಿಸುತ್ತಾ ಶ್ರಾದ್ಧಪಿಂಡಾದಿಗಳನ್ನು ಮಾಡಬೇಕು.

ಕುಲಾನಾಂ ಕುಲಮುದ್ಧೃತ್ಯ ಬ್ರಹ್ಮಲೋಕಂ ನಯೇದ್ಧ್ರುವಂ ।
ತತೋ ದಧ್ಯೋದನೇನೈವ ದತ್ವಾ ನೈವೇದ್ಯಮುತ್ತಮಂ ॥ ೪೨ ॥

ಜನಾರ್ದನಾಯ ದೇವಾಯ ಸಮಭ್ಯರ್ಚ್ಯ ಯಥಾವಿಧಿ ।
ದದ್ಯಾನ್ನಿಕ್ಷಿಪ್ಯ ಪಿಂಡಾಂಸ್ತು ತಚ್ಛೇಷೇಣೈವ ಜೀವತೀಂ ॥ ೪೩ ॥

ದೈತ್ಯಸ್ಯ ಮುಂಡಪೃಷ್ಠೇ ತು ಯಸ್ಮಾತ್ತಾ ಸಂಸ್ಥಿತಾ ಶಿಲಾ ।
ತಸ್ಮಾದ್ವೈ ಖಂಡಪೃಷ್ಠಾದ್ರಿಃ ಪಿತೄಣಾಂ ಬ್ರಹ್ಮಲೋಕದಃ ॥ ೪೪ ॥

ರಾಮೇ ವನಂ ಗತೇ ಶೈಲವರಾರುಹ್ಯ ಭರತಃ ಸ್ಥಿತಃ ।
ಪಿತ್ರೇ ಪಿಂಡಾದಿಕಂ ದತ್ವಾ ರಾಮೇಶಂ ಸ್ಥಾಪ್ಯ ತತ್ರ ಚ ॥ ೪೫ ॥

ಸ್ನಾತ್ವಾ ನತ್ವಾ ಚ ರಾಮೇಶಂ ರಾಮಂ ಸೀತಾಂ ಸಮಾಹಿತಃ ।
ಶ್ರಾದ್ಧಂ ಪಿಂಡಪ್ರದಾನಂ ಚ ಕೃತ್ವಾ ವಿಷ್ಣುಪುರಂ ವ್ರಜೇತ್ ॥ ೪೬ ॥

---

೪೨-೪೩. ಈ ರೀತಿ ಮಾಡುವವನು ನೂರು ಕುಲಗಳನ್ನುದ್ಧರಿಸಿ ಅವರನ್ನು ಖಂಡಿತವಾಗಿಯೂ ಬ್ರಹ್ಮಲೋಕಕ್ಕೆ ಒಯ್ಯುವನು.

ಅನಂತರ ದಧ್ಯೋದನದಿಂದಲೇ ಉತ್ತಮನೈವೇದ್ಯವನ್ನು ಕಲ್ಪಿಸಿ ವಿಧಿವತ್ತಾಗಿ ಜನಾರ್ದನದೇವನನ್ನು ಪೂಜಿಸಿ ಪಿಂಡಗಳನ್ನಿಟ್ಟು ಉಳಿದ ಅನ್ನವನ್ನು ಭೋಜನಮಾಡಬೇಕು.

೪೪. ದೈತ್ಯನ ಮುಂಡಪೃಷ್ಠದಲ್ಲಿ ಶಿಲೆಯು ಇರುವುದರಿಂದ ಮುಂಡಪೃಷ್ಠಾಚಲವು ಪಿತೃಗಳಿಗೆ ಬ್ರಹ್ಮಲೋಕದಾಯಕವಾಯಿತು.

೪೫. ರಾಮನು ಕಾಡಿಗೆ ಹೋದಮೇಲೆ ಭರತನು ಪರ್ವತದ ಮೇಲೆ ವಾಸವಾಗಿದ್ದು ಅಲ್ಲಿ ತಂದೆಗೆ ಪಿಂಡಾದಿಗಳನ್ನು ಕೊಟ್ಟು ರಾಮೇಶನನ್ನು ಸ್ಥಾಪಿಸಿದನು.

೪೬-೪೭. ಅಲ್ಲಿ ಸಮಾಧಾನಮನಸ್ಸಿನಿಂದ ಸ್ನಾನಮಾಡಿ, ರಾಮೇಶ, ರಾಮ, ಸೀತಾದೇವಿ ಇವರನ್ನು ನಮಸ್ಕರಿಸಿ ಶ್ರಾದ್ಧ ಮತ್ತು ಪಿಂಡಪ್ರದಾನ

ಪಿತೃಭಿಃ ಸಹ ಧರ್ಮಾತ್ಮಾ ಕುಲಾನಾಂ ಚ ಶತೈಃ ಸಹ ।
ಶಿಲಾದಕ್ಷಿಣಹಸ್ತೇ ಚ ಸ್ಥಾಪಿತಃ ಕುಂಡಪೃಷ್ಠತಃ ॥ ೪೭ ॥

ತತ್ರ ಶ್ರಾದ್ಧಾದಿನಾ ಸರ್ವಾನ್ ಪಿತೄನ್ ಬ್ರಹ್ಮಪುರಂ ನಯೇತ್ ।
ಕುಂಡೇನಾಥ ತಪಸ್ತಪ್ತಂ ಸೀತಾದ್ರೇರ್ದಕ್ಷಿಣೇ ನಗೇ ॥ ೪೮ ॥

ಮತಂಗಸ್ಯ ಪದೇ ಪುಣ್ಯೇ ಪಿಂಡದಃ ಸ್ವರ್ಗಯೇತ್ಪಿತೄನ್ ।
ವಾಮಹಸ್ತೇ ಶಿಲಾಯಾಶ್ಚ ಹ್ಯಂತಕೋ ವಿಧೃತೋ ಗಿರಿಃ ॥ ೪೯ ॥

ಉದಯಾಗಿರಿರಾನೀತೋ ಹ್ಯಗಸ್ತ್ಯೇನ ಮಹಾತ್ಮನಾ ।
ಸ್ಥಾಪಿತಃ ಪಿಂಡದಸ್ತತ್ರ ಪಿತೄನ್ಬ್ರಹ್ಮಪುರಂ ನಯೇತ್ ॥ ೫೦ ॥

---

ಗಳನ್ನು ಮಾಡಿದರೆ ಅಂತಹ ಧರ್ಮಾತ್ಮನು ನೂರು ಕುಲಪಿತೃಗಳಸಹಿತನಾಗಿ ವಿಷ್ಣುಲೋಕಕ್ಕೆ ಹೋಗುವನು. ಶಿಲೆಯ ದಕ್ಷಿಣಹಸ್ತದಲ್ಲಿ ಕುಂಡಪೃಷ್ಠವು ಸ್ಥಾಪಿಸಲ್ಪಟ್ಟಿದೆ.

೪೮. ಅಲ್ಲಿ ಶ್ರಾದ್ಧಾದಿಗಳನ್ನು ಮಾಡುವುದರಿಂದ ಸಕಲ ಪಿತೃಗಳಿಗೂ ಬ್ರಹ್ಮಲೋಕಪ್ರಾಪ್ತಿಯಾಗುವುದು. ಸೀತಾದ್ರಿಯ ದಕ್ಷಿಣ ಬೆಟ್ಟದಲ್ಲಿ ಕುಂಡನಿಂದ ತಪಸ್ಸು ಆಚರಿಸಲ್ಪಟ್ಟಿತು.

೪೯. ಪುಣ್ಯಕರವಾದ ಮತಂಗಪದದಲ್ಲಿ ಪಿಂಡಪ್ರದಾನಮಾಡುವವನು ಪಿತೃಗಳನ್ನು ಸ್ವರ್ಗಕ್ಕೆ ಒಯ್ಯುವನು. ಶಿಲೆಯ ವಾಮಹಸ್ತದಲ್ಲಿ ಅಂತಕಗಿರಿಯು ಧರಿಸಲ್ಪಟ್ಟಿದೆ.

೫೦. ಮಹಾತ್ಮನಾದ ಅಗಸ್ತ್ಯನು ಉದಯಗಿರಿಯನ್ನು ತಂದು ಅಲ್ಲಿ ಸ್ಥಾಪಿಸಿರುವನು. ಅಲ್ಲಿ ಪಿಂಡಪ್ರದಾನಮಾಡುವವನು ಪಿತೃಗಳನ್ನು ಬ್ರಹ್ಮಲೋಕಕ್ಕೆ ಒಯ್ಯುವನು.

ಮುಂಡಮುದ್ಯಂತಕಂ ತತ್ರ ಸ್ನಾತ್ವಾನಂ ತಪಸೇ ಕೃತಂ ।
ಬ್ರಹ್ಮಾ ತತ್ರ ಚ ಸಾವಿತ್ರೀ ಕುಮಾರಾಭ್ಯಾಂ ಸ್ಥಿತಸ್ತ್ವಿಹ ॥ ೫೧ ॥

ಹಾಹಾಹೂಹೂಪ್ರಭೃತಯೋ ಗೀತಂ ವಾದ್ಯಂ ಪ್ರಚಕ್ರಮುಃ ।
ಸ್ನಾತೋಽಗಸ್ತ್ಯೇ ಚ ಮಧ್ಯಾಹ್ನೇ ಸಾವಿತ್ರೀಂ ಸಮುಪಾಸ್ಯ ಚ ॥ ೫೨ ॥

ಕೋಟಿಜನ್ಮ ಭವೇದ್ವಿಪ್ರೋ ಧನಾಢ್ಯೋ ವೇದಪಾರಗಃ ।
ಅಗಸ್ತ್ಯಸ್ಯ ಪದೇ ಸ್ನಾತಃ ಪಿಂಡದಃ ಸ್ವರ್ನಯೇತ್ಪಿತೄನ್ ॥ ೫೩ ॥

ಬ್ರಹ್ಮಯೋನಿಂ ಪ್ರವಿಶ್ಯಾಥ ನಿರ್ಗಚ್ಛೇದ್ಯಸ್ತು ಮಾನವಃ ।
ಪರಂ ಬ್ರಹ್ಮ ಸ ಯಾತೀಹ ವಿಮುಕ್ತೋ ಯೋನಿಸಂಕಟಾತ್ ॥ ೫೪ ॥

ನತ್ವಾ ಗಯಾಕುಮಾರಂ ಚ ಬ್ರಾಹ್ಮಣ್ಯಂ ಲಭತೇ ನರಃ ।
ಸೋಮಕುಂಡಾಭಿಷೇಕಾದ್ಯೈಃ ಸೋಮಲೋಕಂ ನಯೇತ್ಪಿತೄನ್॥ ೫೫ ॥

---

೫೧. ಪ್ರಯತ್ನಶೀಲನಾದ ಮುಂಡನು ಅಲ್ಲಿ ತಪಸ್ಸುಮಾಡಿದನು. ಬ್ರಹ್ಮನು ಸಾವಿತ್ರೀ ಮತ್ತು ಕುಮಾರರ ಸಹಿತನಾಗಿ ಅಲ್ಲಿದ್ದನು.

೫೨-೫೩. ಹಾಹಾ, ಹೂಹೂ ಮುಂತಾದ ಗಂಧರ್ವರು ಗಾನವಾದ್ಯಗಳನ್ನು ಮಾಡಲುಪಕ್ರಮಿಸಿದರು.

ಆ ಅಗಸ್ತ್ಯತೀರ್ಥದಲ್ಲಿ ಸ್ನಾನಮಾಡಿ ಮಧ್ಯಾನ್ಹದಲ್ಲಿ ಸಾವಿತ್ರಿಯನ್ನು ಉಪಾಸನೆಮಾಡಿದರೆ ಕೋಟಿಜನ್ಮಗಳಲ್ಲಿ ಧನಿಕನು, ವೇದಪಾರಂಗತನೂ ಆದ ಬ್ರಾಹ್ಮಣನಾಗುವನು.

ಸ್ನಾನಮಾಡಿ ಅಗಸ್ತ್ಯಪಾದದಲ್ಲಿ ಪಿಂಡಪ್ರದಾನಮಾಡುವವನು ಪಿತೃಗಳನ್ನು ಸ್ವರ್ಗಕ್ಕೆ ಒಯ್ಯುವನು.

೫೪. ಬ್ರಾಹ್ಮಣಜನ್ಮದಲ್ಲಿ ಹುಟ್ಟಿದಮೇಲೆ ಅವನು ಗರ್ಭವಾಸ ದುಃಖದಿಂದ ಮುಕ್ತನಾಗಿ ಪರಬ್ರಹ್ಮನನ್ನು ಹೊಂದುವನು.

೫೫. ಗಯಾಕುಮಾರನನ್ನು ನಮಸ್ಕರಿಸಿದರೆ ಮನುಷ್ಯನು ಬ್ರಾಹ್ಮಣ್ಯವನ್ನು ಹೊಂದುವನು. ಸೋಮಕುಂಡಾಭಿಷೇಕಾದಿಗಳನ್ನು ಮಾಡುವುದರಿಂದ ಪಿತೃಗಳಿಗೆ ಸೋಮಲೋಕಪ್ರಾಪ್ತಿಯಾಗುವುದು.

ಬಲಿಃ ಕಾಕಾಲಯಾಯಾಂ ತು ಕಾಕೇಭ್ಯಃ ಕ್ಷಣಮೋಕ್ಷದಃ |
ಸ್ವರ್ಗದ್ವಾರೇಶ್ವರಂ ನತ್ವಾ ಸ್ವರ್ಗಾದ್ಬ್ರಹ್ಮಪುರಂ ನಯೇತ್ ॥ ೫೬ ॥

ಪಿಂಡದೋ ವ್ಯೋಮಗಂಗಾಯಾಂ ನಿರ್ಮಲಃ ಸನ್ನಯೇತ್ಪಿತ್ರ್ನ್ |
ಶಿಲಾಯಾ ದಕ್ಷಿಣೇ ಹಸ್ತೇ ಭಸ್ಮಕೂಟಮಧಾರಯತ್ ॥ ೫೭ ॥

ಧರ್ಮೇತಸ್ತತ್ರ ಚ ಹರಸ್ತನ್ನಾಮ ಸಮಕಾರಯತ್ |
ಯತ್ರಾಸೌ ಭಸ್ಮಕೂಟಾದ್ರಿಭಸ್ಮನಾಮಾ ತು ಮೋಹಿನಿ ॥ ೫೮ ॥

ವಟೋ ವಟೇಶ್ವರಸ್ತತ್ರ ಸ್ಥಿತಶ್ಚ ಪ್ರಪಿತಾಮಹಃ |
ತದಗ್ರೇ ರುಕ್ಮಿಣೀಕುಂಡಂ ಪಶ್ಚಿಮೇ ಕಪಿಲಾ ನದೀ ॥ ೫೯ ॥

ಕಪಿಲೇಶೋ ನದೀತೀರೇ ಉಮಾಸೋಮಸಮಾಗಮಃ |
ಕಪಿಲಾಯಾಂ ನರಃ ಸ್ನಾತ್ವಾ ಕಪಿಲೇಶಂ ನಮೇದ್ಯಜೇತ್ ॥ ೬೦ ॥

---

೫೬. ಕಾಕಾಲಯೆಯಲ್ಲಿ ಕಾಗೆಗಳಿಗೆ ಕೊಡುವ ಬಲಿಯು ಕ್ಷಣಮಾತ್ರದಲ್ಲಿ ಮೋಕ್ಷವನ್ನು ಕೊಡುವುದು. ಸ್ವರ್ಗದ್ವಾರೇಶ್ವರನನ್ನು ಸೇವಿಸಿದರೆ ಸ್ವರ್ಗದಿಂದ ಬ್ರಹ್ಮಸದನಕ್ಕೆ ಹೋಗುವರು.

೫೭. ಆಕಾಶಗಂಗೆಯಲ್ಲಿ ಪಿಂಡಪ್ರದಾನಮಾಡುವವನು ಪರಿಶುದ್ಧನಾಗಿ ಪಿತೃಗಳನ್ನು ಸ್ವರ್ಗಕ್ಕೆ ಒಯ್ಯುವನು. ಧರ್ಮರಾಜನು ಶಿಲೆಯ ದಕ್ಷಿಣಹಸ್ತದಲ್ಲಿ ಭಸ್ಮಕೂಟವನ್ನು ಧರಿಸುಃ ಂತೆ ಮಾಡಿದನು.

೫೮-೫೯. ಆದಕಾರಣ ಅದಕ್ಕೆ ಹರನು ಅದೇ ಹೆಸರಿಟ್ಟನು. ಮೋಹಿನಿ! ಆ ಭಸ್ಮಕೂಟಾದ್ರಿಯಲ್ಲಿ ಭಸ್ಮನಾಮಕನಾದ ಇವನು ವಟ, ವಟೇಶ್ವರ ಮತ್ತು ಪ್ರಪಿತಾಮಹನೂ ಸಹ ಇರುವರು.

ಅದರ ಮುಂಭಾಗದಲ್ಲಿ ರುಕ್ಮಿಣೀಕುಂಡವು, ಪಶ್ಚಿಮದಿಕ್ಕಿನಲ್ಲಿ ಕಪಿಲಾ ನದಿಯೂ ಇರುತ್ತವೆ.

೬೦. ನದಿಯತೀರದಲ್ಲಿ ಕಪಿಲೇಶನು ಉಮಾಸೋಮಸಹಿತನಾಗಿರುವನು. ಕಪಿಲಾನದಿಯಲ್ಲಿ ಸ್ನಾನಮಾಡಿ ಮನುಷ್ಯನು ಕಪಿಲೇಶನನ್ನು ಪೂಜಿಸಿ ನಮಸ್ಕರಿಸಬೇಕು.

ಶ್ರಾದ್ಧದಃ ಸ್ವರ್ಗಭಾಗೀ ಸ್ಯಾನ್ಮಹೇಶೀಕುಂಡ ಏವ ಚ ।
ಗೌರೀ ಚ ಮಂಗಲಾ ತತ್ರ ಸರ್ವಸೌಭಾಗ್ಯದಾರ್ಚಿತಾ ॥ ೬೧ ॥

ಜನಾರ್ದನೋ ಭಸ್ಮಕೂಟೇ ತಸ್ಯ ಹಸ್ತೇ ತು ಪಿಂಡದಃ ।
ಮಂತ್ರೇಣ ಚಾತ್ಮನೋಽನ್ಯೇಷಾಂ ಸವ್ಯೇನಾಪಿ ತಿಲೈರ್ವಿನಾ ॥ ೬೨ ॥

ಪಿಂಡಂ ಚ ದಧಿಸಂಮಿಶ್ರಂ ಪರ್ವತೇ ವಿಷ್ಣುಲೋಕಗಾಃ ।
ಏಷ ಪಿಂಡೋ ಮಯಾ ದತ್ತಸ್ತವ ಹಸ್ತೇ ಜನಾರ್ದನ ॥ ೬೩ ॥

ಗಯಾಶ್ರಾದ್ಧೇ ತ್ವಯಾ ದೇಯೋ ಮಹ್ಯಂ ಪಿಂಡೋ ಮೃತೇ ಮಯಿ ।
ಯಸ್ಮೈ ಪಿಂಡೋ ಮಯಾ ದತ್ತಸ್ತ್ವಾಮುದ್ದಿಶ್ಯ ಜನಾರ್ದನ ॥ ೬೪ ॥

---

೬೧. ಅಲ್ಲಿ ಶ್ರಾದ್ಧಮಾಡುವವನು ಸ್ವರ್ಗವನ್ನು ಹೊಂದುವನು. ಅಲ್ಲಿ ಮಹೇಶೀಕುಂಡವಿದೆ. ಅದರಲ್ಲಿ ಮಂಗಳಕರಳಾದ ಗೌರೀದೇವಿಯು ಪೂಜಿತಳಾಗಿ ಸಕಲ ಸೌಭಾಗ್ಯಪ್ರದಳಾಗುವಳು.

೬೨. ಭಸ್ಮಕೂಟದಲ್ಲಿ ಜನಾರ್ದನದೇವನಿರುವನು. ಅವನ ಹಸ್ತದಲ್ಲಿ ಸವ್ಯದಿಂದಲೇ ಎಳ್ಳಿಲ್ಲದೆ ತನಗೆ ಮತ್ತು ಇತರರಿಗೂ ಸಹ ಮಂತ್ರಪೂರ್ವಕವಾಗಿ ಪಿಂಡದಾನಮಾಡುವವನು ವಿಷ್ಣುಲೋಕಕ್ಕೆ ಹೋಗುವನು.

೬೩-೬೪. ಆ ಪರ್ವತದಲ್ಲಿ ದಧಿಮಿಶ್ರವಾದ ಪಿಂಡವನ್ನು ಕೊಡುವವರು ವಿಷ್ಣುಲೋಕಕ್ಕೆ ಹೋಗುವರು. ಅಲ್ಲಿ ಪಿಂಡದಾನಮಾಡುವಾಗ ಈ ರೀತಿ ಅನುಸಂಧಾನಮಾಡಬೇಕು.

ಜನಾರ್ದನಸ್ವಾಮಿಯೇ! ನಿನ್ನ ಹಸ್ತದಲ್ಲಿ ನಾನು ಈ ಪಿಂಡವನ್ನು ಕೊಟ್ಟಿರುವೆನು. ನಾನು ಸತ್ತಮೇಲೆ ಗಯಾಶ್ರಾದ್ಧದಲ್ಲಿ ನೀನು ನನಗೆ ಪಿಂಡ ಕೊಡಬೇಕು. ಜನಾರ್ದನನೇ! ಯಾವ ಪಿತೃಗಳಿಗಾಗಿ ನಿನ್ನನ್ನುದ್ದೇಶಿಸಿ ನಾನು ಪಿಂಡಕೊಟ್ಟಿರುವೆನೋ, ದೇವನೇ! ಮರಣಾನಂತರ ಆಯಾ ಪಿತೃಗಳಿಗೆ ನೀನು ಗಯಾಶೀರ್ಷದಲ್ಲಿ ಪಿಂಡವನ್ನು ಕೊಡು.

ದೇಹಿ ದೇವ ಗಯಾಶೀರ್ಷೇ ತಸ್ಮೈ ತಸ್ಮೈ ನ್ಮೃತೇ ತತಃ |
ಜನಾರ್ದನ ನಮಸ್ತುಭ್ಯಂ ನಮಸ್ತೇ ಪಿತೃರೂಪಿಣೇ || ೬೫ ||

ಪಿತೃಪಾತ್ರೇ ನಮಸ್ತುಭ್ಯಂ ನಮಸ್ತೇ ಮುಕ್ತಿಹೇತವೇ |
ಗಯಾಯಾಂ ಪಿತೃರೂಪೇಣ ಸ್ವಯಮೇವ ಜನಾರ್ದನಃ || ೬೬ ||

ತಂ ದೃಷ್ಟ್ವಾ ಪುಂಡರೀಕಾಕ್ಷಂ ಮುಚ್ಯತೇ ಚ ಋಣತ್ರಯಾತ್ |
ನಮಸ್ತೇ ಪುಂಡರೀಕಾಕ್ಷ ಋಣತ್ರಯವಿಮೋಚನ || ೬೭ ||

ಲಕ್ಷ್ಮೀಕಾಂತ ನಮಸ್ತೇಽಸ್ತು ನಮಸ್ತೇ ಪಿತೃಮೋಕ್ಷದ |
ಪುಂಡರೀಕಾಕ್ಷಮಭ್ಯರ್ಚ್ಯ ಸ್ವರ್ಗಗಃ ಸ್ಯಾಜ್ಜನಾರ್ದನಂ || ೬೮ ||

ವಾಮಜಾನುಂ ತು ಸಂಪಾತ್ಯ ನತ್ವಾ ಭೂಮಿಂ ಜನಾರ್ದನಂ |
ಶ್ರಾದ್ಧಂ ಸಪಿಂಡಕಂ ಕೃತ್ವಾ ಭ್ರಾತೃಭಿರ್ವಿಷ್ಣುಲೋಕಭಾಕ್ || ೬೯ ||

---

ಜನಾರ್ದನನೇ! ನಿನಗೆ ನಮಸ್ಕಾರ! ಪಿತೃರೂಪಿಯಾದ ನಿನಗೆ ನಮಸ್ಕಾರ!

೬೬. ಪಿತೃಪಾತ್ರನೇ! ನಿನಗೆ ನಮಸ್ಕಾರ! ಮುಕ್ತಿದಾಯಕನಾದ ನಿನಗೆ ನಮಸ್ಕಾರ! ಗಯೆಯಲ್ಲಿ ಜನಾರ್ದನನು ಸ್ವತಃ ಪಿತೃಗಳಲ್ಲಿ ಸನ್ನಿಹಿತನಾಗಿರುವನು.

೬೭. ಆ ಪುಂಡರೀಕಾಕ್ಷನನ್ನು ದರ್ಶನಮಾಡಿದರೆ ಋಣತ್ರಯದಿಂದ ಮುಕ್ತನಾಗುವನು. ಋಣತ್ರಯ ಪರಿಹಾರಕನಾದ ಪುಂಡರೀಕಾಕ್ಷನೇ! ನಿನಗೆ ನಮಸ್ಕಾರ!

೬೮. ಲಕ್ಷ್ಮೀಪತಿಯೇ! ನಿನಗೆ ನಮಸ್ಕಾರ! ಪಿತೃಗಳಿಗೆ ಮೋಕ್ಷಪ್ರದನೇ! ನಿನಗೆ ನಮಸ್ಕಾರ! ಈ ರೀತಿ ಪುಂಡರೀಕಾಕ್ಷನಾದ ಜನಾರ್ದನನನ್ನು ಪೂಜಿಸಿದರೆ ಸ್ವರ್ಗಪ್ರಾಪ್ತಿಯಾಗುವುದು.

೬೯. ಎಡಮೊಣಕಾಲನ್ನು ನೆಲದಮೇಲೂರಿ ಜನಾರ್ದನನಿಗೆ ವಂದಿಸಿ ಸೋದರರೊಡನೆ ಪಿಂಡಸಹಿತ ಶ್ರಾದ್ಧವನ್ನು ಮಾಡಿದರೆ ವಿಷ್ಣುಲೋಕವನ್ನು ಪಡೆಯುವನು.

ಶಿಲಾಯಾ ವಾಮಪಾದೇ ತು ಪ್ರೇತಕೂಪೇ ಗಿರಿರ್ಧೃತಃ ।
ಧರ್ಮರಾಜೇನ ಪಾದಾಕ್ರಾಂತೋ ಗಿರಿಃ ಪ್ರೇತಶಿಲಾತ್ರಯಃ ॥ ೭೦ ॥

ಪಾದೇನ ದೂರೇ ನಿಕ್ಷಿಪ್ತಾಃ ಶಿಲಾಯಾಃ ಪಾದಭಾರತಃ ।
ಪ್ರೇತಭಾವಸ್ವರೂಪೇಣ ಕರಗ್ರಹಣಕಾನನೇ ॥ ೭೧ ॥

ಪೃಥಕ್ ಸ್ಥಿತಾಶ್ಚ ಬಹವೋ ವಿಷ್ಣೋಃ ಕಾರಿಣ ಏವ ಚ ।
ಶ್ರಾದ್ಧಾದಿಕರಣಂ ನೄಣಾಂ ತೀರ್ಥೇ ಪಿತೃವಿಮುಕ್ತಿದಂ ॥ ೭೨ ॥

ಗತಃ ಶಿಲಾದ್ರಿಸಂಪರ್ಕಾತ್ಪ್ರೇತಕೂಪಃ ಪವಿತ್ರತಾಂ ।
ಪ್ರೇತಕುಂಡಂ ತು ತತ್ರಾಸ್ತೇ ದೇವಾಸ್ತತ್ರ ಪದೈಃ ಸ್ಥಿತಾಃ ॥ ೭೩ ॥

ಶ್ರಾದ್ಧಪಿಂಡಾದಿಕೃತ್ಸ್ನಾತಃ ಪ್ರೇತತ್ವಾನ್ಮೋಚಯೇತ್ಪಿತೄನ್ ।
ಕೀಟಕೇಷು ಗಯಾ ಪುಣ್ಯಾ ಪುಣ್ಯಂ ರಾಜಗೃಹಂ ವನಂ ॥ ೭೪ ॥

---

೭೦-೭೧. ಶಿಲೆಯ ವಾಮಪಾದದಲ್ಲಿ ಪ್ರೇತಕೂಪದಲ್ಲಿ ಗಿರಿಯು ಧರಿಸಲ್ಪಟ್ಟಿದೆ. ಆ ಗಿರಿಯು ಧರ್ಮರಾಜನ ಪಾದದಿಂದ ಆಕ್ರಮಿಸಲ್ಪಟ್ಟಿದೆ. ಮೂರು ಪ್ರೇತಶಿಲೆಗಳು ಪಾದಭಾರದಿಂದ ಕರಗ್ರಹಣಕಾನನದಲ್ಲಿ ಪ್ರೇತಸ್ವರೂಪವನ್ನು ಹೊಂದಿ ಶಿಲಾಪಾದಕ್ಕೆ ದೂರವಾಗಿ ಇಡಲ್ಪಟ್ಟಿವೆ.

೭೨. ಬಹುಮಂದಿ ವಿಷ್ಣುಕಿಂಕರರು ಅಲ್ಲಿ ಪ್ರತ್ಯೇಕವಾಗಿರುವರು. ಆ ತೀರ್ಥಗಳಲ್ಲಿ ಮನುಷ್ಯರು ಶ್ರಾದ್ಧಾದಿಗಳನ್ನು ಮಾಡುವುದು ಪಿತೃಗಳಿಗೆ ಮುಕ್ತಿದಾಯಕವು.

೭೩. ಶಿಲಾಪರ್ವತಸಂಪರ್ಕದಿಂದ ಪ್ರೇತಕೂಪವು ಪವಿತ್ರವಾಯಿತು. ಅದರಲ್ಲಿ ಪ್ರೇತಕುಂಡವಿದೆ. ಅಲ್ಲಿ ದೇವತೆಗಳು ಪಾದಗಳನ್ನಿಟ್ಟು ಸನ್ನಿಹಿತರಾಗಿರುವರು.

೭೪. ಅಲ್ಲಿ ಸ್ನಾನಮಾಡಿ ಶ್ರಾದ್ಧಪಿಂಡಾದಿಗಳನ್ನು ಮಾಡುವವನು ಪಿತೃಗಳನ್ನು ಪ್ರೇತಜನ್ಮದಿಂದ ಬಿಡಿಸುವನು ಕೀಟಕಗಳಲ್ಲಿ ಗಯೆಯು ಪುಣ್ಯಕರವು. ರಾಜಗೃಹ ಮತ್ತು ವನಗಳು ಪುಣ್ಯಕರವು.

ಚ್ಯವನಸ್ಯಾಶ್ರಮಃ ಪುಣ್ಯೋ ನದೀ ಪುಣ್ಯಾ ಪುನಃ ಪುನಃ ।
ವೈಕುಂಠೋ ಲೋಹದಂಡಶ್ಚ ಗಿರಿಕೂಟಶ್ಚ ಶೋಣಗಃ ॥ ೭೫ ॥

ಶ್ರಾದ್ಧಪಿಂಡಾದಿಕೃತ್ತತ್ರ ಪಿತ್ನನ್ಬ್ರಹ್ಮಪುರಂ ನಯೇತ್ ।
ಶಿಲಾದಕ್ಷಿಣಪಾದೇ ತು ಗೃಧ್ರಕೂಟೇ ಗಿರಿರ್ಧೃತಃ ॥ ೭೬ ॥

ಧರ್ಮರಾಜೇನ ಸ್ವಸ್ಥೈರ್ಯಕರಣಾಯಾಶು ಪಾವನಃ ।
ಗೃಧ್ರರೂಪೇಣ ಸಂಸಿದ್ಧಾಸ್ತಪಃ ಕೃತ್ವಾ ಮಹರ್ಷಯಃ ॥ ೭೭ ॥

ಅತೋ ಗಿರಿರ್ಗೃಧ್ರಕೂಟಸ್ತತ್ರ ಗೃಧ್ರೇಶ್ವರಃ ಶಿವಃ ।
ದೃಷ್ಟ್ವಾ ಗೃಧ್ರೇಶ್ವರಂ ಸ್ನಾತ್ವಾ ಯಾತಿ ಶಂಭೋಃ ಪುರಂ ನರಃ ॥ ೭೮ ॥

---

೭೫. ಚ್ಯವನಮುನಿಗಳ ಆಶ್ರಮವು ಪುಣ್ಯಸ್ಥಾನವು. ನದಿಯು ಪುಣ್ಯ ತೀರ್ಥವು. ವೈಕುಂಠ, ಲೋಹದಂಡ, ಗಿರಿಕೂಟ ಮತ್ತು ಶೋಣಗ ಇವುಗಳು ಪುಣ್ಯಕರಗಳು.

೭೬. ಅಲ್ಲಿ ಶ್ರಾದ್ಧಪಿಂಡಾದಿಗಳನ್ನು ಮಾಡಿದರೆ ಪಿತೃಗಳಿಗೆ ಬ್ರಹ್ಮ ಪುರಪ್ರಾಪ್ತಿಯಾಗುವುದು. ಶಿಲೆಯ ದಕ್ಷಿಣಪಾದದಲ್ಲಿ ಗೃಧ್ರಕೂಪದಲ್ಲಿ ಗಿರಿಯು ಧರಿಸಲ್ಪಟ್ಟಿದೆ.

೭೭. ಅಲ್ಲಿ ಧರ್ಮರಾಜನು ಸ್ಥಿರವಾಗಿ ನಿಂತು ಪವಿತ್ರಮಾಡಿರುವನು. ಮಹರ್ಷಿಗಳು ತಪಸ್ಸುಮಾಡಿ ಗೃಧ್ರರೂಪದಿಂದ ಸಿದ್ಧಿಹೊಂದಿರುವರು.

೭೮. ಆದಕಾರಣ ಗಿರಿಯು ಗೃಧ್ರಕೂಟವೆನಿಸಿದೆ. ಅಲ್ಲಿ ಶಿವನು ಗೃಧ್ರೇಶ್ವರನಾಮದಿಂದ ಸನ್ನಿಹಿತನಾಗಿರುವನು. ಅಲ್ಲಿ ಸ್ನಾನಮಾಡಿ ಗೃಧ್ರೇಶ್ವರನನ್ನು ಸಂದರ್ಶಿಸಿದರೆ ಮನುಷ್ಯನು ಈಶ್ವರನ ಲೋಕವಾದ ಕೈಲಾಸಕ್ಕೆ ಹೋಗುವನು.

ತತ್ರ ಗೃಧ್ರಪುರಂ ಗತ್ವಾ ಪ್ರಾಪ್ತೇಕಾಲೋ ದಿವಂ ವ್ರಜೇತ್ ।
ಋಣಮೋಕ್ಷಂ ಪಾಪಮೋಕ್ಷಂ ಶಿವಂ ದೃಷ್ಟ್ವಾ ಶಿವಂ ವ್ರಜೇತ್ ॥ ೭೯ ॥

ಆದಿಪಾದೇನ ಗಿರಿಣಾ ಸಮಾಕ್ರಾಂತಂ ಶಿಲೋದಕಂ ।
ತತ್ರಾಸ್ತೇ ಗಜರೂಪೇಣ ವಿಘ್ನೇಶೋ ವಿಘ್ನನಾಶನಃ ॥ ೮೦ ॥

ತಂ ದೃಷ್ಟ್ವಾ ಮುಚ್ಯತೇ ವಿಘ್ನೈಃ ಪಿತ್ರ್ಯಾನ್ ಶಿವಪುರಂ ನಯೇತ್ ।
ಗಾಯತ್ರೀಂ ಚ ಗಯಾಂ ದಿವ್ಯಂ ಸ್ನಾತೋ ದೃಷ್ಟ್ವಾ ದಿವಂ ವ್ರಜೇತ್

ಬ್ರಹ್ಮಾಣಂ ಚಾದಿಪಾದಸ್ಥಂ ದೃಷ್ಟ್ವಾ ಸ್ಯಾತ್ಪಿತೃತಾರಕಃ ।
ನಾಭೌ ಚ ಪಿಂಡದೋ ಯಷ್ಟ್ಯಾ ಪಿತ್ರ್ಯಾನ್ ಬ್ರಹ್ಮಪುರಂ ನಯೇತ್ ॥೮೨॥

---

೭೯. ಅಲ್ಲಿ ಗೃಧ್ರಪುರಕ್ಕೆ ಹೋಗಿ ಸಮಯಬಂದಾಗ ಸ್ವರ್ಗಕ್ಕೆ ಹೋಗುವನು. ಋಣಮೋಚಕನು ಮತ್ತು ಪಾಪಪರಿಹಾರಕನೂ ಆದ ಈಶ್ವರನನ್ನು ದರ್ಶನಮಾಡಿ ಶಿವನನ್ನು ಹೊಂದುವನು.

೮೦. ಆದಿಪಾದಾತ್ಮಕವಾದ ಗಿರಿಯಿಂದ ಶಿಲೋದಕವು ಆಕ್ರಮಿಸಲ್ಪಟ್ಟಿದೆ. ಅಲ್ಲಿ ವಿಘ್ನಪರಿಹಾರಕನಾದ ವಿಘ್ನೇಶ್ವರನು ಗಜರೂಪದಿಂದಿರುವನು

೮೧. ಆ ದೇವನ ದರ್ಶನಮಾಡಿದರೆ ವಿಘ್ನಗಳು ಹೋಗುತ್ತವೆ. ಪಿತೃಗಳಿಗೆ ಶಿವಪುರಪ್ರಾಪ್ತಿಯಾಗುತ್ತದೆ. ದಿವ್ಯವಾದ ಗಾಯತ್ರೀ ಗಯೆಯನ್ನು ನೋಡಿ ಅಲ್ಲಿ ಸ್ನಾನಮಾಡಿದವನು ದೇವಲೋಕಕ್ಕೆ ಹೋಗುವನು.

೮೨. ಆದಿಪಾದದಲ್ಲಿರುವ ಬ್ರಹ್ಮನ ದರ್ಶನಮಾಡಿದರೆ ಪಿತೃಗಳನ್ನು ಉದ್ಧರಿಸುವವನಾಗುವನು. ನಾಭಿ ಮತ್ತು ದಂಡಗಳಲ್ಲಿ ಪಿಂಡಪ್ರದಾನಮಾಡುವವನು ಪಿತೃಗಳನ್ನು ಬ್ರಹ್ಮಸದನಕ್ಕೆ ಒಯ್ಯುವನು,

ಶೋಭಾರ್ಥೇ ಮುಂಡಪೃಷ್ಠಸ್ಯ ಅರವಿಂದವನಂ ತ್ವಭೂತ್ |
ಮುಂಡಪೃಷ್ಠಾರವಿಂದೌ ಚ ದೃಷ್ಟ್ವಾ ಪಾಪೈರ್ವಿಮುಚ್ಯತೇ ॥ ೮೩ ॥

ಶೃಂಗಿಭಿರ್ದಂಷ್ಟ್ರಿಭಿರ್ವ್ಯಾಲೈಃ ಶಸ್ತ್ರವಹ್ನಿವಿಷೈರ್ಜಲೈಃ |
ಸುದೂರಾತ್ಪರಿಹರ್ತವ್ಯಃ ಕುರ್ವನ್ ಕ್ರೀಡಾಂ ಮೃತಸ್ತು ಯಃ ॥ ೮೪ ॥

ನಾಗಾನಾಂ ವಿಪ್ರಿಯಂ ಕುರ್ವನ್ ಹತಶ್ಚಾಪ್ಯಥ ವಿದ್ಯುತಾ |
ನಿಗೃಹೀತಃ ಸ್ವಯಂ ರಾಜ್ಞಾ ಚೌರ್ಯದೋಷೇಣ ಚ ಕ್ವಚಿತ್ ॥ ೮೫ ॥

ಪರದಾರಾನ್ರಮಂತಶ್ಚ ದ್ವೇಷಾತ್ತತ್ಪತಿಭಿರ್ಹತಾಃ |
ಅಸಮಾನೈಶ್ಚ ಸಂಕೀರ್ಣೈಶ್ಚಾಂಡಾಲಾದ್ಯೈಶ್ಚ ವಿಗ್ರಹಂ ॥ ೮೬ ॥

ಕೃತ್ವಾ ತೈರ್ನಿಹತಾಸ್ತಾಂಶ್ಚ ಚಾಂಡಾಲಾದೀನ್ ಸಮಾಶ್ರಿತಾಃ |
ಗವಾಗ್ನಿವಿಷದಾಶ್ಚೈವ ಪಾಖಂಡಾಃ ಕ್ರೂರಬುದ್ಧಯಃ ॥ ೮೭ ॥

---

೮೩. ಮುಂಡಪೃಷ್ಠದ ಅಲಂಕಾರಕ್ಕಾಗಿ ಅರವಿಂದವನವು ನಿರ್ಮಿತವಾಗಿದೆ. ಮುಂಡಪೃಷ್ಠ ಮತ್ತು ಅರವಿಂದಗಳನ್ನು ನೋಡಿದರೆ ಪಾಪವಿಮೋಚನೆಯಾಗುವುದು.

೮೪. ಕೊಂಬುಳ್ಳ ಪ್ರಾಣಿಗಳು, ಕೋರೆಹಲ್ಲುಳ್ಳ ಕಾಡುಹಂದಿ ಮುಂತಾದುವುಗಳು, ಸರ್ಪ, ವಿಷ, ಬೆಂಕಿ, ಶಸ್ತ್ರ, ನೀರು ಇವುಗಳನ್ನು ದೂರ ಮಾಡಬೇಕು. ಇವುಗಳೊಡನೆ ಸರಸವಾಡುವವನು ಸಾಯುವನು.

೮೫-೯೦. ಸರ್ಪಗಳನ್ನು ಹಿಂಸಿಸುವವನು, ಸಿಡಿಲಿನ ಹೊಡೆತಕ್ಕೆ ಸಿಕ್ಕಿದವನು, ಸ್ವತಃ ರಾಜರಿಂದ ನಿಗ್ರಹಿಸಲ್ಪಟ್ಟವನು, ಕಳ್ಳತನಮಾಡಿ ನಿಗ್ರಹಿಸಲ್ಪಟ್ಟವನು, ಪರಸ್ತ್ರೀಯರ ಸಂಭೋಗಮಾಡಿ ದ್ವೇಷದಿಂದ ಅವರ ಗಂಡಂದಿರಿಂದ ಹತನಾದವನು, ತನಗೆ ಸಮಾನರಲ್ಲದ ಸಂಕರಜಾತಿಯ ಚಂಡಾಲಾದಿಗಳ ಸಂಗಡ ಯುದ್ಧಮಾಡಿ ಪರಾಜಿತನಾಗಿ ಅವರನ್ನೇ ಆಶ್ರಯಿಸಿರುವವನು, ಗೋವುಗಳಿಗೆ ಬೆಂಕಿ ಅಥವಾ ವಿಷದಾತನು, ಪಾಷಂಡಿಗಳು, ಕಠಿನ

ಕ್ರೋಧಾತ್ಪ್ರಾಯಂ ವಿಷಂ ವಹ್ನಿಂ ಶಸ್ತ್ರಮುದ್ಬಂಧನಂ ಜಲಂ ।
ಗಿರಿವೃಕ್ಷಾತ್ಪ್ರಪಾತಂ ಚ ಯೇ ಕುರ್ವಂತಿ ನರಾಧಮಾಃ ॥ ೮೮ ॥

ಕುಶಿಲ್ಪಜೀವಿನೋ ಯೇ ಚ ಪಂಚಸೂನಾಧಿಕಾರಿಣಃ ।
ಮುಖಸಭಾಶ್ಚ ಯೇ ಕೇಚಿದ್ದೀನಪ್ರಾಯಾ ನಪುಂಸಕಾಃ ॥ ೮೯ ॥

ಬ್ರಹ್ಮದಂಡಹತಾ ಯೇ ತು ಯೇ ಚಾಪಿ ಬ್ರಾಹ್ಮಣೈರ್ಹತಾಃ ।
ಮಹಾಪಾತಕಿನೋ ಯೇ ಚ ಪತಿತಾಸ್ತೇ ಪ್ರಕೀರ್ತಿತಾಃ ॥ ೯೦ ॥

ಸ್ನಾನೇನ ಶುದ್ಧಿಮಾಯಾಂತಿ ಗಯಾಕೂಪಸ್ಯ ಭಸ್ಮನಾ ।
ಇತಿ ತೇ ಕಥಿತಂ ದೇವಿ ಗಯಾಮಾಹಾತ್ಮ್ಯಮುತ್ತಮಂ ॥ ೯೧ ॥

ಸರ್ವಪಾಪಪ್ರಶಮನಂ ಪಿತೄಣಾಂ ಮುಕ್ತಿದಾಯಕಂ ।
ಯಃ ಶೃಣೋತಿ ನರೋ ಭಕ್ತ್ಯಾ ಶ್ರಾದ್ಧೇ ಪರ್ವಣಿ ವಾಪ್ಯಥ ॥ ೯೨ ॥

---

ಮನಸ್ಸುಳ್ಳವರು ಕೋಪದಿಂದ ವಿಷಪಾನ, ಬೆಂಕಿ, ಶೇಣು ಬೆಟ್ಟವೃಕ್ಷಗಳಿಂದ ಬೀಳುವುದು ಇವನ್ನು ಮಾಡುವ ನರಾಧಮರು, ದುಷ್ಟವ್ಯಾಪಾರಗಳಿಂದ ಜೀವಿಸುವವರು, ಪಂಚಸೂನಾಧಿಕಾರಿಗಳು, ಮುಖಸಭರು, ದೀನಪ್ರಾಯರು, ನಪುಂಸಕರು, ಬ್ರಹ್ಮದಂಡದಿಂದ ಹತರು, ಬ್ರಾಹ್ಮಣರಿಂದ ಹತರು ಮತ್ತು ಮಹಾಪಾತಕಗಳನ್ನು ಮಾಡಿಹವರೂ ಸಹ ಪತಿತರೆಂದು ಉಕ್ತರಾಗುವರು.

೯೧-೯೨. ಇಂತಹ ಮಹಾಪಾತಕಿಗಳೆಲ್ಲರೂ ಗಯಾಕೂಪದಲ್ಲಿ ಭಸ್ಮಸ್ನಾನಮಾಡುವುದರಿಂದ ಪರಿಶುದ್ಧರಾಗುವರು.

ದೇವಿ ಈ ರೀತಿಯಾಗಿ ಸರ್ವಪಾಪಪರಿಹಾರಕವು, ಪಿತೃಗಳಿಗೆ ಮುಕ್ತಿಪ್ರದವೂ ಆದ ಉತ್ತಮ ಗಯಾಮಹಾತ್ಮ್ಯೆಯನ್ನು ನಿನಗೆ ಹೇಳಿರುವೆನು.

೯೨-೯೩. ದೇವೀ ! ಈ ಮಹಾತ್ಮ್ಯೆಯನ್ನು ಶ್ರಾದ್ಧ ಅಥವಾ ಪರ್ವಕಾಲಗಳಲ್ಲಿ ಭಕ್ತಿಯಿಂದ ಶ್ರವಣಮಾಡುವವನು ಮತ್ತು ಶ್ರವಣಮಾಡಿಸುವವನೂ ಸಹ ಬ್ರಹ್ಮಲೋಕಕ್ಕೆ ಹೋಗಿ ಸುಖಪಡುವರು.

ಶ್ರಾವಯೇದ್ವಾ ವರಾರೋಹೇ ಸೋಽಪಿ ಸ್ಯಾದ್ಬ್ರಹ್ಮಲೋಕಭಾಕ್ ।
ಇದಂ ಸ್ವಸ್ತ್ಯಯನಂ ಪುಣ್ಯಂ ಧನ್ಯಂ ಸ್ವರ್ಗತಿದಂ ನೃಣಾಂ ॥ ೯೩ ॥
ಯಶಸ್ಯಮಪಿ ಚಾಯುಷ್ಯಂ ಪುತ್ರಪೌತ್ರವಿವರ್ಧನಂ ॥ ೯೪ ॥

ಇತಿ ಶ್ರೀನಾರದೀಯಮಹಾಪುರಾಣೋತ್ತರಭಾಗೇ ಮೋಹಿನೀ
ವಸುಸಂವಾದೇ ಗಯಾಮಾಹಾತ್ಮ್ಯಂ ನಾಮ
ಸಪ್ತಚತ್ವಾರಿಂಶತ್ತಮೋಽಧ್ಯಾಯಃ

---

೯೩-೯೪. ಈ ಮಾಹಾತ್ಮ್ಯೆಯು ಮಂಗಳಕ್ಕಾಕರವು, ಪುಣ್ಯಪ್ರದವು, ಧನ್ಯವು ಮನುಜರಿಗೆ ಸ್ವರ್ಗದಾಯಕವು, ಯಶಸ್ಕರವು, ಆಯುಷ್ಸ ಪುತ್ರ ಪೌತ್ರವರ್ಧಕವೂ ಆಗಿದೆ.

ಇಂತು ಶ್ರೀನಾರದೀಯಪುರಾಣೋತ್ತರಭಾಗದಲ್ಲಿ ಮೋಹಿನೀ ವಸುಸಂವಾದ
ದೊಳು ಗಯಾಮಾಹಾತ್ಮ್ಯೆಯೆಂಬ ನಲವತ್ತೇಳನೆಯ
ಅಧ್ಯಾಯವು ಮುಗಿದುದು.



# ಅಷ್ಟಚತ್ವಾರಿಂಶತ್ತಮೋಽಧ್ಯಾಯಃ

—

ಮಾಂಧಾತೋವಾಚ

ಭಗವನ್ ಸಮ್ಯಗಾಖ್ಯಾತಂ ಸರ್ವಜ್ಞೇನ ಕೃಪಾಲುನಾ ।
ಮೋಹಿನೀಚರಿತಂ ಪುಣ್ಯಂ ಮಹಾಪಾತಕನಾಶನಂ ॥ ೧ ॥

ಪತಿಂ ಪುತ್ರಂ ಸಪತ್ನೀಂ ಚ ಯಾ ಪ್ರಸಹ್ಯ ಭವಾರ್ಣವೇ ।
ಮೋಕ್ಷಯಾಮಾಸ ಧರ್ಮಸ್ಯ ರಕ್ಷಣೇ ಪಿತುರಾಜ್ಞಯಾ ॥ ೨ ॥

ಸಾ ಬ್ರಹ್ಮಪುತ್ರೀ ಸರ್ವಜ್ಞಾ ಸರ್ವಲೋಕಹಿತೇ ರತಾ ।
ಪುರೋಧಸಂ ಚ ಸಂಪ್ರಾಪ್ತಾ ಶರಣಂ ಪ್ರಭುಮಾತ್ಮನಃ ॥ ೩ ॥

ಶ್ರುತ್ವಾ ಗಯಾಯಾ ಮಾಹಾತ್ಮ್ಯಂ ಪಿತೄಣಾಂ ಗತಿದಂ ಪರಂ ।
ಭೂಯಃ ಪಪ್ರಚ್ಛ ಕಿಂ ವಿಪ್ರಂ ವಸುಂ ವೇದವಿದಾಂ ವರಂ ॥ ೪ ॥

---

## ನಲವತ್ತೆಂಟನೆಯ ಅಧ್ಯಾಯ

೧. ಮಾಂಧಾತನು ಹೇಳಿದನು—ಪೂಜ್ಯರೇ! ಸರ್ವಜ್ಞರು, ದಯಾಳುಗಳೂ ಆದ ನೀವು ಮಹಾಪಾತಕಗಳನ್ನು ನಾಶಪಡಿಸುವಂತಹ, ಪುಣ್ಯಕರವಾದ ಮೋಹಿನೀ ಚರಿತ್ರೆಯನ್ನು ಚೆನ್ನಾಗಿ ಹೇಳಿದಿರಿ.

೨-೩. ತಂದೆಯ ಅಪ್ಪಣೆಯಮೇರೆಗೆ ಸಂಸಾರಸಾಗರದಲ್ಲಿದ್ದು ಧರ್ಮರಕ್ಷಣೆಗಾಗಿ, ಗಂಡ, ಮಗ ಮತ್ತು ಸೌತಿಯರಿಗೆ ಬಂಧವಿಮೋಚನೆಯನ್ನು ಮಾಡಿಸಿದ, ಬ್ರಹ್ಮಪುತ್ರಿಯೂ, ಸರ್ವಜ್ಞಳು, ಸಕಲಲೋಕಕ್ಕೂ ಉಪಕಾರಮಾಡುವುದರಲ್ಲಾಸಕ್ತಳೂ ಆದ ಆ ಮೋಹಿನಿಯು ತನಗೆ ಸ್ವಾಮಿಯಾದ ಪುರೋಹಿತನನ್ನು ಶರಣುಹೊಂದಿರುವುದು ಸರಿಯಷ್ಟೆ!

೪. ಆವಳು ಪಿತೃಗಳಿಗೆ ಸದ್ಗತಿದಾಯಕವಾದ ಗಯಾಮಹಿಮೆಯನ್ನು ಕೇಳಿದ ಬಳಿಕ ವೇದಜ್ಞಶ್ರೇಷ್ಠನಾದ ವಸು ಎಂಬ ಬ್ರಾಹ್ಮಣನನ್ನು ಪುನಃ ಕೇಳಿದುದೇನು?

ವಸಿಷ್ಠ ಉವಾಚ

ಶೃಣು ಭೂಪ ಪ್ರವಕ್ಷ್ಯಾಮಿ ಯದಪೃಚ್ಛತ್ಪ್ರಸರ್ವಸುಂ ।
ಮೋಹಿನೀ ಮೋಹಮಾಪನ್ನಾ ತೀರ್ಥಸೇವನಕಾಮುಕಾ ॥ ೫ ॥

ಮೋಹಿನ್ಯುವಾಚ

ಸಾಧು ಸಾಧು ದ್ವಿಜಶ್ರೇಷ್ಠ ಲೋಕೋದ್ಧರಣತತ್ಪರ ।
ತ್ವಯಾ ಹ್ಯನುಗೃಹೀತಾಹಮಧುನಾ ಕರುಣಾತ್ಮನಾ ॥ ೬ ॥

ಶ್ರುತಂ ಪುಣ್ಯಂ ಮಯಾ ಬ್ರಹ್ಮನ್ ಗಯಾಮಾಹಾತ್ಮ್ಯಮುತ್ತಮಂ ।
ಗೋಪ್ಯಂ ಪಿತೄಣಾಂ ಗತಿದಂ ಧರ್ಮಾಖ್ಯಾನಂ ಸುಖಾವಹಂ ॥ ೭ ॥

ಅಧುನಾ ವದ ವಿಪ್ರೇಂದ್ರ ಕಾಶೀಮಾಹಾತ್ಮ್ಯಮುತ್ತಮಂ ।
ಮಯಾ ಪೂರ್ವಂ ಶ್ರುತಂ ಬ್ರಹ್ಮನ್ ಕಿಂಚಿತ್ಸಂಧ್ಯಾವಳೀಮುಖಾತ್ ॥ ೮ ॥

---

೫. ವಸಿಷ್ಠನು ಹೇಳಿದನು— ದೊರೆಯೇ! ತೀರ್ಥಸೇವನೆಯಲ್ಲಾಸಕ್ತಳಾದ, ಮೋಹವನ್ನು ಹೊಂದಿದ ಮೋಹಿನಿಯು ಪುನಃ ವಸುವನ್ನು ಕುರಿತು ಕೇಳಿದುದನ್ನು ಹೇಳುವೆನು ಕೇಳು.

೬. ಮೋಹಿನಿಯು ಹೇಳಿದಳು:— ಲೋಕೋದ್ಧಾರಕಾರ್ಯದಲ್ಲಾಸಕ್ತನಾಗಿರುವ ದ್ವಿಜಶ್ರೇಷ್ಠನೇ! ಒಳ್ಳೆಯದು! ಒಳ್ಳೆಯದು! ಕರುಣಾಶಾಲಿಯಾದ ನಿನ್ನಿಂದ ಅನುಗೃಹೀತಳಾಗಿ ಈಗ ನಾನು ಧನ್ಯಳಾದೆನು.

೭. ಬ್ರಾಹ್ಮಣನೇ! ಪುಣ್ಯಕರವು, ಉತ್ತಮವು, ರಹಸ್ಯವು, ಪಿತೃಗಳಿಗೆ ಗತಿದಾಯಕವು, ಧರ್ಮನಿರೂಪಣಪರವು, ಸುಖಪ್ರದವೂ ಆದ ಗಯಾ ಮಹಾತ್ಮ್ಯೆಯನ್ನು ಶ್ರವಣಮಾಡಿದೆನು.

೮. ವಿಪ್ರೇಂದ್ರನೇ! ಈಗ ಉತ್ತಮವಾದ ಕಾಶೀಕ್ಷೇತ್ರದ ಮಹಾತ್ಮ್ಯೆಯನ್ನು ಹೇಳು. ಬ್ರಾಹ್ಮಣನೇ! ನಾನು ಪೂರ್ವದಲ್ಲಿ ಸಂಧ್ಯಾವಳೀದೇವಿಯ ಮುಖದಿಂದ ಸ್ವಲ್ಪಮಟ್ಟಿಗೆ ಅದನ್ನು ಕೇಳಿರುವೆನು.

ತೇನ ಮೇ ಸ್ಮೃತಿಮಾಪನ್ನಂ ವಿಸ್ತರಾದ್ವದ ಸಾಂಪ್ರತಂ ।

ವಸಿಷ್ಠ ಉವಾಚ

ತಚ್ಛ್ರುತ್ವಾ ಮೋಹಿನೀವಾಕ್ಯಂ ವಸುಸ್ತಸ್ಯಾಃ ಪುರೋಹಿತಃ ॥ ೯ ॥

ವೇದವೇದಾಂಗತತ್ತ್ವಜ್ಞಃ ಪ್ರಾಹ ತಾಂ ಶ್ರೂಯತಾಮಿತಿ ।

ವಸುರುವಾಚ

ಶುಭಾ ಕಾಶೀಪುರೀ ಧನ್ಯಾ ಧನ್ಯೋ ದೇವೋ ಮಹೇಶ್ವರಃ ॥ ೧೦ ॥

ಯಃಸೇವತೇಽನಿಶಂ ಕಾಶೀಂ ಮುಕ್ತಿದಾಂ ವೈಷ್ಣವೀಂ ಪುರೀಂ ।
ಯಾಚಯಿತ್ವಾ ಹರೇಃ ಕ್ಷೇತ್ರಂ ಸ್ಥಿತೋ ದೇವಃ ಸನಾತನಃ ॥ ೧೧ ॥

ಪೂಜಯಂಸ್ತಂ ಹೃಷೀಕೇಶಂ ಪೂಜ್ಯಮಾನಃ ಸುರಾದಿಭಿಃ ॥ ೧೨ ॥

---

೯-೧೦. ಆದಕಾರಣ ನನಗೆ ಈಗ ಅದು ಜ್ಞಾಪಕಕ್ಕೆ ಬಂದಿತು. ಅದನ್ನೇ ನೀನು ವಿಸ್ತಾರವಾಗಿ ಹೇಳು.

ವಸಿಷ್ಠನು ಹೇಳಿದನು:—ಮೋಹಿನಿಯ ಆ ಮಾತನ್ನು ಕೇಳಿ ಅವಳ ಪುರೋಹಿತನೂ, ವೇದವೇದಾಂಗತತ್ತ್ವಜ್ಞನೂ ಆದ ವಸುವು ಮೋಹಿನಿಯನ್ನು ಕುರಿತು ಮಾತನಾಡಿದನು.

ವಸುವು ಹೇಳಿದನು:—ಕಾಶೀಪಟ್ಟಣವು ಮಂಗಳಕರವು ಮತ್ತು ಧನ್ಯವಾದುದು. ಮಹೇಶ್ವರದೇವನು ಧನ್ಯನು.

೧೧-೧೨. ಆ ಸನಾತನದೇವನು ಹರಿಯ ಕ್ಷೇತ್ರವನ್ನು ಯಾಚಿಸಿ ವಿಷ್ಣು ಸಂಬಂಧಿಯೂ, ಮುಕ್ತಿಪ್ರದವೂ ಆದ ಕಾಶೀಪಟ್ಟಣವನ್ನು ಯಾವಾಗಲೂ ಸೇವಿಸುತ್ತಾ ಆ ಹೃಷೀಕೇಶನನ್ನು ಪೂಜಿಸುವವನಾಗಿ ದೇವತೆಗಳೇ ಮುಂತಾದವರಿಂದ ಪೂಜಿಸಿಕೊಳ್ಳಲ್ಪಡುತ್ತಿರುವನು.

ವಾರಾಣಸೀ ತು ಭುವನತ್ರಯಸಾರಭೂತಾ
ರಮ್ಯಾ ನೃಣಾಂ ಸುಗತಿದಾ ಕಿಲ ಸೇವ್ಯಮಾನಾ ।
ಅತ್ರಾಗತಾ ವಿವಿಧದುಷ್ಕೃತಕಾರಿಣೋಽಪಿ
ಪಾಪಕ್ಷಯೇ ವಿರಜಸಃ ಸುಮನಃಪ್ರಕಾಶಾಃ ॥ ೧೩ ॥

ಇದಂ ಗುಹ್ಯತಮಂ ಕ್ಷೇತ್ರಂ ಸರ್ವಪ್ರಾಣಿಸುಖಾವಹಂ ।
ಮೋಕ್ಷದಂ ಸರ್ವಜಂತೂನಾಂ ವೈಷ್ಣವಂ ಶೈವಮೇವ ಚ ॥ ೧೪ ॥

ಬ್ರಹ್ಮಘ್ನಗೋಘ್ನಗುರುತಲ್ಪಗಭಿನ್ನವೃಕ್ಷ
ನ್ಯಾಸಾಪಹಾರಕುಶಕಾದಿನಿಷಿದ್ಧವೃತ್ತಿಃ ।
ಸಂಸಾರಭೂತದೃಢಪಾಶವಿಮುಕ್ತದೇಹೋ
ವಾರಾಣಸೀಂ ಶಿವಪುರೀಂ ಸಮುಪೈತಿ ಮರ್ತ್ಯಃ ॥ ೧೫ ॥

---

೧೩. ಮೂರು ಲೋಕಗಳಲ್ಲಿಯೂ ಶ್ರೇಷ್ಠವು, ಮನೋಹರವೂ ಆದ ಕಾಶೀಕ್ಷೇತ್ರವು, ಸೇವಿಸುವ ಮನುಜರಿಗೆ ಸದ್ಗತಿದಾಯಕವೆಂಬುದು ಸುಪ್ರಸಿದ್ಧವು. ಇಲ್ಲಿಗೆ ಬಂದ ಜನರು ನಾನಾವಿಧ ಪಾಪಮಾಡಿದವರಾದರೂ ಆ ಪಾಪಗಳನ್ನು ಹೋಗಲಾಡಿಸಿಕೊಂಡು ನಿರ್ದೋಷಿಗಳಾಗಿ ಸಮೀಚೀನಬುದ್ಧಿ ಮತ್ತು ಪ್ರಕಾಶವುಳ್ಳವರಾಗುತ್ತಾರೆ.

೧೪. ಈ ಕ್ಷೇತ್ರವು ಅತ್ಯಂತಗೋಪ್ಯವು, ಸಕಲಪ್ರಾಣಿಗಳಿಗೂ ಸುಖಾವಹವು, ಮೋಕ್ಷಪ್ರದವೂ ಆಗಿದೆ. ಇದು ವೈಷ್ಣವ ಮತ್ತು ಶೈವಕ್ಷೇತ್ರವೂ ಆಗಿದೆ.

೧೫. ಬ್ರಹ್ಮಹತ್ಯೆ, ಗೋಹತ್ಯೆ, ಗುರುಪತ್ನೀಗಮನ, ಫಲವೃಕ್ಷಭೇದನ ಮಾಡಿದವನು, ಸಂನ್ಯಾಸವನ್ನು ಕೈಗೊಂಡು ದುರ್ವೃತ್ತಿಯಿಂದ ಅದನ್ನು ಕಳೆದುಕೊಂಡವನು ಮತ್ತು ಕುಶಕಾದಿಕರ್ತನು ಎಂಬೀ ನಿಷಿದ್ಧ ವ್ಯಾಪಾರಮಾಡಿದ ಮನುಷ್ಯನೂ ಸಹ ಈಶ್ವರನ ಆವಾಸಸ್ಥಾನವಾದ ಕಾಶೀಕ್ಷೇತ್ರದ ಸೇವನೆಯಿಂದ ಸಂಸಾರವೆಂಬ ಗಟ್ಟಿಯಾದ ಪಾಶದಿಂದ ಮುಕ್ತನಾಗಿ ದಿವ್ಯದೇಹವನ್ನು ಹೊಂದುವನು.

ಕ್ಷೇತ್ರಂ ತಥೇದಂ ಸುರಸಿದ್ಧಜುಷ್ಟಂ
ಸಂಪ್ರಾಪ್ಯ ಮರ್ತ್ಯಃ ಸುಕೃತಪ್ರಭಾವಾತ್ ।
ಖ್ಯಾತೋ ಭವೇತ್ಸರ್ವಸುರಾಸುರಾಣಾಂ
ಮೃತಶ್ಚ ಯಾಯಾತ್ಪರಮಂ ಪದಂ ಸಃ ॥ ೧೬ ॥

ಕ್ಷೇತ್ರೇಽಸ್ಮಿನ್ ನಿವಸಂತಿ ಯೇ ಸುಕೃತಿನೋ ಭಕ್ತ್ಯಾ ಹರೌ ವಾ ಹರೇ ।
ಪಶ್ಯಂತೋಽನ್ವಹಮಾದರೇಣ ಶುಚಯಃ ಸಂತಃ ಸಮಾಃ ಶಂಭುನಾ ॥
ತೇ ಮರ್ತ್ಯಾ ಭಯದುಃಖಪಾಪರಹಿತಾಃ ಸಂಶುದ್ಧಕರ್ಮಕ್ರಿಯಾಃ ।
ಭಿತ್ವಾ ಸಂಭವಬಂಧಜಾಲಗಹನಂ ವಿಂದಂತಿ ಮೋಕ್ಷಂ ಪರಂ ॥ ೧೭ ॥

ದ್ವಿಯೋಜನಮಥಾರ್ಧಂ ಚ ಪೂರ್ವಪಶ್ಚಿಮತಃ ಸ್ಥಿತಂ ।
ಅರ್ಧಯೋಜನವಿಸ್ತೀರ್ಣಂ ದಕ್ಷಿಣೋತ್ತರತಃ ಸ್ಮೃತಂ ॥ ೧೮ ॥

ವರುಣಾಸೀ ನದೀ ಯಾವದಸ್ತಿ ಶುಷ್ಕನದೀ ಶುಭೇ ।
ಏಷ ಕ್ಷೇತ್ರಸ್ಯ ವಿಸ್ತಾರಃ ಪ್ರೋಕ್ತೋ ದೇವೇನ ಶಂಭುನಾ ॥ ೧೯ ॥

---

೧೬. ಪುಣ್ಯಪ್ರಭಾವದಿಂದ ದೇವತೆಗಳು ಮತ್ತು ಸಿದ್ಧರಿಂದ ಸೇವಿಸಲ್ಪಟ್ಟ ಈ ಕ್ಷೇತ್ರಯಾತ್ರೆಯನ್ನು ಮಾಡಿದರೆ ಆ ಮನುಷ್ಯನು ದೇವದೈತ್ಯರುಗಳಲ್ಲಿ ಖ್ಯಾತಿಯನ್ನು ಪಡೆಯುವನು. ಆ ಕ್ಷೇತ್ರದಲ್ಲಿ ಮೃತನಾದವನು ಪರಮಪದವಿಯನ್ನು ಹೊಂದುವನು.

೧೭. ಹರಿಭಕ್ತರು ಅಥವಾ ಹರಭಕ್ತರಾದ ಮನುಜರು ಪ್ರತಿದಿನವೂ ವಿಶ್ವಾಸಪೂರ್ವಕವಾಗಿ ದರ್ಶನಮಾಡುತ್ತಾ ಈ ಕ್ಷೇತ್ರದಲ್ಲಿ ವಾಸಮಾಡಿದರೆ ಅವರು ಅತ್ಯಂತ ಪುಣ್ಯಶಾಲಿಗಳು, ಪರಿಶುದ್ಧರೂ ಆಗಿ ಶಂಭುದೇವನಿಗೆ ಸಮರಾಗಿ ಭಯ, ದುಃಖ, ಪಾಪ ಇವುಗಳನ್ನು ಪರಿಹರಿಸಿಕೊಂಡು ಅತ್ಯಂತ ಶುದ್ಧವಾದ ಕರ್ಮಗಳನ್ನು ಮಾಡುತ್ತಾ ಕೊನೆಗೆ ಗಹನವಾದ ಸಂಸಾರ ಬಂಧನವನ್ನು ಭೇಧಿಸಿಕೊಂಡು ಉತ್ತಮ ಮೋಕ್ಷವನ್ನು ಹೊಂದುವರು.

೧೮-೧೯. ಶೋಭನಾಂಗೀ! ಪೂರ್ವಪಶ್ಚಿಮ ಎರಡೂವರೆ ಗಾವುದವೂ, ದಕ್ಷಿಣೋತ್ತರ ಅರ್ಧ ಗಾವುದವೂ ವಿಸ್ತೀರ್ಣವುಳ್ಳ, ಶುಷ್ಕವರುಣಾಸೀನದಿಯು

ಅಯೇನಂ ತೊತ್ತರಂ ಜ್ಞೇಯಂ ತಿಮಿಚಂಡೇಶ್ವರಂ ತತಃ ।
ದಕ್ಷಿಣಂ ಶಂಕುಕರ್ಣಂ ತು ಓಂಕಾರಂ ತದನಂತರಂ ॥ ೨೦ ॥

ಪಿಂಗಲಾ ನಾಮ ಯತ್ತೀರ್ಥಂ ಆಗ್ನೇಯೀ ಸಾ ಪ್ರಕೀರ್ತಿತಾ ।
ಶುಷ್ಕಾ ಸರಿಚ್ಚ ಸಾ ಜ್ಞೇಯಾ ಲೋಲಾರ್ಕೋ ಯತ್ರ ತಿಷ್ಠತಿ ॥ ೨೧ ॥

ಇಡಾನಾಮ್ನೀ ತು ಯಾ ನಾಡೀ ಸಾ ಸೌಮ್ಯಾ ಸಂಪ್ರಕೀರ್ತಿತಾ ।
ವರುಣಾ ನಾಮ ಸಾ ಜ್ಞೇಯಾ ಕೇಶವೋ ಯತ್ರ ಸಂಸ್ಥಿತಃ ॥ ೨೨ ॥

ಆಭ್ಯಾಂ ಮಧ್ಯೇ ತು ಯಾ ನಾಡೀ ಸುಷುಮ್ನಾ ಸಾ ಪ್ರಕೀರ್ತಿತಾ ।
ಮತ್ಸ್ಯೋದರೀ ಚ ಸಾ ಜ್ಞೇಯಾ ವಿಶ್ವರಂ ತತ್ಪ್ರಕೀರ್ತಿತಂ ॥ ೨೩ ॥

ವಿಮುಕ್ತಂ ನ ಕದಾ ಯಸ್ಮಾನ್ಮೋಕ್ಷ್ಯತೇ ನ ಕದಾಚನ ।
ಮಹಾಕ್ಷೇತ್ರಮಿದಂ ತಸ್ಮಾದವಿಮುಕ್ತಮಿಹ ಸ್ಮೃತಂ ॥ ೨೪ ॥

---

ವ್ಯಾಪಿಸಿರುವ ಪ್ರದೇಶವು ಕಾಶೀಕ್ಷೇತ್ರದ ವಿಸ್ತಾರವೆಂದು ಶಂಭುದೇವನು ಹೇಳಿರುವನು.

೨೦. ಈ ಕ್ಷೇತ್ರಕ್ಕೆ ಉತ್ತರದಲ್ಲಿ ತಿಮಿಚಂಡೇಶ್ವರಾಯತನವು, ದಕ್ಷಿಣದಲ್ಲಿ ಶಂಕುಕರ್ಣ ಅನಂತರ ಓಂಕಾರಕ್ಷೇತ್ರವೂ ಇವೆ.

೨೧. ಪಿಂಗಲಾ ಎಂಬ ತೀರ್ಥವು ಈ ಕ್ಷೇತ್ರದ ಆಗ್ನೇಯದಿಕ್ಕಿನಲ್ಲಿದೆ. ಲೋಲಾರ್ಕದೇವನಿರುವ ಸ್ಥಳವು ಶುಷ್ಕನದಿಯೆಂದು ತಿಳಿಯಬೇಕು.

೨೨. ಇಡಾ ಎಂಬ ನಾಡಿಯು ಸೌಮ್ಯವೆಂದು ಉಕ್ತವಾಗಿದೆ. ಅದನ್ನು ವರುಣಾ ಎಂದು ತಿಳಿಯಬೇಕು. ಅಲ್ಲಿ ಕೇಶವನು ಸನ್ನಿಹಿತನಾಗಿರುವನು.

೨೩. ಪಿಂಗಳಾ ಇಡಾ ಎಂಬ ನಾಡಿಗಳ ಮಧ್ಯದಲ್ಲಿರುವ ನಾಡಿಗೆ ಸುಷುಮ್ನಾ ನಾಡಿಯೆಂದು ಹೆಸರು. ಅದು ಮತ್ಸ್ಯೋದರಿಯೆಂದು ತಿಳಿಯಬೇಕು. ಅದನ್ನು ವಿಶ್ವರ ಎಂದು ಜ್ಞಾನಿಗಳು ಹೇಳಿರುವರು.

೨೪. ವಿಮುಕ್ತನನ್ನು ಯಾವಾಗಲೂ ಬಿಡದೆ ತನ್ನಲ್ಲಿಯೇ ಇಟ್ಟುಕೊಂಡಿರುತ್ತದೆಯಾದಕಾರಣ ಈ ಮಹಾಕ್ಷೇತ್ರವು ಅವಿಮುಕ್ತವೆಂದು ಪ್ರಸಿದ್ಧವಾಗಿದೆ.

ಪ್ರಯೋಗಾದಪಿ ತೀರ್ಥಾದೇರಧಿಕಂ ದುಸ್ತರಾಚ್ಛುಭೇ ।
ಅನಾಯಾಸೇನ ವೈ ಯತ್ರ ಮೋಕ್ಷಪ್ರಾಪ್ತಿಃ ಪ್ರಜಾಯತೇ ॥ ೨೫ ॥

ನಾನಾವರ್ಣಾ ವಿಕರ್ಣಾಶ್ಚ ಚಾಂಡಾಲಾ ಯೇ ಜುಗುಪ್ಸಿತಾಃ ।
ಕಿಲ್ಬಿಷೈಃ ಪೂರ್ಣದೇಹಾಶ್ಚ ಪ್ರಕೃಷ್ಟೈಃ ಪಾತಕೈಸ್ತಥಾ ॥ ೨೬ ॥

ಭೇಷಜಂ ಪರಮಂ ತೇಷಾಮವಿಮುಕ್ತಂ ವಿದುರ್ಬುಧಾಃ ।
ದುಷ್ಟಾಂಧಾನ್ ದೀನಕೃಪಣಾನ್ ಪಾಪಾನ್ ದುಷ್ಕೃತಕಾರಿಣಃ ॥ ೨೭ ॥

ಹರೋಽನುಕಂಪಯಾ ಸರ್ವಾನ್ನಯತ್ಯಾಶು ಪರಾಂ ಗತಿಂ ।
ಕ್ಷೇತ್ರಮಧ್ಯಾದ್ಯದಾ ಗಂಗಾ ಸಂಗತಾ ಸರಿತಾಂ ಪತಿಂ ॥ ೨೮ ॥

ತತಃ ಪ್ರಭೃತಿ ಸಾ ಪುಣ್ಯಾ ಪುರೀ ಜಾತಾ ಶುಭಾನನೇ ।
ಪುಣ್ಯಾ ವೋದಙ್ಮುಖೀ ಗಂಗಾ ಪ್ರಾಚೀ ಚೈವ ಸರಸ್ವತೀ ॥ ೨೯ ॥

---

೨೫. ಶೋಭನೇ! ಈ ಕ್ಷೇತ್ರವು ಪ್ರಯಾಗ ಮತ್ತು ಇತರ ದುಸ್ತರ ತೀರ್ಥಾದಿಗಳಿಗಿಂತಲೂ ಹೆಚ್ಚಿನದು. ಇಲ್ಲಿ ಅನಾಯಾಸವಾಗಿ ಮೋಕ್ಷವು ಲಭಿಸುತ್ತದೆ.

೨೬-೨೭. ನಾನಾವರ್ಣದವರು, ವಿಕರ್ಣರು, ಚಂಡಾಲರು, ಪಾಪಗಳಿಂದ ಜುಗುಪ್ಸಾವಹರಾದವರು ಮತ್ತು ಮಹಾಪಾತಕಗಳಿಂದ ಪೂರ್ಣವಾದ ದೇಹವುಳ್ಳವರು ಇವರಿಗೆ ಅವಿಮುಕ್ತಕ್ಷೇತ್ರವು ಉತ್ತಮವಾದ ವಿಶುದ್ಧಿಸ್ಥಾನವೆಂದು ಜ್ಞಾನಿಗಳು ತಿಳಿದಿರುವರು.

೨೭-೨೮. ದೋಷದಿಂದ ಅಂಧರಾಗಿರುವವರು, ದೀನರಾದ ಕೃಪಣರು, ಪಾಪಿಗಳು ಮತ್ತು ದುಷ್ಕರ್ಮಕಾರಿಗಳು ಇವರೆಲ್ಲರಿಗೂ ಈಶ್ವರನು ದಯೆಯಿಂದ ಉತ್ತಮಗತಿಯನ್ನು ಕೊಡುವನು.

೨೮-೨೯. ಶೋಭನಾಂಗಿಯೇ! ಗಂಗೆಯು ಕ್ಷೇತ್ರ ಮಧ್ಯದಿಂದ ಹೊರಟು ಸಮುದ್ರವನ್ನು ಸೇರಿದಾಗಿನಿಂದಲೂ ಆ ಪಟ್ಟಣವು ಪುಣ್ಯಕರವಾಯಿತು. ಉತ್ತರಾಭಿಮುಖವಾದ ಗಂಗೆಯು ಮತ್ತು ಪೂರ್ವಾಭಿಮುಖವಾದ ಸರಸ್ವತೀನದಿಯೂ ಸಹ ಪುಣ್ಯಕರಗಳು.

ತತ್ರ ಮುಕ್ತಂ ಕಪಾಲಂ ತು ಶಿವೇನ ಸುಮಹಾತ್ಮನಾ ।
ತಸ್ಮಿಂಸ್ತೀರ್ಥೇ ತು ಯೋ ಗತ್ವಾ ಪಿಂಡದಾನೇನ ವೈ ಪಿತೄನ್ ॥ ೩೦ ॥

ಶ್ರಾದ್ಧೇಷು ಪ್ರೀಣಯಿಷ್ಯಂತಿ ತೇಷಾಂ ಲೋಕಾಸ್ತು ಭಾಸ್ವತಃ ।
ಬ್ರಹ್ಮಹಾ ಯೋಽಭಿಗಚ್ಛೇತ್ತು ಅವಿಮುಕ್ತಂ ಕದಾಚನ ॥ ೩೧ ॥

ತಸ್ಯ ಕ್ಷೇತ್ರಸ್ಯ ಮಾಹಾತ್ಮ್ಯಾದ್ಬ್ರಹ್ಮಹತ್ಯಾ ನಿವರ್ತತೇ ।
ಅವಿಮುಕ್ತಂ ಗತಾ ಯೇ ವೈ ಮಹಾಪುಣ್ಯಕೃತೋ ನರಾಃ ॥ ೩೨ ॥

ಅಕ್ಷಯ್ಯಾ ಹ್ಯಜರಾಶ್ಚೈವ ವಿದೇಹಾಶ್ಚ ಭವಂತಿ ತೇ ।
ಅಜ್ಞಾನಾಜ್ಞಾನತೋ ವಾಪಿ ಸ್ತ್ರಿಯಾ ವಾ ಪುರುಷೇಣ ವಾ ॥ ೩೩ ॥

ಯತ್ಕಿಂಚಿದಶುಭಂ ಕರ್ಮ ಕೃತಂ ಚೈವ ಕುಬುದ್ಧಿನಾ ।
ಅವಿಮುಕ್ತಂ ಪ್ರವಿಷ್ಟಸ್ಯ ತತ್ಸರ್ವಂ ಭಸ್ಮಸಾದ್ಭವೇತ್ ॥ ೩೪ ॥

---

೩೦-೩೧. ಆ ಕ್ಷೇತ್ರದಲ್ಲಿ ಮಹಾತ್ಮನಾದ ಈಶ್ವರನಿಗೆ ಕಪಾಲಮೋಚನೆಯಾಯಿತು. ಆ ತೀರ್ಥಕ್ಕೆ ಹೋಗಿ ಪಿತೃಗಳಿಗೆ ಪಿಂಡದಾನಮಾಡಿ ಶ್ರಾದ್ಧಗಳಿಂದ ಅವರನ್ನು ಸಂತೋಷಗೊಳಿಸುವವರು ಪ್ರಕಾಶಮಾನವಾದ ಲೋಕಗಳನ್ನು ಪಡೆಯುವರು.

೩೧-೩೨. ಬ್ರಹ್ಮಹತ್ಯೆ ಮಾಡಿದವನು ಯಾವಾಗಲಾದರೂ ಕಾಶೀಕ್ಷೇತ್ರಕ್ಕೆ ಹೋದರೆ ಆ ಕ್ಷೇತ್ರದ ಮಹಿಮೆಯಿಂದ ಅವನ ಬ್ರಹ್ಮಹತ್ಯಾಪಾಪವು ಹೋಗುವುದು.

೩೨-೩೩. ಕಾಶೀಕ್ಷೇತ್ರಯಾತ್ರೆಮಾಡಿದ ಮಹಾಪುಣ್ಯವಂತರಾದ ಜನರು ಪ್ರಾಕೃತದೇಹವನ್ನು ಕಳೆದುಕೊಂಡು ಮುಪ್ಪು ಮುಂತಾದುವುಗಳಿಲ್ಲದೆ ಶಾಶ್ವತಸುಖವನ್ನು ಹೊಂದುವರು.

೩೩-೩೪. ಸ್ತ್ರೀ ಅಥವಾ ಪುರುಷನು ತಿಳಿಯದೆ ಅಥವಾ ತಿಳಿದಾದರೂ ಯಾವುದಾದರೊಂದು ಪಾಪಕೃತ್ಯವನ್ನು ದುರ್ಬುದ್ಧಿಯಿಂದ ಮಾಡಿದ್ದರೂ ಅವನು ಕಾಶಿಯಾತ್ರೆ ಮಾಡಿದರೆ ಅದೆಲ್ಲವೂ ಸುಟ್ಟು ಬೂದಿಯಾಗುವುದು.

ಸದಾ ಯಜತಿ ಯಜ್ಞೇನ ಸದಾ ದಾನಂ ಪ್ರಯಚ್ಛತಿ ।
ಸದಾ ತಪಸ್ವೀ ಭವತಿ ಹ್ಯವಿಮುಕ್ತೇ ಸ್ಥಿತೋ ನರಃ ॥ ೩೫ ॥

ನ ಸಾ ಗತಿಃ ಕುರುಕ್ಷೇತ್ರೇ ಗಂಗಾದ್ವಾರೇ ನ ಪುಷ್ಕರೇ ।
ಯಾ ಗತಿರ್ವಿಹಿತಾ ಪುಂಸಾಮವಿಮುಕ್ತನಿವಾಸಿನಾಂ ॥ ೩೬ ॥

ಸರ್ವಾತ್ಮನಾ ತಪಃ ಸತ್ಯಂ ಪ್ರಾಣಿನಾಂ ನಾತ್ರ ಸಂಶಯಃ ।
ಅವಿಮುಕ್ತೇ ವಸೇದ್ಯಸ್ತು ಸ ತು ಸಾಕ್ಷಾನ್ಮಹೇಶ್ವರಃ ॥ ೩೭ ॥

ಅವಿಮುಕ್ತಂ ನ ಸೇವಂತೇ ತೇ ಮೂಢಾಸ್ತಾಮಸಾ ನರಾಃ ।
ವಿಣ್ಮೂತ್ರರಜಸಾಂ ಮಧ್ಯೇ ತೇ ವಸಂತಿ ಪುನಃ ಪುನಃ ॥ ೩೮ ॥

---

೩೫. ಅವಿಮುಕ್ತ ಕ್ಷೇತ್ರದಲ್ಲಿರುವ ಮನುಷ್ಯನು ಯಾವಾಗಲೂ ಯಜ್ಞ ಮಾಡುತ್ತಿರುವವನೂ, ದಾನ ಕೊಡುತ್ತಿರುವವನೂ ಆದ ತಪಸ್ವಿಯಾಗುವನು. ಎಂದರೆ ಯಾವಾಗಲೂ ಯಜ್ಞದಾನ ತಪಸ್ಸುಗಳನ್ನು ಮಾಡುತ್ತಿರುವುದರಿಂದುಂಟಾಗುವ ಫಲವು ಕಾಶೀಕ್ಷೇತ್ರದಲ್ಲಿ ವಾಸಮಾಡುವುದರಿಂದ ಲಭಿಸುತ್ತದೆಂದು ಭಾವ.

೩೬. ಅವಿಮುಕ್ತ ಕ್ಷೇತ್ರವಾಸಿಗಳಾದ ಮನುಷ್ಯರಿಗೆ ತಪ್ಪದೆ ದೊರೆಯುವ ಸದ್ಗತಿಯು ಕುರುಕ್ಷೇತ್ರ, ಗಂಗಾದ್ವಾರ ಮತ್ತು ಪುಷ್ಕರಕ್ಷೇತ್ರಗಳ ವಾಸದಿಂದ ಲಭಿಸುವುದಿಲ್ಲ.

೩೭. ಈ ಕ್ಷೇತ್ರದಲ್ಲಿ ಮಾಡುವ ತಪಸ್ಸು ಪ್ರಾಣಿಗಳಿಗೆ ಸರ್ವವಿಧದಿಂದಲೂ ಶ್ರೇಯಸ್ಕರವು. ಈ ವಿಷಯದಲ್ಲಿ ಸಂದೇಹವಿಲ್ಲ. ಅವಿಮುಕ್ತ ಕ್ಷೇತ್ರದಲ್ಲಿ ವಾಸಮಾಡುವವನು ಮಹೇಶ್ವರನ ಅನುಗ್ರಹಕ್ಕೆ ಮುಖ್ಯ ಪಾತ್ರನಾಗುವನು.

೩೮. ಮೂಢರಾದ ತಾಮಸಜನರು ಕಾಶೀಯಾತ್ರೆಯನ್ನು ಮಾಡುವುದಿಲ್ಲ. ಅವರು ಪುನಃ ಪುನಃ ಮಲಮೂತ್ರ ರಜಸ್ಸುಗಳ ಮಧ್ಯದಲ್ಲಿ ಬಿದ್ದು ನರಳುತ್ತಿರುತ್ತಾರೆ.

ಅವಿಮುಕ್ತೇ ಸ್ಥಿತಾ ನಿತ್ಯಂ ಪಾಂಸುಭಿರ್ವಾಯುನೇರಿತೈಃ ।
ಸ್ಪೃಷ್ಟಾ ದುಷ್ಕೃತಕರ್ಮಾಣೋ ಯಾಂತಿ ವೈ ಪರಮಾಂ ಗತಿಂ ॥ ೩೯ ॥
ಯಸ್ತತ್ರ ನಿವಸೇನ್ಮರ್ತ್ಯಃ ಸಂಯತಾತ್ಮಾ ಸಮಾಹಿತಃ ।
ತ್ರೈಲೋಕ್ಯಮಪಿ ಭುಂಜಾನೋ ವಾಯುಭಕ್ಷಸಮಃ ಸ್ಮೃತಃ ॥ ೪೦ ॥
ತತ್ರ ಮಾಸಂ ವಸೇದ್ಯಸ್ತು ಲಬ್ಧಾಹಾರೋ ಜಿತೇಂದ್ರಿಯಃ ।
ಸಮ್ಯಕ್ತೇನ ವ್ರತಂ ಚೀರ್ಣಂ ಮಹಾಪಾಶುಪತಂ ಭವೇತ್ ॥ ೪೧ ॥
ಜನ್ಮಮೃತ್ಯುಭಯಂ ಜಿತ್ವಾ ಸ ಯಾತಿ ಪರಮಾಂ ಗತಿಂ ।
ನಿಃಶ್ರೇಯಸಗತಿಂ ಪುಣ್ಯಾಂ ತಥಾ ಯೋಗಗತಿಂ ಲಭೇತ್ ॥ ೪೨ ॥
ನ ಹಿ ಯೋಗಗತಿರ್ಲಭ್ಯಾ ಜನ್ಮಾಂತರಶತೈರಪಿ ।
ಪ್ರಾಪ್ಯತೇ ಕ್ಷೇತ್ರಮಾಹಾತ್ಮ್ಯಾತ್ಪ್ರಭಾವಾಚ್ಛಂಕರಸ್ಯ ಚ ॥ ೪೩ ॥

---

೩೯. ಪಾಪಕೃತ್ಯವನ್ನು ಮಾಡಿದವರೂ ಸಹ ಅವಿಮುಕ್ತ ಕ್ಷೇತ್ರದಲ್ಲಿ ವಾಸಮಾಡಿದರೆ ನಿತ್ಯವೂ ಅಲ್ಲಿ ಬೀಸುವ ಗಾಳಿಯಿಂದ ಹೊಡೆದುಕೊಂಡುಬಂದ ಧೂಳಿಗಳ ಸ್ಪರ್ಶವಾಗಿ ಉತ್ತಮಗತಿಯನ್ನು ಹೊಂದುವರು.

೪೦. ಜಿತೇಂದ್ರಿಯನೂ, ಸಮಾಧಾನಚಿತ್ತನೂ ಆಗಿ ಕಾಶೀಕ್ಷೇತ್ರದಲ್ಲಿ ವಾಸಿಸುವ ಮನುಷ್ಯನು ವಾಯುಭಕ್ಷಸಮನಾಗಿ ತ್ರೈಲೋಕ್ಯಭೋಗಿಯಾಗುವನೆಂದು ಸ್ಮೃತವಾಗಿದೆ.

೪೧. ಅಲ್ಲಿ ಜಿತೇಂದ್ರಿಯನಾಗಿ ವಿಹಿತಾಹಾರವನ್ನು ಸೇವಿಸುತ್ತಾ ಒಂದು ತಿಂಗಳು ವಾಸಮಾಡುವವನು ಮಹಾಪಾಶುಪತವ್ರತವನ್ನು ವಿಧಿವತ್ತಾಗಿ ಮಾಡಿದ ಪುಣ್ಯಕ್ಕೆ ಭಾಗಿಯಾಗುವನು.

೪೨. ಅವನು ಜನನ ಮರಣ ಭಯವನ್ನು ಜಯಿಸಿ ಉತ್ತಮಗತಿಯನ್ನು ಪಡೆಯುವನು. ಮತ್ತು ಪುಣ್ಯಭೂಯಿಷ್ಠವಾದ ಮೋಕ್ಷಗತಿಯನ್ನೂ, ಯೋಗಮಾರ್ಗವನ್ನೂ ಸಹ ಹೊಂದುವನು.

೪೩. ನೂರಾರು ಜನ್ಮಗಳಲ್ಲಿ ತಪಸ್ಸು ಮಾಡಿದರೂ ಯೋಗಗತಿಯು ಲಭ್ಯವಾಗುವುದಿಲ್ಲ. ಅಂತಹುದು ಕಾಶೀಕ್ಷೇತ್ರಮಾಹಾತ್ಮ್ಯ ಮತ್ತು ಶಂಕರನ ಮಹಾತ್ಮ್ಯೆಯಿಂದ ಈ ಕ್ಷೇತ್ರದಲ್ಲಿ ಲಭಿಸುವುದು.

ಏಕಾಹಾರಸ್ತು ಯಸ್ತಿಷ್ಠೇನ್ಮಾಸಂ ತತ್ರ ಶುಭಾನನೇ ।
ಯಾವಜ್ಜೀವಕೃತಂ ಪಾಪಂ ಮಾಸೇನೈಕೇನ ನಶ್ಯತಿ ॥ ೪೪ ॥

ಆದೇಹಪಾತಾದ್ಯೋ ಮರ್ತ್ಯೋ ವಿಮುಕ್ತಂ ನೈವ ಮುಂಚತಿ ।
ಬ್ರಹ್ಮಚರ್ಯೇಣ ಸಂಯುಕ್ತಃ ಸ ಸಾಕ್ಷಾಚ್ಛಂಕರೋ ಭವೇತ್ ॥ ೪೫ ॥

ವಿಘ್ನೈರಾಹನ್ಯಮಾನೋಽಪಿ ಯೋಽವಿಮುಕ್ತಂ ನ ಚ ತ್ಯಜೇತ್ ।
ಸ ಮುಂಚತಿ ಜರಾಮೃತ್ಯುಂ ಜನ್ಮ ಚೈತಚ್ಚ ನಶ್ವರಂ ॥ ೪೬ ॥

ಆದೇಹಪತನಾದ್ಯೇ ತು ಸೇವಂತೇ ಹ್ಯವಿಮುಕ್ತಕಂ ।
ತೇ ಮೃತಾ ಹಂಸಯಾನೇನ ದಿವ್ಯಾನ್ ಲೋಕಾನ್ ಪ್ರಯಾಂತಿ ಹಿ ॥ ೪೭ ॥

ವಿಷಯಾಸಕ್ತಚಿತ್ತೋಽಪಿ ತ್ಯಕ್ತಭಕ್ತಿಮತಿರ್ನರಃ ।
ಇಹ ಕ್ಷೇತ್ರೇ ಮೃತಃ ಸೋಽಪಿ ಸಂಸಾರಂ ನ ಪುನರ್ವಿಶೇತ್ ॥ ೪೮ ॥

---

೪೪. ಶುಭಾಂಗೀ! ಒಪ್ಪತ್ತೂಟವಮಾಡುತ್ತಾ ಆ ಕ್ಷೇತ್ರದಲ್ಲಿ ವಾಸಮಾಡುವವನು ತನ್ನ ಜೀವಿತದಲ್ಲಿ ಮಾಡಿದ ಪಾಪವೆಲ್ಲವನ್ನೂ ಒಂದು ತಿಂಗಳಲ್ಲಿಯೇ ಪರಿಹರಿಸಿಕೊಳ್ಳುವನು.

೪೫. ಸಾಯುವವರೆಗೂ ಬಿಡದೇ ಅವಿಮುಕ್ತಕ್ಷೇತ್ರದಲ್ಲಿಯೇ ಬ್ರಹ್ಮಚರ್ಯೆಯಿಂದ ವಾಸಿಸುವ ಮನುಷ್ಯನು ಸಾಕ್ಷಾದೀಶ್ವರನೇ ಆಗುವನು ಎಂದರೆ ಈಶ್ವರನ ಪರಮಾನುಗ್ರಹಕ್ಕೆ ಪಾತ್ರನಾಗುವನೆಂದು ಭಾವ.

೪೬. ಸಾವಿರಾರು ವಿಘ್ನಗಳಿಂದ ತಡೆಯಲ್ಪಟ್ಟರೂ ಕಾಶೀಕ್ಷೇತ್ರವನ್ನು ಬಿಡದಿರುವವನು ನಶ್ವರವಾದ ಜನ್ಮ ಮುಪ್ಪು ಸಾವುಗಳನ್ನು ಹೋಗಲಾಡಿಸಿಕೊಳ್ಳುವನು.

೪೭. ಸಾಯುವವರೆಗೂ ಅವಿಮುಕ್ತ ಕ್ಷೇತ್ರದಲ್ಲಿಯೇ ವಾಸಿಸುವವರು ಮರಣಾನಂತರ ಹಂಸಯಾನದಿಂದ ದಿವ್ಯಲೋಕಕ್ಕೆ ಹೋಗುವರು.

೪೮. ಭಗವಂತನಲ್ಲಿ ಭಕ್ತಿಮಾಡದೆ ವಿಷಯಾಸಕ್ತಚಿತ್ತನಾಗಿದ್ದರೂ ಈ ಕಾಶೀಕ್ಷೇತ್ರದಲ್ಲಿ ಮರಣ ಹೊಂದಿದವನು ಪುನಃ ಸಂಸಾರಕ್ಕೆ ಸಿಲ್ಲುಕುವುದಿಲ್ಲ.

ಸ್ವರ್ಗಾಪವರ್ಗಯೋರ್ಹೇತುರೇತತ್ತೀರ್ಥವರಂ ಭುವಿ ।
ಯಸ್ತತ್ರ ಪಂಚತಾಂ ಯಾತಿ ತಸ್ಯ ಮುಕ್ತಿರ್ನ ಸಂಶಯಃ ॥ ೪೯ ॥

ಜನ್ಮಾಂತರಸಹಸ್ರೇಣ ಯೋಗೀ ಯತ್ಪದಮಾಪ್ನುಯಾತ್ ।
ತದಿಹೈವ ಪರಂ ಮೋಕ್ಷಂ ಮರಣಾದಧಿಗಚ್ಛತಿ ॥ ೫೦ ॥

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾ ವೈ ವರ್ಣಸಂಕರಾಃ ।
ಕ್ರಿಮಯಶ್ಚೈವ ಯೇ ಮ್ಲೇಚ್ಛಾಃ ಸಂಕೀರ್ಣಾಃ ಪಾಪಯೋನಯಃ ॥೫೧॥

ಕೀಟಾಃ ಪಿಪೀಲಿಕಾಶ್ಚೈವ ಯೇ ಚಾನ್ಯೇ ಮೃಗಪಕ್ಷಿಣಃ ।
ಕಾಲೇನ ನಿಧನಂ ಪ್ರಾಪ್ತಾಸ್ತೇಽಪಿ ದೇವೇಶ್ವರಾಃ ಸ್ಮೃತಾಃ ॥ ೫೨ ॥

ಚಂದ್ರಾರ್ಧಮೌಲಯಃ ಸರ್ವೇ ಲಲಾಟಾಕ್ಷಾ ವೃಷಧ್ವಜಾಃ ।
ಪ್ರಾಣಾಂಸ್ತ್ಯಜಂತಿ ಯೇ ತತ್ರ ಪ್ರಾಣಿನಸ್ತತ್ವತಃ ಶುಭೇ ॥ ೫೩ ॥

---

೪೯. ಭೂಲೋಕದಲ್ಲಿ ಉತ್ತಮವಾದ ಈ ತೀರ್ಥವು ಮೋಕ್ಷಗಳಿಗೆ ಕಾರಣವು. ಈ ಕ್ಷೇತ್ರದಲ್ಲಿ ಸಾಯುವವನು ಮುಕ್ತಿಯನ್ನು ಪಡೆಯುವನು. ಸಂದೇಹವಿಲ್ಲ.

೫೦. ಯೋಗಾಭ್ಯಾಸ ಶೀಲನಾದವನು ಸಾವಿರಾರು ಜನ್ಮಗಳಾದಮೇಲೆ ಹೊಂದಬಹುದಾದ ಉತ್ತಮ ಮೋಕ್ಷಪದವಿಯನ್ನು ಮನುಷ್ಯನು ಈ ಕ್ಷೇತ್ರದಲ್ಲಿ ಮೃತನಾಗುವುದರಿಂದಲೇ ಪಡೆಯುವನು.

೫೧-೫೨. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಸಂಕರಜಾತಿಯವರು, ಕ್ರಿಮಿಗಳು, ಪಾಪಜನ್ಮವನ್ನು ಹೊಂದಿದ ಸಂಕೀರ್ಣಜಾತಿಯವರಾದ ಮ್ಲೇಂಛರು, ಹುಳು, ಇರುವೆ ಮುಂತಾಗಿ ಇನ್ನೂ ಇತರ ಮೃಗಪಕ್ಷಿಗಳೂ ಸಹ ಆಯುಸ್ಸು ಕಳೆದು ಕಾಶೀಕ್ಷೇತ್ರದಲ್ಲಿ ಮೃತರಾದರೆ ಅವರೆಲ್ಲರೂ ದೇವೇಶ್ವರನ ಪರಮಾನುಗ್ರಹಕ್ಕೆ ಪಾತ್ರರಾಗುವರೆಂದು ಸ್ಮೃತವಾಗಿದೆ.

೫೩. ಶೋಭನೇ! ಆ ಕ್ಷೇತ್ರದಲ್ಲಿ ನಿಜವಾಗಿಯೂ ಪ್ರಾಣಬಿಡುವವರೆಲ್ಲರೂ ಶಿರಸ್ಸಿನಲ್ಲಿ ಅರ್ಧಚಂದ್ರನನ್ನು ಧರಿಸಿರುವ, ಹಣೆಯಮೇಲೆ ಕಣ್ಣುಳ್ಳ ಈಶ್ವರನ ಪರಮಾನುಗ್ರಹಕ್ಕೆ ಪಾತ್ರರಾಗುವರು.

ರುದ್ರತ್ವಂ ತೇ ತು ಸಂಪ್ರಾಪ್ಯ ಮೋದಂತೇ ಶಿವಸನ್ನಿಧೌ ।
ಅಕಾಮೋ ವಾ ಸಕಾಮೋ ವಾ ತಿರ್ಯಗ್ಯೋನಿಗತೋಽಪಿ ವಾ ॥ ೫೪ ॥

ಅವಿಮುಕ್ತೇ ತ್ಯಜೇತ್ಪ್ರಾಣಾತ್ ಮುಕ್ತಿಭಾಕ್ಸ್ಯಾನ್ನ ಸಂಶಯಃ ।
ಶಿವಭಕ್ತಿಪರಾ ನಿತ್ಯಂ ನಾನ್ಯಭಕ್ತಾಶ್ಚ ಯೇ ನರಾಃ ॥ ೫೫ ॥

ನ ತೇಷಾಂ ಪುನರಾವೃತ್ತಿಃ ಕಲ್ಪಕೋಟಿಶತೈರಪಿ ।
ಅವಿಮುಕ್ತೇ ಮೃತ್ಯುಕಾಲೇ ಭೂತಾನಾಮೀಶ್ವರಃ ಸ್ವಯಂ ॥ ೫೬ ॥

ಕರ್ಮಭಿಃ ಪ್ರೇರ್ಯಮಾಣಾನಾಂ ಕರ್ಣಜಾಪ್ಯಂ ಪ್ರಯಚ್ಛತಿ ।
ಸ್ವಯಂ ರಾಮೇಣ ಚಾಪ್ಯುಕ್ತಂ ಶಿವಾಯ ಶಿವಕಾರಿಣೇ ॥ ೫೭ ॥

ಅತಿಪ್ರಸನ್ನಚಿತ್ತೇನ ಅವಿಮುಕ್ತನಿವಾಸಿನೇ ।
ಮುಮೂರ್ಷೋರ್ದಕ್ಷಿಣೇ ಕರ್ಣೇ ಯಸ್ಯ ಕಸ್ಯಾಪಿ ವಾ ಸ್ವಯಂ ॥೫೮॥

---

೫೪-೫೫. ಅವರು ರುದ್ರಸಾಮೀಪ್ಯವನ್ನು ಹೊಂದಿ ಶಿವಸನ್ನಿಧಿಯಲ್ಲಿ ಸುಖಪಡುವರು. ನಿಷ್ಕಾಮನಾಗಲಿ ಅಥವಾ ಸಕಾಮನಾಗಲಿ, ತಿರ್ಯಗ್ಜಂತುವಿನ ಜನ್ಮವನ್ನು ಹೊಂದಿದವನಾಗಲಿ ಎಂತಹವನಾದರೂ ಕಾಶೀಕ್ಷೇತ್ರದಲ್ಲಿ ಪ್ರಾಣತ್ಯಾಗಮಾಡಿದರೆ ಅವನು ಮುಕ್ತಿಯನ್ನು ಪಡೆಯುವನು. ಸಂದೇಹವಿಲ್ಲ.

೫೫-೫೬. ಯಾವಾಗಲೂ ಅನ್ಯಭಕ್ತರಾಗದೆ ಶಿವಭಕ್ತಿಪರರಾದ ಜನರು ನೂರು ಕೋಟಿ ಕಲ್ಪಗಳಾದರೂ ಹಿಂದಿರುಗದೆ ಅವನ ಸನ್ನಿಧಿಯಲ್ಲಿಯೇ ಸುಖಪಡುವರು.

೫೬-೫೭. ಅವಿಮುಕ್ತಕ್ಷೇತ್ರದಲ್ಲಿ ಭೂತಗಣಾಧಿಪತಿಯಾದ ಈಶ್ವರನು ಮರಣಕಾಲದಲ್ಲಿ ಜಪಿಸಬೇಕಾದ ಮಂತ್ರವನ್ನು ಕರ್ಮಫಲವನ್ನನುಭವಿಸುತ್ತಿರುವ ಮನುಷ್ಯರ ಕರ್ಣದಲ್ಲಿ ತಾನೇಬಂದು ಹೇಳುವನು.

೫೭-೫೯. ರಾಮನೂ ಸಹ ಅತ್ಯಂತ ಪ್ರಸನ್ನಮನಸ್ಸಿನಿಂದ ಮಂಗಳಕಾರಿಯೂ, ಅವಿಮುಕ್ತಕ್ಷೇತ್ರವಾಸಿಯೂ ಆದ ಶಿವನನ್ನು ಕುರಿತು ಶಿವನೇ!

ಉಪದೇಕ್ಷ್ಯಸಿ ಮನ್ಮಂತ್ರಂ ಸ ಮುಕ್ತೋ ಭವಿತಾ ಶಿವ |
ಅಂತಕಾಲೇ ಮನುಷ್ಯಾಣಾಂ ಛಿದ್ಯಮಾನೇಷು ಕರ್ಮಸು || ೫೯ ||

ವಾಯುನಾ ಪ್ರೇರ್ಯಮಾಣಾನಾಂ ಸ್ಮೃತಿರ್ನೈವೋಪಜಾಯತೇ |
ಯೇವಿಮುಕ್ತೇ ಸ್ಥಿತಾ ರುದ್ರಾ ಭಕ್ತಪ್ರೀತಿಪ್ರದಾಯಕಾಃ || ೬೦ ||

ಕರ್ಣಜಾಪ್ಯಂ ಪ್ರಯಚ್ಛಂತಿ ಡಿಮಿಚಂಡೇಶ್ವರಾದಯಃ |
ನಾವಿಮುಕ್ತೇ ಮೃತಃ ಕಶ್ಚಿನ್ನರಕಂ ಯಾತಿ ಕಿಲ್ಬಿಷೀ || ೬೧ ||

ಈಶ್ವರಾನುಗೃಹೀತಾ ಹಿ ಸರ್ವೇ ಯಾಂತಿ ಪರಾಂ ಗತಿಂ |
ಉದ್ದೇಶಮಾತ್ರಾತ್ಕಥಿತಾ ಅವಿಮುಕ್ತಗುಣಾಸ್ತವ || ೬೨ ||

---

ಸಾಯುವುದಕ್ಕೆ ಸಿದ್ಧನಾಗಿರುವವನು ಅಥವಾ ಯಾವನಾದರೊಬ್ಬ ಮನುಷ್ಯನ ಬಲಗಿವಿಯಲ್ಲಿ ನನ್ನ ಮಂತ್ರವನ್ನು ನೀನು ಉಪದೇಶಿಸಿದರೆ ಅವನು ಮುಕ್ತನಾಗುವನು.

೫೯-೬೦. ಅಂತ್ಯಕಾಲದಲ್ಲಿ ವಾಯುವಿನಿಂದ ವ್ಯಾಪಿಸಲ್ಪಟ್ಟ ಮನುಷ್ಯರ ವ್ಯಾಪಾರಗಳು ನಿಂತು ಸ್ಮರಣೆಯು ತಪ್ಪುತ್ತದೆ.

೬೦-೬೧. ಆಗ ಅವಿಮುಕ್ತಕ್ಷೇತ್ರದಲ್ಲಿರುವ ಡಿಮಿ, ಚಂಡೇಶ್ವರ ಮುಂತಾದ ಭಕ್ತಾಭೀಷ್ಟಪ್ರದಾಯಕರಾದ ರುದ್ರರು ತಾರಕವಾದ ಜಪ್ಯಮಂತ್ರವನ್ನು ಕಿವಿಯಲ್ಲಿ ಹೇಳುವರು. ಅವಿಮುಕ್ತಕ್ಷೇತ್ರದಲ್ಲಿ ಮೃತನಾದ ಪಾಪಿಯೂ ಸಹ ನರಕಕ್ಕೆ ಹೋಗುವುದಿಲ್ಲ.

೬೨-೬೩. ಈ ಕ್ಷೇತ್ರದಲ್ಲಿ ವಾಸಮಾಡಿ ಮೃತನಾಗಬೇಕೆಂದು ಅಪೇಕ್ಷಿಸುವ ಮಾತ್ರದಿಂದ ಜನರೆಲ್ಲರೂ ಈಶ್ವರಾನುಗ್ರಹವನ್ನು ಪಡೆದು ಉತ್ತಮಗತಿಯನ್ನು ಹೊಂದುವರು.

ಮೋಹಿನೀ ! ಅವಿಮುಕ್ತಕ್ಷೇತ್ರದ ಗುಣಗಳು ಸಮುದ್ರದಲ್ಲಿರುವ ರತ್ನಗಳಂತೆ ಹೇರಳವಾಗಿವೆ. ಅವುಗಳನ್ನು ನಿನಗೆ ಸಂಕ್ಷೇಪವಾಗಿ ತಿಳಿಸಿದೆನು.

ಸಮುದ್ರಸ್ಯೈವ ರತ್ನಾನಾಮವಿಮುಕ್ತಸ್ಯ ವಿಸ್ತರಃ ।
ಜ್ಞಾನವಿಜ್ಞಾನನಿಷ್ಠಾನಾಂ ಪರಮಾನಂದಮಿಚ್ಛತಾಂ ॥ ೬೩ ॥

ಯಾ ಗತಿರ್ವಿಹಿತಾ ನೂನಂ ಸ್ವರ್ನೀತೇ ತು ಮೃತಸ್ಯ ಸಾ ।
ಪ್ರಾಣಾನಿಹ ನರಸ್ತ್ಯಕ್ತ್ವಾ ನ ಪುನರ್ಜಾಯತೇ ಕ್ವಚಿತ್ ॥ ೬೪ ॥

ಅನಂತಾ ಸಾ ಗತಿಸ್ತಸ್ಯ ಯೋಗಿನಾಮೇವ ಯಾ ಸ್ಮೃತಾ ।
ಯೋಗಪೀಠಂ ಶ್ಮಶಾನಾಖ್ಯಂ ಯತ್ತೀರ್ಥಂ ಮಣಿಕರ್ಣಿಕಾ ॥ ೬೫ ॥

ತೇಷು ಮುಕ್ತಿಃ ಸಮುದ್ದಿಷ್ಟಾ ಪತಿತಾನಾಂ ಸ್ವಕರ್ಮಣಾ ।
ತತ್ರಾಪಿ ಸರ್ವತೀರ್ಥಾನಾಮುತ್ತಮಾ ಮಣಿಕರ್ಣಿಕಾ ॥ ೬೬ ॥

ಯತ್ರ ನಿತ್ಯಂ ವರಾರೋಹೇ ಸಾನ್ನಿಧ್ಯಂ ಧೂರ್ಜಟೇಃ ಸ್ಮೃತಂ ।
ದಶಾನಾಮಶ್ವಮೇಧಾನಾಂ ಯಜ್ಞಾನಾಂ ಯತ್ಫಲಂ ಸ್ಮೃತಂ ॥ ೬೭ ॥

---

೬೩-೬೪. ಪರಮಾನಂದವನ್ನು ಬಯಸಿ ಜ್ಞಾನವಿಜ್ಞಾನನಿಷ್ಠರಾದವರಿಗೆ ಸಂಭವಿಸುವಂತಹ ಸದ್ಗತಿಯೇ ಈ ಕ್ಷೇತ್ರದಲ್ಲಿ ಮೃತನಾಗಿ ಸ್ವರ್ಗಲೋಕಕ್ಕೆ ಹೋದವನಿಗೆ ಲಭಿಸುವುದು. ಇಲ್ಲಿ ಪ್ರಾಣತ್ಯಾಗಮಾಡಿದ ಮನುಷ್ಯನು ಪುನಃ ಹುಟ್ಟುವುದಿಲ್ಲ.

೬೫-೬೬. ಯೋಗಿಗಳಿಗಾಗುವ ಸದ್ಗತಿಯೇ ಅವನಿಗಾಗುವುದು. ಅದು ಅನಂತವಾದುದು. ಶ್ಮಶಾನವೆಂಬ ತೀರ್ಥವು, ಯೋಗಪೀಠವು ಮತ್ತು ಮಣಿಕರ್ಣಿಕೆಯೆಂಬ ಕಾಶಿಯಲ್ಲಿನ ತೀರ್ಥಗಳಲ್ಲಿ ಪತಿತರಿಗೂ ಸಹ ಪಾಪಪರಿಹಾರವಾಗುವುದು. ಅದರಲ್ಲಿಯೂ ಮಣಿಕರ್ಣಿಕೆಯು ಸರ್ವತೀರ್ಥೋತ್ತಮವು.

೬೭-೬೯. ಅಲ್ಲಿ ಯಾವಾಗಲೂ ಈಶ್ವರನ ಸನ್ನಿಧಾನವಿರುತ್ತದೆ. ವರಾರೋಹೇ! ಆ ತೀರ್ಥದಲ್ಲಿ ಸ್ನಾನಮಾಡಿದ ಧರ್ಮಾತ್ಮನಿಗೆ ಹತ್ತು ಅಶ್ವಮೇಧಯಜ್ಞಗಳನ್ನು ಮಾಡುವುದರಿಂದ ಬರುವಷ್ಟು ಫಲವು ಲಭಿಸುತ್ತದೆ. ಇಲ್ಲಿ ವೇದಪಾರಂಗತನಾದ ಬ್ರಾಹ್ಮಣನಿಗೆ ಸ್ವಲ್ಪವಾಗಿ ದಾನಮಾಡಿದವನೂ ಸಹ ಶುಭಗತಿಯನ್ನು ಹೊಂದಿ ಅಗ್ನಿಯಂತೆ ವಿರಾಜಿಸುವನು.

ತದವಾಪ್ನೋತಿ ಧರ್ಮಾತ್ಮಾ ತತ್ರ ಸ್ನಾತ್ವಾ ವರಾನನೇ ।
ಸ್ವಲ್ಪಮಪ್ಯತ್ರ ಯೋ ದದ್ಯಾದ್ಬ್ರಾಹ್ಮಣೇ ವೇದಪಾರಗೇ ॥ ೬೮ ॥

ಶುಭಾಂ ಗತಿಮವಾಪ್ನೋತಿ ಹುತಾಶ ಇವ ದೀಪ್ಯತೇ ।
ಉಪವಾಸಂ ತು ಯಃ ಕೃತ್ವಾ ವಿಪ್ರಾನ್ ಸಂತರ್ಪಯೇನ್ನರಃ ॥ ೬೯ ॥

ಸ ಸೌತ್ರಾಮಣಿಯಜ್ಞಸ್ಯ ಫಲಮಾಪ್ನೋತಿ ನಿಶ್ಚಿತಂ ।
ತತ್ರ ದೀಪಪ್ರದಾನೇನ ಜ್ಞಾನವತ್ ಸ್ಫುರತೀಂದ್ರಿಯಂ ॥ ೭೦ ॥

ಪ್ರಾಪ್ನೋತಿ ಧೂಪದಾನೇನ ಸ್ಥಾನಂ ರುದ್ರನಿಷೇವಿತಂ ।
ವೃಷಭಂ ತರುಣಂ ಸೌಮ್ಯಂ ಚತುರ್ವತ್ಸತರೀಯುತಂ ॥ ೭೧ ॥

ಯೋಂಕಯಿತ್ವಾ ಮೋಚಯತಿ ಸ ಯಾತಿ ಪರಮಾಂ ಗತಿಂ ।
ಪಿತೃಭಿಃ ಸಹಿತೋ ಮೋಕ್ಷಂ ಗಚ್ಛತ್ಯೇವ ನ ಸಂಶಯಃ ॥ ೭೨ ॥

ಕಿಮ್ನು ವೈ ಬಹುನೋಕ್ತೇನ ಧರ್ಮಾದೀಂಸ್ತು ಪ್ರಕುರ್ವತಃ ।
ಯಚ್ಛಿವಂ ತು ಸಮುದ್ದಿಶ್ಯ ತದನಂತಫಲಂ ಭವೇತ್ ॥ ೭೩ ॥

---

೬೯-೭೦. ಆ ತೀರ್ಥದಲ್ಲಿ ಉಪವಾಸಮಾಡಿ ಬ್ರಾಹ್ಮಣಸಂತರ್ಪಣೆ ಮಾಡುವ ಮನುಷ್ಯನು ನಿಜವಾಗಿಯೂ ಸೌತ್ರಾಮಣಿ ಯಜ್ಞದ ಫಲವನ್ನು ಹೊಂದುವನು. ಅಲ್ಲಿ ದೀಪದಾನಮಾಡುವುದರಿಂದ ಜ್ಞಾನದಂತೆ ಇಂದ್ರಿಯವು ಸ್ಫುರಿಸುತ್ತದೆ.

೭೧-೭೨. ಧೂಪದಾನಮಾಡಿದರೆ ರುದ್ರನು ಸನ್ನಿಹಿತನಾಗಿರುವ ಸ್ಥಾನವು ಲಭಿಸುವುದು. ತರುಣ ವಯಸ್ಸಿನ, ಸೌಮ್ಯವಾದ, ವತ್ಸತರಿಯಿಂದ ಕೂಡಿದ ಹೋರಿಗೆ ಬರೆಹಾಕಿಬಿಡುವವನು ಉತ್ತಮಗತಿಯನ್ನು ಹೊಂದುವನು. ಅವನು ಖಂಡಿತವಾಗಿಯೂ ಪಿತೃಗಳೊಡನೆ ಮೋಕ್ಷಕ್ಕೆ ಹೋಗುವನು. ಸಂದೇಹವಿಲ್ಲ.

೭೩. ಹೆಚ್ಚು ಹೇಳಿದುದರಿಂದೇನು ? ಅಲ್ಲಿ ಶಿವಪ್ರೀತ್ಯರ್ಥವಾಗಿ ಧರ್ಮಾದಿಗಳನ್ನು ಮಾಡುವವನಿಗೆ ಅನಂತಫಲವು ಬರುತ್ತದೆ.

ದಶಾಶ್ವಮೇಧಿಕಂ ಪುಣ್ಯಂ ಪುಷ್ಪದಾನೇ ಪ್ರಕೀರ್ತಿತಂ |
ಅಗ್ನಿಹೋತ್ರಫಲಂ ಧೂಪೇ ಗಂಧೇ ಭೂದಾನಜಂ ಫಲಂ || ೭೪ ||

ಮಾರ್ಜನೇ ಗೋಪ್ರದಾನಸ್ಯ ಫಲಮತ್ರ ಪ್ರಕೀರ್ತಿತಂ |
ಅನುಲೇಪೇ ದಶಗುಣಂ ಮಾಲ್ಯೇ ದಶಗುಣಂ ಸ್ಮೃತಂ || ೭೫ ||

ಗೀತೇ ಸಹಸ್ರಗುಣಿತಂ ವಾದ್ಯೇ ಲಕ್ಷಗುಣಂ ಸ್ಮೃತಂ |
ಅವಿಮುಕ್ತೇ ಮಹಾದೇವಮರ್ಚಯಂತಿ ಸ್ತುವಂತಿ ವೈ || ೭೬ ||

ಸರ್ವಪಾಪವಿಮುಕ್ತಾಸ್ತೇ ಸ್ವಸ್ತಿಷ್ಠಂತ್ಯಜರಾಮರಾಃ |
ಅವಿಮುಕ್ತಂ ಸಮಾಸಾದ್ಯ ಲಿಂಗಮರ್ಚಯತೇ ನರಃ || ೭೭ ||

ಕಲ್ಪಕೋಟಿಶತೈಶ್ಚಾಪಿ ತಸ್ಯ ನಾಸ್ತಿ ಪುನರ್ಭವಃ |
ಅಜರೋ ಹ್ಯಮರಶ್ಚೈವ ಕ್ರೀಡೇತ್ಸ ಭವಸನ್ನಿಧೌ || ೭೮ ||

---

೭೪. ಆ ಕ್ಷೇತ್ರದಲ್ಲಿ ಪುಷ್ಪದಾನಮಾಡಿದರೆ ಹತ್ತು ಅಶ್ವಮೇಧಯಜ್ಞಗಳ ಪುಣ್ಯವೂ, ಧೂಪದಾನಮಾಡಿದರೆ ಅಗ್ನಿಹೋತ್ರಫಲವೂ, ಗಂಧದಾನಮಾಡಿದರೆ ಭೂದಾನದ ಫಲವೂ ಬರುತ್ತದೆ.

೭೫. ಅಲ್ಲಿ ಕಸಗುಡಿಸಿದರೆ ಗೋದಾನದ ಫಲವೂ, ಸಾರಿಸಿದರೆ ಅದರ ಹತ್ತರಷ್ಟು ಪುಣ್ಯವೂ, ಮಾಲಿಕೆಯ ದಾನಮಾಡಿದರೆ ಅದರ ಹತ್ತರಷ್ಟು ಫಲವೂ ಬರುತ್ತದೆ.

೭೬-೭೭. ಅಲ್ಲಿ ಗಾನಮಾಡಿದರೆ ಅದರ ಸಾವಿರದಷ್ಟೂ, ವಾದ್ಯವನ್ನು ಬಾರಿಸಿದರೆ ಲಕ್ಷದಷ್ಟೂ ಫಲವು ಲಭಿಸುವುದು. ಅವಿಮುಕ್ತ ಕ್ಷೇತ್ರದಲ್ಲಿ ಮಹಾದೇವನನ್ನು ಪೂಜಿಸಿದರೆ ಸ್ತೋತ್ರಮಾಡುವವರು ಸಕಲಪಾಪಗಳಿಂದಲೂ ಮುಕ್ತರಾಗಿ ಮುಪ್ಪುಸಾವುಗಳಿಲ್ಲದೆ ಸ್ವರ್ಗಲೋಕದಲ್ಲಿ ಸುಖಪಡುವರು.

೭೭-೭೮. ಕಾಶಿಗೆ ಹೋಗಿ ಲಿಂಗಾರ್ಚನೆ ಮಾಡುವ ಮನುಷ್ಯನು ನೂರಾರುಕೋಟಿ ಕಲ್ಪಗಳಾದರೂ ಪುನಃ ಹುಟ್ಟುವುದಿಲ್ಲ. ಅವನು ಮುಪ್ಪು ಸಾವುಗಳಿಲ್ಲದೆ ಈಶ್ವರನ ಸನ್ನಿಧಿಯಲ್ಲಿ ವಿಹರಿಸುವನು.

ಯೇ ತು ಧ್ಯಾನಂ ಸಮಾಸಾದ್ಯ ಮುಕ್ತಾತ್ಮಾನಃ ಸಮಾಹಿತಾಃ ।
ಸಂನಿಯಮ್ಯೇಂದ್ರಿಯಗ್ರಾಮಂ ಜಪಂತಿ ಶತರುದ್ರಿಯಂ ॥ ೭೯ ॥

ಅವಿಮುಕ್ತೇ ಸ್ಥಿತಾ ನಿತ್ಯಂ ಕೃತಾರ್ಥಾಸ್ತೇ ದ್ವಿಜೋತ್ತಮಾಃ ।
ಏಕಾಹಮುಪವಾಸಂ ಯಃ ಕರಿಷ್ಯತಿ ಯಶಸ್ವಿನಿ ॥ ೮೦ ॥

ಫಲಂ ವರ್ಷಶತಸ್ಯೇಹ ಲಭತೇ ನಾತ್ರ ಸಂಶಯಃ ।
ಅತಃ ಪರಂ ತು ಸಾಯುಜ್ಯಂ ಗಂಗಾವರುಣಸಂಗಮಂ ॥ ೮೧ ॥

ಶ್ರವಣದ್ವಾದಶೀಯೋಗೋ ಬುಧವಾರೇ ಯದಾ ಭವೇತ್ ।
ತದಾ ತಸ್ಮಿನ್ನರಃ ಸ್ನಾತ್ವಾ ಸಂನಿಹತ್ಯ ಫಲಂ ಲಭೇತ್ ॥ ೮೨ ॥

ಶ್ರಾದ್ಧಂ ಕರೋತಿ ಯಸ್ತತ್ರ ತಸ್ಮಿನ್ ಕಾಲೇ ಶುಭಾನನೇ ।
ತಾರಯಿತ್ವಾ ಪಿತೄನ್ ಸರ್ವಾನ್ ವಿಷ್ಣುಲೋಕಂ ಸ ಗಚ್ಛತಿ ॥ ೮೩ ॥

---

೭೯-೮೦. ಯಾವಾಗಲೂ ।ಅವಿಮುಕ್ತ ಕ್ಷೇತ್ರದಲ್ಲಿ ನೆಲೆಸಿ ಚಿತ್ತಸಮಾಧಾನದಿಂದ ಧ್ಯಾನಯೋಗನಿರತರಾಗಿ ಇಂದ್ರಿಯ ಸಮೂಹವನ್ನು ಸ್ವಾಧೀನದಲ್ಲಿಟ್ಟುಕೊಂಡು ಶತರುದ್ರಿಯವನ್ನು ಜಪಿಸುವ ದ್ವಿಜೋತ್ತಮರು ಮುಕ್ತರಾಗಿ ಕೃತಾರ್ಥರಾಗುವರು.

೮೦-೮೧. ಯಶಸ್ವಿನಿಯೇ! ಇಲ್ಲಿ ಒಂದು ದಿವಸ ಉಪವಾಸ ಮಾಡುವವನು ನೂರುವರ್ಷ ವ್ರತಮಾಡಿದ ಫಲವನ್ನು ಹೊಂದುವನು. ಸಂದೇಹವಿಲ್ಲ. ಇದರಿಂದ ಉತ್ತಮ ಸಾಯುಜ್ಯವನ್ನೂ ಹೊಂದುವನು.

೮೨. ಗಂಗಾವರುಣಸಂಗಮ, ಬುಧವಾರ, ಶ್ರವಣ ದ್ವಾದಶೀಯೋಗ ಇವುಗಳು ಸಂಭವಿಸಿದಾಗ ಅಲ್ಲಿ ಸ್ನಾನಮಾಡಿದರೆ ಮನುಷ್ಯನು ಎಲ್ಲಾ ಫಲಗಳನ್ನೂ ಒಟ್ಟಿಗೆ ಪಡೆಯುವನು.

೮೩. ಆ ಕಾಲದಲ್ಲಿ ಆ ತೀರ್ಥದಲ್ಲಿ ಶ್ರಾದ್ಧಮಾಡುವವನು ಸಕಲ ಪಿತೃಗಳನ್ನೂ ಉದ್ಧರಿಸಿ ವಿಷ್ಣುಲೋಕಕ್ಕೆ ಹೋಗುವನು.

ವರುಣಾಸ್ಯಾಸ್ತು ಜಾಹ್ನವ್ಯಾಃ ಸಂಗಮೋ ಲೋಕವಿಶ್ರುತೇ ।
ದತ್ವಾಶ್ವಂ ಚ ವಿಧಾನೇನ ಸ ಭೂಯೋಽಪಿ ನ ಜಾಯತೇ ॥ ೮೪ ॥

ಯಸ್ತತ್ರ ಸಂಗಮೇಶಾನಮರ್ಚಯೇದ್ಭಕ್ತಿಮಾನ್ನರಃ ।
ಸ ಸಾಕ್ಷಾದ್ದೇವದೇವೇಶೋ ನಿಗ್ರಹಾನುಗ್ರಹೇ ಕ್ಷಮಃ ॥ ೮೫ ॥

ದೇವೇಶ್ವರಸ್ಯ ಪೂರ್ವೇಣ ಸ್ವಯಂ ತಿಷ್ಠತಿ ಕೇಶವಃ ।
ಕೇಶವಸ್ಯ ಚ ಪೂರ್ವೇಣ ವಿಶ್ರುತಃ ಸಂಗಮೇಶ್ವರಃ ॥ ೮೬ ॥

ಇತಿ ಶ್ರೀನಾರದೀಯಮಹಾಪುರಾಣೋತ್ತರಭಾಗೇ ಮೋಹಿನೀ
ವಸುಸಂವಾದೇ ಕಾಶೀಮಾಹಾತ್ಮ್ಯಂ ನಾಮ
ಅಷ್ಟಚತ್ವಾರಿಂಶತ್ತಮೋಽಧ್ಯಾಯಃ

---

೮೪. ಲೋಕವಿಖ್ಯಾತವಾದ ವರುಣಾಸೀ ಗಂಗೆಗಳ ಸಂಗಮದಲ್ಲಿ ವಿಧಿವತ್ತಾಗಿ ಅಶ್ವದಾನಮಾಡಿದರೆ ಅವನು ಪುನರ್ಜನ್ಮವನ್ನು ಹೊಂದುವುದಿಲ್ಲ.

೮೫. ಅಲ್ಲಿರುವ ಸಂಗಮೇಶ್ವರನನ್ನು ಭಕ್ತಿಯಿಂದ ಪೂಜಿಸುವ ಮನುಷ್ಯನು ಸಾಕ್ಷಾದ್ದೇವದೇವೇಶನ ಅನುಗ್ರಹಕ್ಕೆ ಪಾತ್ರನಾಗಿ ನಿಗ್ರಹಾನುಗ್ರಹ ಸಾಮರ್ಥ್ಯವನ್ನು ಪಡೆಯುವನು.

೮೬. ಈಶ್ವರದೇವನಿಗೆ ಪೂರ್ವದಿಕ್ಕಿನಲ್ಲಿ ಕೇಶವನು ಸಾಕ್ಷಾತ್ತಾಗಿ ಸನ್ನಿಹಿತನಾಗಿರುವನು. ಕೇಶವನಿಗೆ ಪೂರ್ವಭಾಗದಲ್ಲಿ ಸಂಗಮೇಶ್ವರನು ವಿಖ್ಯಾತನಾಗಿರುವನು.

ಇಂತು ಶ್ರೀನಾರದೀಯಪುರಾಣೋತ್ತರಭಾಗದ ಮೋಹಿನೀವಸುಸಂಭಾಷಣೆ
ಯಲ್ಲಿ ಕಾಶೀ ಮಾಹಾತ್ಮ್ಯೆಯೆಂಬ ನಲವತ್ತೆಂಟನೆಯ
ಅಧ್ಯಾಯವು ಮುಗಿದುದು.



## ಏಕೋನಪಂಚಾಶತ್ತಮೋಽಧ್ಯಾಯಃ

---

### ವಸುರುವಾಚ

ವಾಯವ್ಯೇ ತು ದಿಶೋ ಭಾಗೇ ತಸ್ಯ ಪೀಠಸ್ಯ ಸುಂದರಿ ।
ಲಿಂಗಂ ಪ್ರಸ್ಥಾಪಿತಂ ತತ್ರ ಸಗರೇಣ ಚತುರ್ಮುಖಂ ॥ ೧ ॥

ಸಾಗರಾದ್ವಾಯುಕೋಣೇ ತು ಭದ್ರದೇಹಂ ಸರಃ ಸ್ಮೃತಂ ।
ಗವಾಂ ಕ್ಷೀರೇಣ ಸಂಜಾತಂ ಸರ್ವಪಾತಕನಾಶನಂ ॥ ೨ ॥

ಕಪಿಲಾನಾಂ ಸಹಸ್ರಸ್ಯ ಸಮ್ಯಗ್ದತ್ತಸ್ಯ ಯತ್ಫಲಂ ।
ತತ್ಫಲಂ ಲಭತೇ ಮರ್ತ್ಯಃ ಸ್ನಾನಮಾತ್ರೇಣ ಮೋಹಿನಿ ॥ ೩ ॥

ಪೂರ್ವಭಾದ್ರಪದಾದ್ಯುಕ್ತಾ ಪೌರ್ಣಮಾಸೀ ಯದಾ ಭವೇತ್ ।
ತದಾ ಪುಣ್ಯತಮಃ ಕಾಲೋ ಹ್ಯಶ್ವಮೇಧಫಲಪ್ರದಃ ॥ ೪ ॥

---

## ನಲವತ್ತೊಂಬತ್ತನೆಯ ಅಧ್ಯಾಯ

೧-೨. ವಸುವು ಹೇಳಿದನು—ಸುಂದರಿಯೇ! ಆ ಪೀಠದ ವಾಯವ್ಯ ದಿಗ್ಭಾಗದಲ್ಲಿ ಸಗರನಿಂದ ಲಿಂಗವು ಸ್ಥಾಪಿಸಲ್ಪಟ್ಟಿದೆ. ಅದರ ವಾಯುವ್ಯಮೂಲೆಯಲ್ಲಿ ನಾಲ್ಕುಮುಖಗಳುಳ್ಳ ಭದ್ರದೇಹವೆಂಬ ಸರೋವರವು ನಿರ್ಮಿತವಾಗಿದೆ. ಗೋಕ್ಷೀರದಿಂದ ತುಂಬಿದ ಆ ಸರೋವರವು ಸಕಲಪಾಪಗಳನ್ನೂ ಪರಿಹರಿಸುತ್ತದೆಯೆಂದು ವಿಹಿತವಾಗಿದೆ.

೩. ಮೋಹಿನೀ! ಒಂದುಸಾವಿರ ಕಪಿಲ ಗೋವುಗಳನ್ನು ಸಪರಿಕರವಾಗಿ ದಾನಮಾಡಿದರೆ ಬರುವಷ್ಟು ಮಹಾಫಲವನ್ನು ಮನುಷ್ಯನು ಆ ಸರೋವರದಲ್ಲಿ ಸ್ನಾನಮಾಡುವ ಮಾತ್ರದಿಂದ ಪಡೆಯುವನು.

೪. ಪೂರ್ವಭಾದ್ರ ಮುಂತಾದ ನಕ್ಷತ್ರಯುಕ್ತವಾದ ಪೂರ್ಣಿಮಾತಿಥಿಯು ಅತ್ಯಂತ ಪುಣ್ಯಕಾಲವು. ಆಗ ಮಾಡುವ ಸ್ನಾನಾದಿಗಳು ಅಶ್ವಮೇಧಯಜ್ಞದ ಫಲವನ್ನು ಕೊಡುತ್ತವೆ.

ಯತ್ರ ಸಾ ದೃಶ್ಯತೇ ದೇವೀ ವಿಖ್ಯಾತಾ ಭೀಷ್ಮಚಂಡಿಕಾ ।
ಶ್ಮಶಾನೇ ತಾಂ ಸಮಭ್ಯರ್ಚ್ಯ ನ ನರೋ ದುರ್ಗತಿಂ ವ್ರಜೇತ್　|| ೫ ||

ಅಂತಕೇಶ್ವರಪೂರ್ವೇಣ ದಕ್ಷೇ ಸರ್ವೇಶ್ವರಸ್ಯ ಚ ।
ಮಾತಲೀಶ್ವರಸೌಮ್ಯೇ ತು ಕೃತ್ತಿವಾಸೇಶ್ವರಃ ಸ್ಮೃತಃ　|| ೬ ||

ಕೃತ್ತಿವಾಸೇಶ್ವರಂ ದೃಷ್ಟ್ವಾ ತಂ ಸಂಪೂಜ್ಯ ಪರಾಂ ಗತಿಂ ।
ಏಕೇನ ಜನ್ಮನಾ ದೇವಿ ಕೃತ್ತಿವಾಸೇ ತು ಲಭ್ಯತೇ ।　|| ೭ ||

ಪೂರ್ವಜನ್ಮಕೃತಂ ಪಾಪಂ ತಪಸಾಪಿ ನ ಶುದ್ಧ್ಯತಿ ।
ತತ್ಕ್ಷಣಾನ್ನಶ್ಯತೇ ಪಾಪಂ ತಸ್ಯ ಲಿಂಗಸ್ಯ ದರ್ಶನಾತ್ ।　|| ೮ ||

ಕೃತೇ ತು ತ್ರ್ಯಂಬಕಂ ಪೂರ್ವಂ ತ್ರೇತಾಯಾಂ ಕೃತ್ತಿವಾಸಸಂ ।
ಮಹೇಶ್ವರಂ ತು ದೇವಸ್ಯ ದ್ವಾಪರೇ ನಾಮ ಗೀಯತೇ ।
ಹಸ್ತಿಪಾಲೇಶ್ವರಂ ನಾಮ ಕಲೌ ಸಿದ್ಧೈಸ್ತು ಗೀಯತೇ　|| ೯ ||

---

೫. ಭೀಷ್ಮಚಂಡಿಕೆಯೆಂದು ವಿಖ್ಯಾತಳಾದ ದೇವಿಯು ಸ್ಮಶಾನದಲ್ಲಿ ದೃಗ್ಗೋಚರಳಾಗಿರುವಳು. ಅಲ್ಲಿ ಆ ದೇವಿಯನ್ನು ಪೂಜಿಸಿದರೆ ಮನುಷ್ಯನು ದುರ್ಗತಿಯನ್ನು ಹೊಂದುವುದಿಲ್ಲ.

೬. ಅಂತಕೇಶ್ವರನಿಗೆ ಪೂರ್ವ, ಸರ್ವೇಶ್ವರನಿಗೆ ದಕ್ಷಿಣ, ಮಾತಲೀಶ್ವರನಿಗೆ ಉತ್ತರ ಈ ದಿಗ್ಭಾಗದಲ್ಲಿ ಕೃತ್ತಿವಾಸೇಶ್ವರನು ಸನ್ನಿಹಿತನಾಗಿರುವನು.

೭. ದೇವಿಯೇ! ಕೃತ್ತಿವಾಸ ಕ್ಷೇತ್ರದಲ್ಲಿ ಕೃತ್ತಿವಾಸೇಶ್ವರನನ್ನು ಸಂದರ್ಶಿಸಿ ಅವನನ್ನು ಪೂಜಿಸಿದರೆ ಒಂದೇ ಜನ್ಮದಲ್ಲಿ ಉತ್ತಮಗತಿಯನ್ನು ಪಡೆಯುವನು.

೮. ತಪಸ್ಸಿನಿಂದಲೂ ಪರಿಹಾರವಾಗದಿರುವ, ಹಿಂದಿನ ಜನ್ಮದಲ್ಲಿ ಮಾಡಿದ ಪಾಪರಾಶಿಯು ಆ ಲಿಂಗವನ್ನು ದರ್ಶನಮಾಡಿದ ಕೂಡಲೇ ನಾಶವಾಗುವುದು.

೯. ಈಶ್ವರದೇವನಿಗೆ ಕೃತಯುಗದಲ್ಲಿ ತ್ರ್ಯಂಬಕನೆಂದೂ, ತ್ರೇತಾ

ಕೃತ್ತಿವಾಸೇಶ್ವರೋ ದೇವೋ ದ್ರಷ್ಟವ್ಯಶ್ಚ ಪುನಃ ಪುನಃ ।
ಯದೀಹೇತ್ತಾರಕಂ ಜ್ಞಾನಂ ಶಾಶ್ವತಂ ಚಾಮೃತಪ್ರದಂ ॥ ೧೦ ॥

ದರ್ಶನಾದ್ದೇವದೇವಸ್ಯ ಬ್ರಹ್ಮಹಾಪಿ ಪ್ರಮುಚ್ಯತೇ ।
ಸ್ಪರ್ಶನೇ ಪೂಜನೇ ಚೈವ ಸರ್ವಯಜ್ಞಫಲಂ ಲಭೇತ್ ॥ ೧೧ ॥

ಶ್ರದ್ಧಯಾ ಪರಯಾ ದೇವಂ ಯೇಽರ್ಚಯಂತಿ ಸನಾತನಂ ।
ಫಾಲ್ಗುನಸ್ಯ ಚತುರ್ದಶ್ಯಾಂ ಕೃಷ್ಣಪಕ್ಷೇ ಸಮಾಹಿತಾಃ ॥ ೧೨ ॥

ಪುಷ್ಪೈಃ ಫಲೈಸ್ತಥಾ ಪತ್ರೈರ್ಭಕ್ಷ್ಯೈರುಚ್ಚಾವಚೈಸ್ತಥಾ ।
ಕ್ಷೀರೇಣ ಮಧುನಾ ಚೈವ ತೋಯೇನ ಸಹ ಸರ್ಪಿಷಾ ॥ ೧೩ ॥

---

ಯುಗದಲ್ಲಿ ಕೃತ್ತಿವಾಸಾ ಎಂದೂ, ದ್ವಾಪರಯುಗದಲ್ಲಿ ಮಹೇಶ್ವರ ಎಂದೂ, ಕಲಿಯುಗದಲ್ಲಿ ಹಸ್ತಿಪಾಲೇಶ್ವರ ಎಂದೂ ನಾಮಧೇಯವು ಸಿದ್ಧರಿಂದಗಾನ ಮಾಡಲ್ಪಟ್ಟಿದೆ.

೧೦. ಸಂಸಾರವನ್ನು ದಾಟಿಸಿ ಶಾಶ್ವತಮೋಕ್ಷದಾಯಕವಾದ ಜ್ಞಾನವನ್ನು ಬಯಸುವವನು ಕೃತ್ತಿವಾಸೇಶ್ವರದೇವನನ್ನು ಪುನಃ ಪುನಃ ದರ್ಶನ ಮಾಡಬೇಕು.

೧೧. ಈ ದೇವದೇವನ ದರ್ಶನದಿಂದ ಬ್ರಹ್ಮಹತ್ಯೆಮಾಡಿದವನೂ ಸಹ ಮುಕ್ತನಾಗುವನು. ಈ ದೇವನ ಸ್ಪರ್ಶ ಮತ್ತು ಪೂಜೆಗಳನ್ನು ಮಾಡಿದರೆ ಸಕಲ ಯಜ್ಞಗಳ ಫಲವೂ ಬರುತ್ತದೆ.

೧೨-೧೬. ಮೋಹಿನೀ! ಫಾಲ್ಗುಣಮಾಸದ ಕೃಷ್ಣಪಕ್ಷ ಚತುರ್ದಶಿಯ ದಿನದಲ್ಲಿ ಪರಮಾದರಪೂರ್ವಕವಾಗಿ ಪುಷ್ಪ, ಫಲ, ಪತ್ರೆ, ನಾನಾವಿಧ ಭಕ್ಷ್ಯಗಳು ಇವುಗಳಿಂದ ಸಮಾಧಾನವಾಗಿ ಸನಾತನದೇವನನ್ನು ಯಾರು ಪೂಜಿಸುವರೋ

ತರ್ಪಯಂತಿ ಪರಂ ಲಿಂಗಮರ್ಚಯಂತಿ ಶುಭಂ ಶಿವಂ ।
ಡುಂಡುಂಕಾರನಮಸ್ಕಾರೌ ನೃತ್ಯೈರ್ಗೀತೈಸ್ತಥೈವ ಚ ॥ ೧೪ ॥

ಮುಖವಾದ್ಯೈರನೇಕೈಶ್ಚ ಸ್ತೋತ್ರೈರ್ಮಂತ್ರೈಸ್ತಥೈವ ಚ ।
ಉಪೋಷ್ಯ ರಜನೀಮೇಕಾಂ ಭಕ್ತ್ಯಾ ಪರಮಯಾ ಹರಂ ॥ ೧೫ ॥

ತೇ ಯಾಂತಿ ಪರಮಂ ಸ್ಥಾನಂ ಪೂಜಯಿತ್ವಾ ಚ ಮೋಹಿನಿ ।
ಭೂತೇಹ್ನಿ ಚೈತ್ರಮಾಸಸ್ಯ ಯೋರ್ಚಯೇತ್ಪರಮೇಶ್ವರಂ ॥ ೧೬ ॥

ಸ ಚ ವಿತ್ತೇಶ್ವರಂ ಪ್ರಾಪ್ಯ ಕ್ರೀಡತೇ ಯಕ್ಷರಾಡಿವ ।
ವೈಶಾಖಸ್ಯ ಚತುರ್ದಶ್ಯಾಂ ಯೋರ್ಚಯೇತ್ಪ್ರಯತಃ ಶಿವಂ ॥ ೧೭ ॥

ವೈಶಾಖಲೋಕಮಾಸಾದ್ಯ ತಸ್ಯೈವಾನುಚರೋ ಭವೇತ್ ।
ಜ್ಯೇಷ್ಠಮಾಸೇ ಚತುರ್ದಶ್ಯಾಂ ಯೋರ್ಚಯೇಚ್ಛ್ರದ್ಧಯಾ ಹರಂ ॥೧೮॥

---

ಯಾರು ಹಾಲು, ಜೇನುತುಪ್ಪ, ನೀರು, ತುಪ್ಪ ಇವುಗಳಿಂದ ಉತ್ತಮ ಲಿಂಗ ದೇವನನ್ನು ತೃಪ್ತಿಪಡಿಸುವರೋ, ಮಂಗಳಕರನಾದ ಶಿವನನ್ನು ಯಾರು ಉಪವಾಸದಿಂದ ಒಂದು ರಾತ್ರಿಯೆಲ್ಲಾ "ಡುಂ, ಡುಂ," ಕಾರ, ನಮಸ್ಕಾರ, ನರ್ತನ, ಗಾನ, ಅನೇಕ ಮುಖವಾದ್ಯಗಳು, ಸ್ತೋತ್ರ, ಮಂತ್ರ ಇವುಗಳಿಂದ ಭಜಿಸುವರೋ ಅವರೆಲ್ಲರೂ ಉತ್ತಮ ಭಕ್ತಿಯಿಂದ ಈಶ್ವರನನ್ನು ಪೂಜಿಸಿದುದರಿಂದ ಉತ್ತಮಸ್ಥಾನಕ್ಕೆ ಹೋಗುವರು.

೧೬-೧೭. ಚೈತ್ರಮಾಸದ ಕೃಷ್ಣಪಕ್ಷದ ಚತುರ್ದಶಿಯ ದಿನದಲ್ಲಿ ಪರಮೇಶ್ವರನನ್ನು ಪೂಜಿಸುವ ಮನುಷ್ಯನು ಕುಬೇರನಂತೆ ಐಶ್ವರ್ಯವಂತನಾಗಿ ಸುಖಪಡುವನು.

೧೭-೧೮. ವೈಶಾಖಮಾಸದ ಚತುರ್ದಶಿಯ ದಿನದಲ್ಲಿ ಜಿತೇಂದ್ರಿಯನಾಗಿ ಶಿವನನ್ನು ಪೂಜಿಸುವವನು ಕುಮಾರಸ್ವಾಮಿಯ ಲೋಕವನ್ನು ಹೊಂದಿ ಅಲ್ಲಿ ಅವನ ಭಕ್ತನಾಗಿ ಕ್ರೀಡಿಸುವನು.

೧೮-೧೯. ಜ್ಯೇಷ್ಠಮಾಸದ ಚತುರ್ದಶಿಯ ದಿನದಲ್ಲಿ ಶ್ರದ್ಧೆಯಿಂದ ಹರನನ್ನು ಪೂಜಿಸುವವನು ಸ್ವರ್ಗಲೋಕಕ್ಕೆ ಹೋಗಿ ಪ್ರಳಯವಾಗುವವರೆಗೂ ಸುಖಿಸುವನು.

ಸ್ವರ್ಗಲೋಕಮವಾಪ್ನೋತಿ ಯಾವದಾಭೂತಸಂಪ್ಲವಂ ।
ಚತುರ್ದಶ್ಯಾಂ ಶುಚೌ ಭದ್ರೇ ಯೋಽರ್ಚಯೇತ್ಪ್ರಯತಃ ಶಿವಂ ॥ ೧೯ ॥

ಸೂರ್ಯಲೋಕಂ ಸಮಾಸಾದ್ಯ ಕ್ರೀಡತೇ ಯಾವದೀಪ್ಸಿತಂ ।
ಶ್ರಾವಣಸ್ಯ ಚತುರ್ದಶ್ಯಾಂ ಕಾಮಲಿಂಗಂ ಸಮುತ್ಥಿತಂ ॥ ೨೦ ॥

ದದಾತಿ ವಾರುಣಂ ಲೋಕಂ ಕ್ರೀಡತೇ ಚಾಪ್ಸರೋನ್ವಿತಃ ।
ಮಾಸಿ ಭಾದ್ರಪದೇ ಯುಕ್ತಮರ್ಚಯಿತ್ವಾ ತು ಶಂಕರಂ ॥ ೨೧ ॥

ಪುಷ್ಪೈಃ ಫಲೈಶ್ಚ ವಿವಿಧೈರಿಂದ್ರಸ್ಯೈತಿ ಸಲೋಕತಾಂ ।
ಪಿತೃಪಕ್ಷೇ ಚತುರ್ದಶ್ಯಾಂ ಪೂಜಯಿತ್ವಾ ಯಥೇಶ್ವರಂ ॥ ೨೨ ॥

ಪ್ರಾಪ್ನೋತಿ ಪಿತೃಲೋಕಂ ತು ಕ್ರೀಡತೇ ಪೂಜಿತಶ್ಚ ತೈಃ ।
ಪ್ರಬೋಧಮಾಸೇ ದೇವೇಶಮರ್ಚಯಿತ್ವಾ ಮಹೇಶ್ವರಂ ॥ ೨೩ ॥

---

೧೯-೨೦. ಶೋಭನೇ! ಆಷಾಢಮಾಸದ ಚತುರ್ದಶಿಯಲ್ಲಿ ಜಿತೇಂದ್ರಿಯನಾಗಿ ಶಿವನನ್ನು ಪೂಜಿಸುವವನು ಸೂರ್ಯಲೋಕಕ್ಕೆ ಹೋಗಿ ತನ್ನ ಇಚ್ಛಾನುಸಾರವಾಗಿ ವಿಹರಿಸುವನು.

೨೦-೨೧. ಶ್ರಾವಣಮಾಸದ ಚತುರ್ದಶಿಯ ದಿನದಲ್ಲಿ ಪೂಜಿಸಲ್ಪಟ್ಟ ಕಾಮಲಿಂಗವು ವರುಣಲೋಕವನ್ನು ಕೊಡುವುದು. ಪೂಜಕನು ಅಲ್ಲಿ ಅಪ್ಸರಸ್ತ್ರೀಯರೊಡನೆ ಕ್ರೀಡಿಸುವನು.

೨೧-೨೨. ಭಾದ್ರಪದ ಶುಕ್ಲ ಚತುರ್ದಶಿಯ ದಿನದಲ್ಲಿ ನಾನಾವಿಧವಾದ ಫಲಪುಷ್ಪಗಳಿಂದ ಶಂಕರನನ್ನು ಪೂಜಿಸಿದರೆ ಇಂದ್ರಸಾಲೋಕ್ಯವು ಲಭಿಸುವುದು.

೨೨-೨೩. ಭಾದ್ರಪದಮಾಸದ ಕೃಷ್ಣ ಚತುರ್ದಶಿಯ ದಿನದಲ್ಲಿ ವಿಧಿವತ್ತಾಗಿ ಈಶ್ವರನನ್ನು ಪೂಜಿಸಿದರೆ ಪಿತೃಲೋಕವನ್ನು ಹೊಂದುವನು. ಅಲ್ಲಿ ಅವರಿಂದ ಸತ್ಕರಿಸಲ್ಪಟ್ಟು ಕ್ರೀಡಿಸುವನು.

೨೩-೨೪. ಆಶ್ವಯುಜಮಾಸದಲ್ಲಿ ದೇವೇಶನಾದ ಮಹೇಶ್ವರನನ್ನು ಪೂಜಿಸಿದರೆ ಚಂದ್ರಲೋಕಕ್ಕೆ ಹೋಗಿ ತನ್ನ ಇಚ್ಛಾನುಸಾರವಾಗಿ ವಿಹರಿಸುವನು.

ಚಂದ್ರಲೋಕಂ ಸಮಾಸಾದ್ಯ ಕ್ರೀಡತೇ ಯಾವದೀಪ್ಸಿತಂ ।
ಬಾಹುಲೇ ಮಾರ್ಗಶೀರ್ಷೇ ಚ ಪೂಜಯಿತ್ವಾ ಪಿನಾಕಿನಂ ॥ ೨೪ ॥

ವಿಷ್ಣುಲೋಕಮವಾಪ್ನೋತಿ ಕ್ರೀಡತೇ ಕಾಲಮಕ್ಷಯಂ ।
ಅರ್ಚಯಿತ್ವಾ ತಥಾ ಪೌಷೇ ಸ್ಥಾಣುಂ ಹೃಷ್ಟೇನ ಚೇತಸಾ ॥ ೨೫ ॥

ಪ್ರಾಪ್ನೋತಿ ನೈರ್ಋತಂ ಸ್ಥಾನಂ ತೇನೈವ ಸಹ ಮೋದತೇ ।
ಮಾಘೇ ಸಮರ್ಚಯಿತ್ವಾ ವೈ ಪುಷ್ಪಮೂಲಫಲೈಃ ಶುಭೈಃ ॥ ೨೬ ॥

ಪ್ರಾಪ್ನೋತಿ ಶಿವಲೋಕಂ ತು ತ್ಯಕ್ತ್ವಾ ಸಂಸಾರಸಾಗರಂ ।
ಕೃತ್ತಿವಾಸೇಶ್ವರಂ ದೇವಮರ್ಚಯೇತ್ತು ಪ್ರಯತ್ನತಃ ॥ ೨೭ ॥

ಅವಿಮುಕ್ತೇ ವಸೇಚ್ಚೈವ ಯದೀಚ್ಛೇಚ್ಛಾಂಕರಂ ಪದಂ ।
ಘಂಟಾಕರ್ಣೋ ಹ್ರದಸ್ತತ್ರ ವ್ಯಾಸೇಶಸ್ಯ ತು ಪಶ್ಚಿಮೇ ॥ ೨೮ ॥

---

೨೪-೨೫. ಕಾರ್ತಿಕ ಮಾರ್ಗಶೀರ್ಷಮಾಸಗಳಲ್ಲಿ ಈಶ್ವರನನ್ನು ಪೂಜಿಸಿದರೆ ವಿಷ್ಣುಲೋಕಕ್ಕೆ ಹೋಗಿ ಶಾಶ್ವತವಾಗಿ ಆನಂದಿಸುವನು.

೨೫-೨೬. ಪುಷ್ಯಮಾಸದಲ್ಲಿ ಸಂತೋಷಚಿತ್ತದಿಂದ ಈಶ್ವರನನ್ನು ಪೂಜಿಸಿದರೆ ನಿರ್ಋತಿದೇವನ ಸ್ಥಾನವನ್ನು ಹೊಂದಿ ಅವನೊಡನೆ ಸುಖಪಡುವನು.

೨೬-೨೭. ಮಾಘಮಾಸದಲ್ಲಿ ಒಳ್ಳೆಯ ಹೂವು, ಗೆಡ್ಡೆ, ಫಲ ಇವುಗಳಿಂದ ಈಶ್ವರನನ್ನು ಪೂಜಿಸಿದರೆ ಸಂಸಾರಸಾಗರವನ್ನು ದಾಟಿ ಶಿವಲೋಕವನ್ನು ಹೊಂದುವನು. ಹೀಗೆ ಕೃತ್ತಿವಾಸೇಶ್ವರದೇವನನ್ನು ಪ್ರಯತ್ನಪೂರ್ವಕವಾಗಿ ಪೂಜಿಸಬೇಕು.

೨೮. ಶಂಕರದೇವನ ಲೋಕವನ್ನು ಬಯಸುವವನು ಅವಿಮುಕ್ತಕ್ಷೇತ್ರದಲ್ಲಿ ವಾಸಮಾಡಬೇಕು. ಅಲ್ಲಿ ವ್ಯಾಸೇಶ್ವರನ ಪಶ್ಚಿಮಭಾಗದಲ್ಲಿ ಘಂಟಾಕರ್ಣವೆಂಬ ಹ್ರದವಿದೆ.

ಸ್ನಾನಂ ಕೃತ್ವಾ ಹ್ರದೇ ತಸ್ಮಿನ್ ವ್ಯಾಸೇಶಸ್ಯ ಚ ದರ್ಶನಾತ್ ।
ಯತ್ರ ತತ್ರ ಮೃತೋ ದೇವಿ ವಾರಾಣಸ್ಯಾಂ ಮೃತೋ ಭವೇತ್ ॥ ೨೯ ॥

ದಂಡಖಾತೇ ನರಃ ಸ್ನಾತ್ವಾ ತರ್ಪಯಿತ್ವಾ ಸ್ವಕಾನ್ ಪಿತೄನ್ ।
ನರಕಸ್ಥಾಸ್ತು ಯೇ ದೇವಿ ಪಿತೃಲೋಕಂ ವ್ರಜಂತಿ ತೇ ॥ ೩೦ ॥

ಪಿಶಾಚತ್ವಂ ಗತಾ ದೇವಿ ಯೇ ನರಾಃ ಪಾಪಕರ್ಮಿಣಃ ।
ತೇಷಾಂ ಪಿಂಡಪ್ರದಾನೇನ ದೇಹಸ್ಯೋದ್ಧರಣಂ ಸ್ಮೃತಂ ॥ ೩೧ ॥

ದರ್ಶನಾತ್ತಸ್ಯ ಖಾತಸ್ಯ ಕೃತಕೃತ್ಯೋಽಭಿಜಾಯತೇ ।
ತತ್ರೈವ ಲಲಿತಾ ದೇವೀ ವರ್ತತೇ ಲೋಕಶರ್ಮದಾ ॥ ೩೨ ॥

---

೨೯. ದೇವಿಯೇ ! ಆ ಘಂಟಾಕರ್ಣ ಹ್ರದದಲ್ಲಿ ಸ್ನಾನಮಾಡಿ ವ್ಯಾಸೇಶ್ವರನ ದರ್ಶನಮಾಡುವುದರಿಂದ ಎಲ್ಲಿ ಮೃತನಾದರೂ ವಾರಣಸೀ ಕ್ಷೇತ್ರದಲ್ಲಿ ಮೃತನಾದಂತಾಗುವನು.

೩೦. ದೇವಿಯೇ ! ದಂಡಖಾತ ತೀರ್ಥದಲ್ಲಿ ಸ್ನಾನಮಾಡಿ ಮಾನವನು ತನ್ನ ಪಿತೃಗಳಿಗೆ ತರ್ಪಣಮಾಡಿದರೆ ನರಕದಲ್ಲಿ ಬಿದ್ದಿದ್ದ ಪಿತೃಗಳೂ ಸಹ ಪಿತೃಲೋಕಕ್ಕೆ ಹೋಗುವರು.

೩೧. ದೇವಿಯೇ ! ಆ ತೀರ್ಥದಲ್ಲಿ ಪಿಂಡಪ್ರದಾನ ಮಾಡುವುದರಿಂದ ಪಾಪಕೃತ್ಯವನ್ನು ಮಾಡಿ ಪಿಶಾಚಜನ್ಮವನ್ನು ತಾಳಿರುವ ಮನುಷ್ಯರೂ ಸಹ ಉದ್ಧಾರವಾಗುವರು.

೩೨. ಆ ದಂಡಖಾತ ತೀರ್ಥವನ್ನು ದರ್ಶನಮಾಡುವುದರಿಂದ ಮನುಷ್ಯನು ಕೃತಕೃತ್ಯನಾಗುವನು. ಅಲ್ಲಿಯೇ ಸುಖಪ್ರದಳಾದ ಲಲಿತಾದೇವಿಯು ಇರುತ್ತಾಳೆ.

ಯೇ ಚ ತಾಂ ಪೂಜಯಿಷ್ಯಂತಿ ತಸ್ಮಿನ್ ಸ್ಥಾನೇ ಸ್ಥಿತಾಃ ಸ್ವಯಂ ।
ತೇಷಾಂ ಸಾ ವಿವಿಧಾನ್ ಭೋಗಾನ್ ಸಂಪ್ರದಾಸ್ಯತಿ ಮಾನದೇ ॥ ೩೩ ॥

ಜಾಗರಂ ಯೇ ತು ತಸ್ಯಾಶ್ಚ ಪುರಃ ಕುರ್ವಂತಿ ದೀಪಕೈಃ ।
ತೇಷಾಂ ಸಾ ಹ್ಯಕ್ಷಯಾನ್ ಲೋಕಾನ್ ವಿತರಿಷ್ಯತಿ ಮೋಹಿನಿ ॥ ೩೪ ॥

ಆಲಯಂ ಯೇ ಪ್ರಕುರ್ವಂತಿ ಭೂಮಿಂ ಸಂಮಾರ್ಜಯಂತಿ ಚ ।
ತೇಷಾಮಷ್ಟಸಹಸ್ರಸ್ಯ ಸುವರ್ಣಸ್ಯ ಫಲಂ ಭವೇತ್ ॥ ೩೫ ॥

ತಾಮುದ್ದಿಶ್ಯ ತು ಯೋ ದೇವಿ ಬ್ರಾಹ್ಮಣಾನ್ ವೇದಪಾರಗಾನ್ ।
ಭೋಜಯಿಷ್ಯತಿ ಮಿಷ್ಟಾನ್ನೈಸ್ತಸ್ಯ ಪುಣ್ಯಫಲಂ ಶೃಣು ॥ ೩೬ ॥

ದುರ್ಗಾಲೋಕೇ ವಸೇತ್ಕಲ್ಪಮಿಹೈವಾಗಚ್ಛತೇ ಪುನಃ ।
ನರೋ ವಾ ಯದಿ ವಾ ನಾರೀ ಸರ್ವಭೋಗಸಮನ್ವಿತಾ ॥ ೩೭ ॥

---

೩೩. ಮಾನದಾತೆಯೇ! ಆ ಸ್ಥಳದಲ್ಲಿದ್ದು ಲಲಿತಾದೇವಿಯನ್ನು ಪೂಜಿಸುವವರಿಗೆ ಆ ದೇವಿಯು ನಾನಾವಿಧ ಭೋಗಗಳನ್ನು ಕೊಡುವಳು.

೩೪. ಮೋಹಿನಿಯೇ! ಆ ದೇವಿಯ ಇದಿರಿಗೆ ದೀಪಗಳನ್ನು ಹಚ್ಚಿ ಜಾಗರಣೆ ಮಾಡುವವರಿಗೆ ದೇವಿಯು ಶಾಶ್ವತಲೋಕಗಳನ್ನು ಕೊಡುವಳು.

೩೫. ಆ ದೇವಿಯ ಆಲಯವನ್ನು ಕಟ್ಟಿಸುವವರು, ಅಲ್ಲಿ ಭೂಮಿಯನ್ನು ಸಂಮಾರ್ಜನೆ ಮಾಡುವವರೂ ಸಹ ಎಂಟುಸಾವಿರ ಸುವರ್ಣದಾನದ ಫಲವನ್ನು ಹೊಂದುವರು.

೩೬. ದೇವಿಯೇ! ಆ ಲಲಿತಾದೇವಿಯ ಪ್ರೀತ್ಯರ್ಥವಾಗಿ ವೇದಪಾರಂಗತರಾದ ಬ್ರಾಹ್ಮಣರಿಗೆ ಮೃಷ್ಟಾನ್ನ ಭೋಜನಮಾಡಿಸುವವನಿಗೆ ಬರುವ ಪುಣ್ಯಫಲವನ್ನು ಹೇಳುತ್ತೇನೆ ಕೇಳು.

೩೭. ಅಂತಹವನು ಒಂದು ಕಲ್ಪಪರ್ಯಂತವಾಗಿ ದುರ್ಗಾಲೋಕದಲ್ಲಿ ವಾಸಮಾಡಿ ಪುನಃ ಇಲ್ಲಿಗೆ ಬರುವನು. ಲಲಿತಾದೇವಿಯನ್ನು ಆರಾಧಿಸುವ ಪುರುಷನು ಅಥವಾ ನಾರಿಯಾದರೂ ಸಕಲ ಭೋಗಯುಕ್ತರಾಗುವರು.

ಧನಧಾನ್ಯಸಮಾಯುಕ್ತೌ ಜಾಯೇತೇ ಮಹತಾಂ ಕುಲೇ |
ಸುಭಗೌ ದರ್ಶನೀಯೌ ಚ ರೂಪಯೌವನಗರ್ವಿತೌ || ೩೮ ||

ಭವೇತಾಮೀದೃಶೌ ದೇವಿ ಸರ್ವಸೌಖ್ಯಸ್ಯ ಭಾಜನೌ |
ಮಾನುಷ್ಯಂ ದುರ್ಲಭಂ ಪ್ರಾಪ್ಯ ವಿದ್ಯುತ್ಸಂಪಾತಚಂಚಲಂ || ೩೯ ||

ಯೇನ ಸಾ ಲಲಿತಾ ದೃಷ್ಟಾ ತಸ್ಯ ಜನ್ಮಭಯಂ ಕುತಃ |
ಪೃಥ್ವೀಪ್ರದಕ್ಷಿಣಂ ಕೃತ್ವಾ ಯತ್ಫಲಂ ಲಭತೇ ನರಃ || ೪೦ ||

ತತ್ಫಲಂ ಲಲಿತಾಯಾಶ್ಚ ವಾರಾಣಸ್ಯಾಂ ಪ್ರದರ್ಶನಾತ್ |
ಮಾಸಿ ಮಾಸಿ ಚತುರ್ಥ್ಯಾಂ ತು ಸಾಯಂಕಾಲ ಉಪೋಷಿತಃ || ೪೧ ||

ಅರ್ಚಯಿತ್ವಾ ತು ತಾಂ ದೇವೀಂ ಜಾಗರಂ ತತ್ರ ಕಾರಯೇತ್ |
ತಸ್ಯಾರ್ಥಸಂಕುಲಂ ದೇವಿ ತ್ರೈಲೋಕ್ಯಸ್ಯಾಪಿ ಪೂಜಿತಂ || ೪೨ ||

---

೩೮-೩೯. ದೇವಿಯೇ ! ಅಂತಹವರು ಧನಧಾನ್ಯಾದಿ ಸಮೃದ್ಧಿಹೊಂದಿ ಮಹಾತ್ಮರ ವಂಶದಲ್ಲಿ ಹುಟ್ಟುವರು. ಅವರು ಸುಂದರರು, ದರ್ಶನೀಯರು, ರೂಪಯೌವನ ಪರಿಪೂರ್ಣರೂ ಆಗಿ ಸಕಲಸೌಖ್ಯಗಳಿಗೂ ಪಾತ್ರರಾಗುವರು.

೩೯-೪೦. ದುರ್ಲಭವೂ, ಮಿಂಚಿನಂತೆ ಚಂಚಲವೂ ಆದ ಮನುಷ್ಯ ಜನ್ಮವನ್ನು ಹೊಂದಿದ ಯಾವ ಮನುಷ್ಯನು ಆ ಲಲಿತಾದೇವಿಯನ್ನು ನೋಡು ವನೋ ಅವನಿಗೆ ಜನ್ಮಭಯವೆಲ್ಲಿಂದ ಬಂದೀತು ? ಎಂದರೆ ಅವನು ಮುಕ್ತನಾ ಗುವನು ಎಂದು ಭಾವ.

೪೦-೪೧. ಭೂಮಂಡಲವನ್ನು ಪ್ರದಕ್ಷಿಣೆಮಾಡಿದರೆ ಬರುವ ಪುಣ್ಯ ವನ್ನು ಮನುಷ್ಯನು ವಾರಾಣಸೀ ಕ್ಷೇತ್ರದಲ್ಲಿ ಲಲಿತಾದೇವಿಯ ದರ್ಶನದಿಂದಲೇ ಸಂಪಾದಿಸುವನು.

೪೧-೪೨. ಪ್ರತಿತಿಂಗಳಿನ ಚೌತಿಯ ದಿನದಲ್ಲಿಯೂ ಉಪವಾಸದಿಂದ ಸಾಯಂಕಾಲದಲ್ಲಿ ಆ ಲಲಿತಾದೇವಿಯನ್ನು ಪೂಜಿಸಿ ಆ ರಾತ್ರಿಯಲ್ಲಿ ಜಾಗರಣೆ ಮಾಡಬೇಕು.

ನಲಕೂಬರಕೇಶಾನಂ ತಂ ಚ ಸಂಪೂಜ್ಯ ಮೋಹಿನಿ ।
ಸರ್ವಸಿದ್ಧಿಪ್ರದಾತಾರಂ ಕೃತಕೃತ್ಯೋ ನರೋ ಭವೇತ್ ॥ ೪೩ ॥

ತಸ್ಯೈವ ದಕ್ಷಿಣೇ ದೇವಿ ಮಣಿಕರ್ಣೀತಿ ಚ ಶ್ರುತಂ ।
ತಸ್ಯ ಚಾಗ್ರೇ ಮಹತ್ತೀರ್ಥಂ ಸರ್ವಪಾಪಪ್ರಣಾಶನಂ ॥ ೪೪ ॥

ಮಣಿಕರ್ಣೀಶ್ವರಂ ದೇವಂ ಕುಂಡಮಧ್ಯೇ ವ್ಯವಸ್ಥಿತಂ ।
ದೃಷ್ಟ್ವಾ ನತ್ವಾ ಸಮಭ್ಯರ್ಚ್ಯ ನ ಭೂಯೋ ಜಠರೇ ವಸೇತ್ ॥ ೪೫ ॥

ತಸ್ಯ ದಕ್ಷಿಣಪಾರ್ಶ್ವೇ ತು ಗಂಗಾಯಾಂ ಸ್ಥಾಪಿತಂ ಪರಂ ।
ಗಂಗೇಶ್ವರಂ ಸಮಭ್ಯರ್ಚ್ಯ ಸುರಲೋಕಮವಾಪ್ನುಯಾತ್ ॥ ೪೬ ॥

ಅನ್ಯದಾಯತನಂ ವಕ್ಷ್ಯೇ ವಾರಾಣಸ್ಯಾಂ ಸುಮೋಹಿನಿ ।
ಯತ್ರ ವೈ ದೇವದೇವಸ್ಯ ರುಚಿರಸ್ಥಾನಮೀಪ್ಸಿತಂ ॥ ೪೭ ॥

---

೪೨-೪೩. ಮೋಹಿನೀದೇವಿಯೇ! ಆ ಲಲಿತಾದೇವಿಯಿಂದ ಕೂಡಿದ, ಮೂರು ಲೋಕಗಳಲ್ಲಿಯೂ ಪೂಜಿಸಲ್ಪಡುತ್ತಿರುವ, ಸಕಲಸಿದ್ಧಿದಾಯಕನಾದ ನಲಕೂಬರಕೇಶ್ವರನನ್ನು ಪೂಜಿಸಿದರೆ ಮನುಷ್ಯನು ಕೃತಕೃತ್ಯನಾಗುವನು.

೪೪. ಆ ನಳಕೂಬರಕೇಶ್ವರನಿಗೆ ದಕ್ಷಿಣಭಾಗದಲ್ಲಿ ಮಣಿಕರ್ಣಿ ಎಂಬುದಾಗಿ ವಿಖ್ಯಾತವಾದ ಸಕಲ ಪಾಪಗಳನ್ನೂ ಪರಿಹರಿಸುವ ದೊಡ್ಡತೀರ್ಥವಿದೆ.

೪೫. ಕುಂಡಮಧ್ಯದಲ್ಲಿ ಸನ್ನಿಹಿತನಾಗಿರುವ ಮಣಕರ್ಣೀಶ್ವರದೇವನನ್ನು ಸಂದರ್ಶಿಸಿ ನಮಸ್ಕಾರಮಾಡಿ ಪೂಜಿಸಿದರೆ ಪುನಃ ಗರ್ಭವಾಸವನ್ನು ಹೊಂದುವುದಿಲ್ಲ.

೪೬. ಆದರ ದಕ್ಷಿಣಭಾಗದಲ್ಲಿ ಗಂಗೆಯ ಸನ್ನಿಧಿಯಲ್ಲಿ ಸ್ಥಾಪಿಸಲ್ಪಟ್ಟಿರುವ ಉತ್ತಮನಾದ ಗಂಗೇಶ್ವರನನ್ನು ಪೂಜಿಸಿದರೆ ದೇವಲೋಕವನ್ನು ಹೊಂದುವನು.

೪೭. ಮೋಹಿನಿಯೇ! ವಾರಾಣಸೀಕ್ಷೇತ್ರದಲ್ಲಿ ದೇವದೇವನಿಗೆ ಇಷ್ಟವೂ ಮನೋಹರವೂ ಆದ ಇನ್ನೊಂದು ಆಲಯವನ್ನು ಹೇಳುವೆನು.

ನೀಯಮಾನಂ ಪುರಾ ಲಿಂಗಂ ಸುಭಗೇ ಶಶಿಮೌಲಿನಃ ।
ರಾಕ್ಷಸೈರಂತರಿಕ್ಷಸ್ಥೈರ್ವ್ರಜಮಾನೈಶ್ಚ ಸತ್ವರಂ ॥ ೪೮ ॥

ಅಸ್ಮಿನ್ ದೇಶೇ ಯದಾ ಪ್ರಾಪ್ತಂ ತದಾ ದೇವೇನ ಚಿಂತಿತಂ ।
ಅವಿಮುಕ್ತವಿಯೋಗಸ್ತು ಕಥಂ ಮೇ ತು ಭವೇದಿತಿ ॥ ೪೯ ॥

ಇಮಮರ್ಥಂ ತು ದೇವೇಶೋ ಯಾವಚ್ಚಿಂತಯತೇ ಶುಭೇ ।
ತಾವತ್ಕುಕ್ಕುಟಶಬ್ದಸ್ತು ತಸ್ಮಿನ್ ಸ್ಥಾನೇ ಬಭೂವ ಹ ॥ ೫೦ ॥

ಶಬ್ದಂ ಶ್ರುತ್ವಾ ತು ತಂ ದೇವಿ ರಾಕ್ಷಸಾಸ್ತ್ರಸ್ತಚೇತಸಃ ।
ಲಿಂಗಮುತ್ಸೃಜ್ಯ ತತ್ರೈವ ಪ್ರಭಾತಸಮಯೇ ಗತಾಃ ॥ ೫೧ ॥

ಗತೇಷು ರಾಕ್ಷಸೇಷ್ವೇವಂ ಲಿಂಗಂ ತತ್ರೈವ ಸಂಸ್ಥಿತಂ ।
ಸ್ಥಾನೇತಿರುಚಿರೇ ಶುಭ್ರೇ ದೇವದೇವಃ ಸ್ವಯಂ ಪ್ರಭುಃ ॥ ೫೨ ॥

---

೪೮-೪೯. ಸುಂದರಿಯೇ! ಪೂರ್ವದಲ್ಲಿ ಅಂತರಿಕ್ಷದಲ್ಲಿರುವ ರಾಕ್ಷಸರು ಚಂದ್ರಮೌಳಿಲಿಂಗವನ್ನು ತೆಗೆದುಕೊಂಡು ಆಕಾಶಮಾರ್ಗದಲ್ಲಿ ಶೀಘ್ರನಾಗಿ ಹೋಗುತ್ತಿರಲು ಈ ಪ್ರದೇಶವು ಬಂದಾಗ ಈಶ್ವರದೇವನು ನನಗೆ ಅವಿಮುಕ್ತ ಕ್ಷೇತ್ರವಿಯೋಗವು ಹೇಗೆ ಯುಕ್ತವಾದೀತು? ಎಂಪರೆ ನಾನು ಅವಿಮುಕ್ತಕ್ಷೇತ್ರ ದಲ್ಲಿಯೇ ಸನ್ನಿಹಿತನಾಗಿರುವೆನು. ರಾಕ್ಷಸರು ಒಯ್ಯುವ ಸ್ಥಳಕ್ಕೆ ಹೋಗುವುದು ನನಗೆ ಸಮ್ಮತವಲ್ಲ ಎಂಬುದಾಗಿ ಚಿಂತಿಸಿದನು.

೫೦. ಶೋಭನೇ! ದೇವೇಶನು ಈ ವಿಷಯವನ್ನು ಮನದಲ್ಲಿ ನೆನೆದ ಕೂಡಲೇ ಆ ಸ್ಥಳದಲ್ಲಿ ಭಯಂಕರವಾದ ಕೋಳಿಯ ಶಬ್ದವು ಕೇಳಿಸಿತು

೫೧. ದೇವಿಯೇ! ಬೆಳಗಾಗುವಸಮಯದಲ್ಲಿ ಆ ಶಬ್ದವನ್ನು ಕೇಳಿ ರಾಕ್ಷಸರು ಭೀತಮನಸ್ಕರಾಗಿ ಲಿಂಗವನ್ನು ಅಲ್ಲಿಯೇ ಬಿಟ್ಟು ಹೊರಟುಹೋದರು.

೫೨. ಈ ರೀತಿಯಾಗಿ ರಾಕ್ಷಸರು ಹೊರಟುಹೋಗಲು ಲಿಂಗರೂಪಿಯು, ಪ್ರಭುವೂ ಆದ ದೇವದೇವನು ನಿರ್ಮಲವೂ, ಅತ್ಯಂತ ಮನೋಹರವೂ ಆದ ಆ ಸ್ಥಾನದಲ್ಲಿಯೇ ಸಾಕ್ಷಾತ್ತಾಗಿ ನೆಲೆಸಿದನು.

ಅವಿಮುಕ್ತೇ ತತ್ರ ಮಧ್ಯೇ ಅವಿಮುಕ್ತತರಂ ಸ್ಮೃತಂ ।
ತದಾವಿಮುಕ್ತೇಶ್ವರಶ್ಚೇತಿ ಹರಸ್ಯ ನಾಮ ವೈ ಸ್ಮೃತಂ ॥ ೫೩ ॥

ಮೋಕ್ಷಪ್ರದಂ ಸ್ಥಾವರಜಂಗಮಾನಾಂ
ಯೇ ಪ್ರಾಣಿನಃ ಪಂಚತಾಂ ಯಾಂತಿ ತತ್ರ ॥ ೫೪ ॥

ಕುಕ್ಕುಟಾಶ್ಚಾಪಿ ಸುಭಗೇ ತಸ್ಮಿನ್ ಸ್ಥಾನೇ ಸ್ಥಿತಾಃ ಸದಾ ।
ಅದ್ಯಾಪಿ ತತ್ರ ದೃಶ್ಯಂತೇ ಪೂಜ್ಯಮಾನಾಃ ಶುಭಾತ್ಮಭಿಃ ॥ ೫೫ ॥

ಅವಿಮುಕ್ತಂ ಸದಾ ದೇವಿ ಯೋಽರ್ಚಯೇದಕ್ಷಯಂ ನರಃ ।
ನ ತಸ್ಯ ಪುನರಾವೃತ್ತಿಃ ಕಲ್ಪಕೋಟಿಶತೈರಪಿ ॥ ೫೬ ॥

ದೇವಸ್ಯ ದಕ್ಷಿಣೇ ಭಾಗೇ ವಾಪೀ ತಿಷ್ಠತಿ ಶೋಭನಾ ।
ತಸ್ಯಾಸ್ತೋದಕಂ ಪೀತ್ವಾ ನಾವೃತ್ತಿಃ ಪುನರತ್ರ ಚ ॥ ೫೭ ॥

---

೫೩. ಹೀಗೆ ಈಶ್ವರನು ನೆಲೆಸಿದ ಅವಿಮುಕ್ತಕ್ಷೇತ್ರದ ಮಧ್ಯಭಾಗವು ಪ್ರಶಸ್ತವಾದ ಅವಿಮುಕ್ತಕ್ಷೇತ್ರವೆಂದು ಪ್ರಸಿದ್ಧಿಗೊಂಡಿತು. ಆಗಿನಿಂದಲೂ ಅಲ್ಲಿರುವ ಈಶ್ವರನಿಗೆ "ಅವಿಮುಕ್ತೇಶ್ವರ" ಎಂಬ ನಾಮಧೇಯವು ವಿಹಿತವಾಗಿದೆ.

೫೪. ಅವಿಮುಕ್ತೇಶ್ವರನು ಅಲ್ಲಿ ಮೃತನಾಗುವ ಸ್ಥಾವರಜಂಗಮ ಪ್ರಾಣಿಗಳಿಗೆ ಮೋಕ್ಷವನ್ನು ಕೊಡುವನು.

೫೫. ಸುಂದರೀ! ಆ ಸ್ಥಳದಲ್ಲಿ ಯಾವಾಗಲೂ ಕೋಳಿಗಳು ಇರುತ್ತವೆ. ಈಗಲೂ ಸಹ ಅವು ಪುಣ್ಯಾತ್ಮರಿಂದ ಪೂಜಿಸಲ್ಪಡುತ್ತಿರುವುದು ಕಾಣಬರುತ್ತಿದೆ.

೫೬. ದೇವಿಯೇ! ಅಕ್ಷಯನಾದ ಅವಿಮುಕ್ತೇಶ್ವರನನ್ನು ಸರ್ವದಾ ಸೇವಿಸುವ ಮನುಷ್ಯನಿಗೆ ನೂರಾರುಕೋಟಿ ಕಲ್ಪಗಳಾದರೂ ಪುನರ್ಜನ್ಮವು ಬರದಿರುವಂತಹ ಉತ್ತಮಸ್ಥಾನವು ಲಭಿಸುತ್ತದೆ.

೫೭. ಈಶ್ವರದೇವನ ದಕ್ಷಿಣಭಾಗದಲ್ಲಿ ಪುಣ್ಯಕರವಾದ ಬಾವಿಯೊಂದಿದೆ. ಅದರ ನೀರನ್ನು ಪಾನಮಾಡಿದರೆ ಈ ಲೋಕದಲ್ಲಿ ಪುನರ್ಜನ್ಮವು ಬರುವುದಿಲ್ಲ.

ತ್ರೀಣಿ ಲಿಂಗಾನಿ ವರ್ತಂತೇ ಹೃದಯೇ ಪುರುಷಸ್ಯ ತು ।
ಕಥಾ ಯೈಸ್ತಜ್ಜಲಂ ಪೀತಂ ತೇ ಕೃತಾರ್ಥಾಸ್ತು ಮಾನವಾಃ ॥ ೫೮ ॥

ತೇಷಾಂ ತು ತಾರಕಂ ಜ್ಞಾನಮುಸ್ತ್ಯೇವೇತಿ ನ ಸಂಶಯಃ ।
ವಾಪೀಜಲೇ ನರಃ ಸ್ನಾತ್ವಾ ದೃಷ್ಟ್ವಾ ದಂಡಕನಾಮಕಂ ॥ ೫೯ ॥

ಅವಿಮುಕ್ತಂ ತತೋ ದೃಷ್ಟ್ವಾ ಕೈವಲ್ಯಂ ಲಭತೇ ಕ್ಷಣಾತ್ ।
ತತ್ರ ಸಂಧ್ಯಾಮುಪಾಸಿತ್ವಾ ಬ್ರಾಹ್ಮಣಃ ಸಕೃದೇವ ತು ॥ ೬೦ ॥

ಪಂಚಷಷ್ಠಸಮಾಃ ಸಂಧ್ಯಾ ತೇನ ಚೋಪಾಸಿತಾ ಭವೇತ್ ।
ಪುರೀ ವಾರಾಣಸೀ ತಾಂ ತು ಶ್ಮಶಾನಂ ಚಾವಿಮುಕ್ತಕಂ ॥ ೬೧ ॥

ಅವಿಮುಕ್ತೇಶ್ವರಂ ಚೈವ ದೃಷ್ಟ್ವಾ ಗಣಪತಿರ್ಭವೇತ್ ।
ಅವಿಮುಕ್ತೇಶ್ವರಂ ಲಿಂಗಂ ತತ್ರ ದೃಷ್ಟ್ವೈವ ಮಾನವಃ ॥ ೬೨ ॥

---

೫೮. ಮನುಷ್ಯನ ಹೃದಯದಲ್ಲಿ ಮೂರು ಲಿಂಗಗಳಿರುತ್ತವೆ ಆ ಬಾವಿಯ ಜಲವನ್ನು ಪಾನಮಾಡುವ ಮನುಷ್ಯರು ಕೃತಾರ್ಥರಾಗುವರು.

೫೯-೬೦. ಅವರಿಗೆ ಈ ಸಂಸಾರವನ್ನು ದಾಟಿಸುವಂತಹ ಜ್ಞಾನವು ಬಂದೇ ಬರುತ್ತದೆ, ಸಂದೇಹವಿಲ್ಲ. ಆ ಬಾವಿಯ ನೀರಿನಲ್ಲಿ ಮನುಷ್ಯನು ಸ್ನಾನ ಮಾಡಿ ದಂಡಕನಾಮಕದೇವನನ್ನು ದರ್ಶನಮಾಡಿ ಅನಂತರ ಅವಿಮುಕ್ತೇಶ್ವರನನ್ನು ದರ್ಶನಮಾಡಿದರೆ ತಕ್ಷಣದಲ್ಲಿಯೇ ಮೋಕ್ಷವು ಲಭಿಸುತ್ತದೆ.

೬೦-೬೧. ಆ ಕ್ಷೇತ್ರದಲ್ಲಿ ಬ್ರಾಹ್ಮಣನು ಒಂದಾವರ್ತಿ ಸಂಧ್ಯೋಪಾಸನೆಯನ್ನು ಮಾಡಿದರೆ ಐದಾರುವರ್ಷಗಳು ಸಂಧ್ಯೋಪಾಸನೆ ಮಾಡುವುದರಿಂದಾಗುವ ಫಲವು ಅವನಿಗೆ ಬರುವುದು

೬೧-೬೨. ಆ ವಾರಾಣಸೀಪಟ್ಟಣ, ಅವಿಮುಕ್ತಕವೆಂಬ ಸ್ಮಶಾನ ಮತ್ತು ಅವಿಮುಕ್ತೇಶ್ವರ ಇವನ್ನು ನೋಡಿದರೆ ಗಣಪತಿಯಾಗುವನು. ಎಂದರೆ ಗಣಪತಿಯಂತೆ ಭಕ್ತಾಗ್ರಣಿಯಾಗಿ ಸದ್ಗತಿಯನ್ನು ಪಡೆಯುವನೆಂದು ತಾತ್ಪರ್ಯ.

ಸದ್ಯಃ ಪಾಪೈಸ್ತಥಾ ರೋಗೈಃ ಪಶುಪಾಶೈರ್ವಿಮುಚ್ಯತೇ ।
ಅವಿಮುಕ್ತಸ್ಯ ಚಾಗ್ರೇ ತು ಲಿಂಗಂ ಪಶ್ಚಾನ್ಮುಖಂ ಸ್ಥಿತಂ ॥ ೬೩ ॥

ಅವಿಮುಕ್ತಂ ಚ ತಂ ಭದ್ರೇ ನಾಮ್ನಾ ವೈ ಲಕ್ಷ್ಮಣೇಶ್ವರಂ ।
ತೇನ ವೈ ದೃಷ್ಟಮಾತ್ರೇಣ ಜ್ಞಾನವಾನ್ ಜಾಯತೇ ನರಃ ॥ ೬೪ ॥

ತಸ್ಯ ಚೋತ್ತರತೋ ದೇವಿ ಲಿಂಗಂ ಚೈವ ಚತುರ್ಮುಖಂ ।
ಚತುರ್ಥೇಶ್ವರನಾಮೇದಂ ಪಾಪಭೀಮೋಚನಂ ಪರಂ ॥ ೬೫ ॥

ಕ್ಷೇತ್ರಂ ವಾರಾಣಸೀ ನಾಮ ಮುಕ್ತಿದಂ ಪ್ರಾಣಿನಾಂ ಭುವಿ ।
ಅವಿಮುಕ್ತೇಶ್ವರಂ ತತ್ರ ಜೀವನ್ಮುಕ್ತಂ ಪ್ರಕೀರ್ತಿತಂ ॥ ೬೬ ॥

ಯತ್ರ ತತ್ರ ಸ್ಥಿತಸ್ಯಾಪಿ ಗಾಣಪತ್ಯಂ ವಿಧೀಯತೇ ।
ಪ್ರಾಣಾಂಸ್ತು ತತ್ರ ಸಂತ್ಯಜ್ಯ ಮುಕ್ತಿಮಾತ್ಯಂತಿಕೀಂ ವ್ರಜೇತ್ ॥ ೬೭ ॥

---

೬೩. ಅಲ್ಲಿ ಅವಿಮುಕ್ತೇಶ್ವರ ಲಿಂಗವನ್ನು ನೋಡಿದಕೂಡಲೇ ಮನುಷ್ಯನು ಪಾಪ, ರೋಗ ಮತ್ತು ಸಂಸಾರ ಬಂಧನಗಳಿಂದ ಬಿಡುಗಡೆಯನ್ನು ಹೊಂದುವನು. ಅವಿಮುಕ್ತದ ಮುಂಭಾಗದಲ್ಲಿ ಲಿಂಗವೂ, ಹಿಂಭಾಗದಲ್ಲಿ ಮುಖವೂ ಇದೆ.

೬೪. ಭದ್ರೇ ! ಆ ಅವಿಮುಕ್ತನನ್ನು ಲಕ್ಷ್ಮಣೇಶ್ವರನೆನ್ನುವರು. ಅವನನ್ನು ದರ್ಶನಮಾಡಿದ ಮಾತ್ರದಿಂದಲೇ ಮನುಷ್ಯನು ಜ್ಞಾನವಂತನಾಗುವನು.

೬೫. ದೇವಿಯೇ ! ಅದರ ಉತ್ತರಭಾಗದಲ್ಲಿ ಚತುರ್ಮುಖಲಿಂಗವಿದೆ. ಇದಕ್ಕೆ ಚತುರ್ಥೇಶ್ವರ ಎಂದು ಹೆಸರು. ಉತ್ಕೃಷ್ಟವಾದ ಈ ಲಿಂಗವು ಪಾಪಭಯವನ್ನು ಹೋಗಲಾಡಿಸುವುದು.

೬೬. ಭೂಲೋಕದಲ್ಲಿ ವಾರಾಣಸೀ ಎಂಬ ಕ್ಷೇತ್ರವು ಪ್ರಾಣಿಗಳಿಗೆ ಮುಕ್ತಿದಾಯಕವು. ಅಲ್ಲಿ ಅವಿಮುಕ್ತೇಶ್ವರನನ್ನು ಜೀವನ್ಮುಕ್ತಿಪ್ರದನೆಂದು ಹೇಳಿದೆ.

೬೭. ಎಲ್ಲೆಲ್ಲಿರುವವನಿಗೆ ಗಾಣಾಪತ್ಯವು ವಿಧಿಸಲ್ಪಟ್ಟಿದೆಯೋ ಅಲ್ಲಿ ಪ್ರಾಣಗಳನ್ನು ಬಿಟ್ಟು ಆತ್ಯಂತಿಕಮುಕ್ತಿಯನ್ನು ಪಡೆಯಬೇಕು.

ಏತದಭ್ಯಂತರಂ ಕ್ಷೇತ್ರೇ ಪ್ರಥಮಾವರಣಂ ಸ್ಮೃತಂ !
ತಥಾ ದ್ವಿತೀಯಾವರಣೇ ಪ್ರಾಚ್ಯಾಂ ತು ಮಣಿಕರ್ಣಿಕಾ || ೬೮ ||

ಸಪ್ತಕೋಟ್ಯಸ್ತು ಲಿಂಗಾನಿ ತತ್ರ ಸ್ಥಾನೇ ಸ್ಥಿತಾನಿ ಹಿ |
ತೇಷಾಂ ದರ್ಶನಮಾತ್ರೇಣ ಯಜ್ಞಾನಾಂ ಫಲಮಾಪ್ನುಯಾತ್ || ೬೯ ||

ಏತಾನಿ ಸಿದ್ಧಲಿಂಗಾನಿ ಕೂಪಾಃ ಪುಣ್ಯಾಸ್ತಥಾ ಹ್ರದಾಃ |
ವಾಪ್ಯೋ ನದ್ಯೋಥ ಕುಂಡಾನಿ ತಥಾ ತೇಽಪಿ ಪ್ರಕೀರ್ತಿತಾಃ || ೭೦ ||

ಏತೇಷು ಚೈವ ಯಃ ಸ್ನಾನಂ ಕರಿಷ್ಯತಿ ಸಮಾಹಿತಃ |
ಲಿಂಗಾನಿ ಸ್ಪರ್ಶಯಿತ್ವಾ ಚ ಸಂಸಾರೇ ನ ವಿಶೇತ್ಪುನಃ || ೭೧ ||

ಪೃಥಿವ್ಯಾಂ ಯಾನಿ ತೀರ್ಥಾನಿ ಹ್ಯಂತರಿಕ್ಷೇ ಚ ಯಾನಿ ತು |
ತೇಷಾಂ ಮಧ್ಯೇ ತು ಮುಖ್ಯಾನಿ ಕೀರ್ತಿತಾನಿ ಮಯಾ ಹಿ ತೇ || ೭೨ ||

---

೬೮. ಇದು ಕ್ಷೇತ್ರದ ಒಳಗಿನ ಮೊದಲನೆಯ ಆವರಣವೆಂದು ಉಕ್ತವಾಗಿದೆ. ಹಾಗೆಯೇ ಎರಡನೆಯ ಆವರಣದಲ್ಲಿ ಪೂರ್ವದಿಕ್ಕಿನಲ್ಲಿ ಮಣಿಕರ್ಣಿಕಾ ಎಂಬ ತೀರ್ಥವಿದೆ.

೬೯. ಆ ಸ್ಥಳದಲ್ಲಿ ಏಳುಕೋಟಿ ಲಿಂಗಗಳು ಸ್ಥಾಪಿತವಾಗಿವೆ. ಅವುಗಳ ದರ್ಶನಮಾಡುವ ಮಾತ್ರದಿಂದ ಯಜ್ಞಫಲವು ಬರುತ್ತದೆ.

೭೦. ಇವುಗಳು ಸಿದ್ಧಲಿಂಗಗಳು. ಇವುಗಳಲ್ಲದೆ ಪುಣ್ಯಕರಗಳಾದ ಕೂಪಗಳು, ಹ್ರದಗಳು, ಸರೋವರಗಳು, ನದಿಗಳು ಮತ್ತು ಕುಂಡಗಳೂ ಸಹ ಅಲ್ಲಿ ವಿಹಿತವಾಗಿವೆ.

೭೧. ಇವುಗಳಲ್ಲಿ ಸಮಾಧಾನಚಿತ್ತನಾಗಿ ಸ್ನಾನಮಾಡಿ ಲಿಂಗಗಳನ್ನು ಸ್ಪರ್ಶಮಾಡಿದರೆ ಪುನಃ ಸಂಸಾರದಲ್ಲಿ ಪ್ರವೇಶಿಸುವುದಿಲ್ಲ.

೭೨. ಭೂಮಿ, ಅಂತರಿಕ್ಷ ಮತ್ತು ಅವುಗಳ ಮಧ್ಯಭಾಗದಲ್ಲಿರುವ ತೀರ್ಥಗಳಲ್ಲಿ ಮುಖ್ಯವಾದುವುಗಳನ್ನು ನಾನು ಹೇಳಿರುವೆನು.

ತೀರ್ಥಯಾತ್ರಾ ವರಾರೋಹೇ ಕಥಿತಾ ಪಾಪನಾಶಿನೀ ।
ಯೇನ ಚೈಷಾ ಕೃತಾ ದೃಷ್ಟ್ವಾ ಸೋಽಪಿ ಪೈ ಮುಕ್ತಿಭಾಗ್ಭವೇತ್ ॥ ೭೩ ॥

ಅವಿಮುಕ್ತಂ ತು ಸುಶ್ರೋಣಿ ಮುಖ್ಯಮಾಪರಣಂ ಶುಭಂ ।
ಏತತ್ತು ಕಂಟಕಂ ನಾಮ ಮೃತ್ಯುಕಾಲೇಮೃತಪ್ರದಂ ॥ ೭೪ ॥

ಇತಿ ಶ್ರೀನಾರದೀಯಮಹಾಪುರಾಣೋತ್ತರಭಾಗೇ ಮೋಹಿನೀ
ವಸುಸಂವಾದೇ ಕಾಶೀಮಾಹಾತ್ಮ್ಯೇ ತೀರ್ಥಯಾತ್ರಾ
ವರ್ಣನಂ ನಾಮ ಏಕೋನಪಂಚಾಶತ್ತಮೋಽಧ್ಯಾಯಃ

---

೭೩. ವರಾರೋಹೇ ! ತೀರ್ಥಯಾತ್ರೆಯು ಪಾಪನಾಶಕವೆಂದು ಹೇಳಿದೆ. ಇಂತಹ ತೀರ್ಥಯಾತ್ರೆ ಮಾಡಿದವನನ್ನು ದರ್ಶನಮಾಡುವವನೂ ಸಹ ಮೋಕ್ಷಭಾಗಿಯಾಗುವನು.

೭೪. ಸುಶ್ರೋಣೀ ! ಅವಿಮುಕ್ತವು ಶುಭಕರವಾದ ಮುಖ್ಯಮಾವರಣವು. ಇದು ಕಂಟಕ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಇದು ಮರಣಕಾಲದಲ್ಲಿ ಮೋಕ್ಷದಾಯಕವಾಗುವುದು.

ಇಂತು ಶ್ರೀನಾರದೀಯ ಪುರಾಣೋತ್ತರಭಾಗದಲ್ಲಿ ಮೋಹಿನೀ ವಸುಸಂವಾದ
ರೂಪವಾದ ಕಾಶೀಮಾಹಾತ್ಮ್ಯಯಲ್ಲಿ ತೀರ್ಥಯಾತ್ರಾವರ್ಣನೆಯೆಂಬ
ನಲವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.



## ಪಂಚಾಶತ್ತಮೋಽಧ್ಯಾಯಃ

ವಸುರುವಾಚ

ಅತಃ ಪರಂ ಪ್ರವಕ್ಷ್ಯಾಮಿ ಯಾತ್ರಾಕಾಲಂ ತು ಮೋಹಿನಿ ।
ದೇವಾದ್ಯೈಸ್ತು ಕೃತಾ ಯಾ ತು ಯಥಾಯೋಗ್ಯಫಲಾಪ್ತಿದಾ ॥ ೧ ॥

ಚೈತ್ರಮಾಸೇ ತು ದಿವಿಜೈರ್ಯಾತ್ರೇಯಂ ವಿಹಿತಾ ಪುರಾ ।
ತತ್ರಸ್ಥೈಃ ಕಾಮಕುಂಡೇ ತು ಸ್ನಾನಪೂಜನತತ್ಪರೈಃ ॥ ೨ ॥

ಜ್ಯೇಷ್ಠಮಾಸೇ ತು ವೈ ಸಿದ್ಧೈಃ ಕೃತಾ ಯಾತ್ರಾ ಶುಭಾನನೇ ।
ರುದ್ರಾವಾಸಸ್ಯ ಕುಂಡೇ ತು ಸ್ನಾನಪೂಜಾಪರಾಯಣೈಃ ॥ ೩ ॥

ಆಷಾಢೇ ಚಾಪಿ ಗಂಧರ್ವೈರ್ಯಾತ್ರೇಯಂ ವಿಹಿತಾ ಶುಭೈಃ ।
ಪ್ರಿಯಾದೇವ್ಯಾಸ್ತು ಕುಂಡೇ ವೈ ಸ್ನಾನಪೂಜನಕಾರಣೈಃ ॥ ೪ ॥

---

## ಐವತ್ತನೆಯ ಅಧ್ಯಾಯ.

೧. ವಸುವು ಹೇಳಿದನು:— ಮೋಹಿನೀ ! ದೇವಾದಿಗಳು ಆಚರಿಸಿರುವ, ಯೋಗ್ಯತಾನುಸಾರವಾಗಿ ಫಲವನ್ನು ಕೊಡುವ ಯಾತ್ರೆಯ ವಿಹಿತಕಾಲವನ್ನು ಈಗ ಹೇಳುವೆನು.

೨. ಪೂರ್ವದಲ್ಲಿ ಆ ಕಾಶೀಕ್ಷೇತ್ರದ ಕಾಮಕುಂಡದಲ್ಲಿ ಸ್ನಾನಪೂಜೆಗಳಲ್ಲಿ ನಿರತರಾದ ದೇವತೆಗಳು ಚೈತ್ರಮಾಸದಲ್ಲಿ ಈ ಯಾತ್ರೆಯನ್ನು ಮಾಡಿದರು.

೩. ಶುಭಾನನೇ ! ರುದ್ರಾವಾಸಕುಂಡದಲ್ಲಿ ಸ್ನಾನಪೂಜಾತತ್ಪರರಾದ ಸಿದ್ಧರು ಜ್ಯೇಷ್ಠಮಾಸದಲ್ಲಿ ಈ ಯಾತ್ರೆಯನ್ನು ಮಾಡಿದರು.

೪. ಪ್ರಿಯಾದೇವಿಯಕುಂಡದಲ್ಲಿ ಸ್ನಾನಪೂಜೆಗಳನ್ನು ಮಾಡಬೇಕೆಂದು ಪುಣ್ಯವಂತರಾದ ಗಂಧರ್ವರು ಆಷಾಢಮಾಸದಲ್ಲಿ ಈ ಯಾತ್ರೆಯನ್ನು ಮಾಡಿದರು.

ವಿದ್ಯಾಧರೈಸ್ತು ಯಾತ್ರೇಯಂ ಶ್ರಾವಣೇ ಮಾಸಿ ಮೋಹಿನಿ |
ಲಕ್ಷ್ಮೀಕುಂಡಸ್ಥಿತೈಶ್ಚೀರ್ಣಾ ಸ್ನಾನಾರ್ಚನಪರಾಯಣೈಃ || ೫ ||

ಮಾರ್ಕಂಡೇಯಹ್ರದಸ್ಥೈಸ್ತು ಸ್ನಾನಪೂಜನತತ್ಪರೈಃ |
ಕೃತಾ ಯಕ್ಷೈಸ್ತು ಯಾತ್ರೇಯಮಿಷಮಾಸೇ ವರಾನನೇ || ೬ ||

ಪನ್ನಗೈಶ್ಚೈವ ಯಾತ್ರೇಯಂ ಮಾರ್ಗಮಾಸೇ ತು ಮೋಹಿನಿ |
ಕೋಟಿತೀರ್ಥಸ್ಥಿತೈಶ್ಚೀರ್ಣಾ ಸ್ನಾನಪೂಜಾವಿಧಾಯಕೈಃ || ೭ ||

ಕಪಾಲಮೋಚನಸ್ಥೈಸ್ತು ಗುಹ್ಯಕೈಃ ಶುಭಲೋಚನೇ |
ಪೌಷೇ ಮಾಸಿ ಕೃತಾ ಯಾತ್ರಾ ಸ್ನಾನಧ್ಯಾನಾರ್ಚನಾನ್ವಿತೈಃ || ೮ ||

ಕಾಲೇಶ್ವರಾಖ್ಯಕುಂಡಸ್ಥೈಃ ಫಾಲ್ಗುನೇ ಮಾಸಿ ಶೋಭನೇ |
ಪಿಶಾಚೈಸ್ತು ಕೃತಾ ಯಾತ್ರಾ ಸ್ನಾನಪೂಜಾದಿತತ್ಪರೈಃ || ೯ ||

---

೫. ಮೋಹಿನೀ ! ಲಕ್ಷ್ಮೀಕುಂಡಸ್ಥಿತರಾಗಿ ಸ್ನಾನಪೂಜೆಗಳಲ್ಲಾಸಕ್ತರಾದ ವಿದ್ಯಾಧರರು ಶ್ರಾವಣಮಾಸದಲ್ಲಿ ಈ ಯಾತ್ರೆಯನ್ನು ಮಾಡಿದರು.

೬. ವರಾನನೇ ! ಮಾರ್ಕಾಂಡೇಯ ಹ್ರದಸ್ಥರಾಗಿ ಸ್ನಾನಪೂಜೆಗಳಲ್ಲಿ ನಿರತರಾದ ಯಕ್ಷರು ಆಶ್ವಯುಜಮಾಸದಲ್ಲಿ ಈ ಯಾತ್ರೆಯನ್ನು ಮಾಡಿದರು.

೭. ಮೋಹಿನೀ ! ಕೋಟಿತೀರ್ಥಸ್ಥಿತರಾಗಿ ಸ್ನಾನಪೂಜೆಗಳನ್ನು ವಿಧಿಸಿದ ಪನ್ನಗರು ಮಾರ್ಗಶೀರ್ಷಮಾಸದಲ್ಲಿ ಈ ಯಾತ್ರೆಯನ್ನು ಮಾಡಿದರು.

೮. ಶುಭಲೋಚನೇ ! ಕಪಾಲಮೋಚನಸ್ಥಿತರಾದ ಸ್ನಾನ, ಧ್ಯಾನ, ಅರ್ಚನೆಗಳನ್ನು ಮಾಡುವಂತಹ ಗುಹ್ಯಕರು ಪುಷ್ಯಮಾಸದಲ್ಲಿ ಈ ಯಾತ್ರೆಯನ್ನು ಮಾಡಿದರು.

೯. ಶೋಭನೇ ! ಕಾಲೇಶ್ವರವೆಂಬ ಕುಂಡದಲ್ಲಿರುವ ಸ್ನಾನಪೂಜಾದಿ ನಿರತರಾದ ಪಿಶಾಚಗಳು ಫಾಲ್ಗುಣಮಾಸದಲ್ಲಿ ಈ ಯಾತ್ರೆಯನ್ನು ಮಾಡಿರುವರು.

ಫಾಲ್ಗುನೇ ತು ಶುಭೇ ಮಾಸೇ ಸಿತೇ ಯಾ ತು ಚತುರ್ದಶೀ ।
ತೇನ ಸಾ ಪ್ರೋಚ್ಯತೇ ದೇವಿ ಪಿಶಾಚೀ ನಾಮ ವಿಶ್ರುತಾ ॥ ೧೦ ॥

ಅಥ ತೇ ಸಂಪ್ರವಕ್ಷ್ಯಾಮಿ ಯಾತ್ರಾಕೃತ್ಯಂ ಶುಭಾನನೇ ।
ಕೃತೇನ ಯೇನ ಮನುಜೋ ಯಾತ್ರಾಫಲಮವಾಪ್ನುಯಾತ್ ॥ ೧೧ ॥

ಉದಕುಂಭಾಸ್ತು ದಾತವ್ಯಾ ಮಿಷ್ಟಾನ್ನೇನ ಸಮನ್ವಿತಾಃ ।
ಫಲಪುಷ್ಪಸಮೋಪೇತಾ ವಸ್ತ್ರೈಃ ಸಂಛಾದಿತಾಃ ಶುಭಾಃ ॥ ೧೨ ॥

ಚೈತ್ರಸ್ಯ ಶುಕ್ಲಪಕ್ಷೇ ತು ತೃತೀಯಾ ಯಾ ಮಹಾಫಲಾ ।
ತತ್ರ ಗೌರೀ ತು ದ್ರಷ್ಟವ್ಯಾ ಭಕ್ತಿಭಾವೇನ ಮಾನವೈಃ ॥ ೧೩ ॥

ಸ್ನಾನಂ ಕೃತ್ವಾ ತು ಗಂತವ್ಯಂ ಗೋಪ್ರೇಕ್ಷೇ ತು ವರಾನನೇ ।
ಸ್ವರ್ದ್ವಾರಿ ಕಾಲಿಕಾದೇವೀ ಅರ್ಚಿತವ್ಯಾ ಪ್ರಯತ್ನತಃ ॥ ೧೪ ॥

---

೧೦ ದೇವಿಯೇ! ಅದರಿಂದ ಫಾಲ್ಗುಣಮಾಸದ ಶುಕ್ಲಪಕ್ಷದ ಚತುರ್ದಶಿಯು ಪಿಶಾಚ ಚತುರ್ದಶಿಯೆಂದು ವಿಖ್ಯಾತವಾಗಿದೆ.

೧೧. ಶುಭಾನನೇ! ಯಾವಧರ್ಮವನ್ನಾಚರಿಸಿದರೆ ಮನುಷ್ಯನು ಯಾತ್ರೆಯ ಫಲವನ್ನು ಹೊಂದುವನೋ ಅಂತಹ ಯಾತ್ರಾಕೃತ್ಯವನ್ನು ನಿನಗೆ ಹೇಳುವೆನು.

೧೨. ಮೃಷ್ಟಾನ್ನ, ಫಲ, ಪುಷ್ಪ ಇವುಗಳಿಂದ ಸಹಿತವಾದ, ವಸ್ತ್ರಗಳಿಂದ ಮುಚ್ಚಲ್ಪಟ್ಟ, ನೀರುತುಂಬಿದ ಕಲಶಗಳನ್ನು ದಾನಮಾಡಬೇಕು.

೧೩. ಮಹಾಫಲಪ್ರದವಾದ ಚೈತ್ರಶುಕ್ಲ ತದಿಗೆಯ ದಿನದಲ್ಲಿ ಭಕ್ತಿಭಾವದಿಂದ ಮನುಷ್ಯರು ಗೌರೀದೇವಿಯ ದರ್ಶನಮಾಡಬೇಕು.

೧೪. ವರಾನನೇ! ಗೋಪ್ರೇಕ್ಷದಲ್ಲಿ ಸ್ನಾನಮಾಡಿ ಹೊರಡಬೇಕು. ಸ್ವರ್ಗದ್ವಾರದಲ್ಲಿ ಕಾಳಿಕಾದೇವಿಯನ್ನು ಪ್ರಯತ್ನಪೂರ್ವಕವಾಗಿ ಪೂಜಿಸಬೇಕು.

ಅನ್ಯಾ ಚಾಪಿ ಪರಾ ಪ್ರೋಕ್ತಾ ಸಂವರ್ತಾ ಲಲಿತಾ ಶುಭಾ ।
ದ್ರಷ್ಟವ್ಯಾ ಚೈವ ಸಾ ಭಕ್ತ್ಯಾ ಸರ್ವಕರ್ಮಫಲಪ್ರದಾ ॥ ೧೫ ॥

ತತಸ್ತು ಭೋಜಯೇದ್ವಿಪ್ರಾನ್ ಶಿವಭಕ್ತಾನ್ ಶುಚಿವ್ರತಾನ್ ।
ವಾಸೋಭಿರ್ದಕ್ಷಿಣಾಭಿಶ್ಚ ಪುಷ್ಕಲಾಭಿರ್ಯಥಾರ್ಹತಃ ॥ ೧೬ ॥

ಪಂಚ ಗೌರೀಃ ಸಮುದ್ದಿಶ್ಯ ರಸಾನ್ ಗಂಧಾನ್ ದ್ವಿಜೇಽರ್ಪಯೇತ್ ।
ಉತ್ತಮಂ ಶ್ರೇಯ ಆಪ್ನೋತಿ ಸೌಭಾಗ್ಯೇನ ಸಮನ್ವಿತಃ ॥ ೧೭ ॥

ವಿನಾಯಕಾನ್ ಪ್ರವಕ್ಷ್ಯಾಮಿ ಕ್ಷೇತ್ರವಾಸೇ ತು ವಿಘ್ನದಾನ್ ।
ಯಾನ್ ಸಂಪೂಜ್ಯ ನರೋ ದೇವಿ ನಿರ್ವಿಘ್ನೇನ ಫಲಂ ಲಭೇತ್ ॥ ೧೮ ॥

ಢುಂಢಿಂ ತು ಪ್ರಥಮಂ ದೃಷ್ಟ್ವಾ ತಥಾ ಕಿಲವಿನಾಯಕಂ ।
ದೇವ್ಯಾ ವಿನಾಯಕಂ ಚೈವ ಗೋಪ್ರೇಕ್ಷಂ ಹಸ್ತಿಹಸ್ತಿನಂ ॥ ೧೯ ॥

---

೧೫. ಸಂವರ್ತಲಲಿತೆಯೆಂಬ ಮಂಗಳಕರವಾದ ಇನ್ನೊಂದು ದೇವತೆಯು ಅಲ್ಲಿ ಉಕ್ತವಾಗಿದೆ. ಸಕಲೇಷ್ಟಾರ್ಥಪ್ರದಳಾದ ಆ ದೇವಿಯನ್ನೂ ಸಹ ಭಕ್ತಿಯಿಂದ ದರ್ಶನಮಾಡಬೇಕು.

೧೬. ತರುವಾಯ ಶಿವಭಕ್ತರು, ಪರಿಶುದ್ಧ ವ್ರತಾನುಷ್ಠಾನಪರರೂ ಆದ ಬ್ರಾಹ್ಮಣರಿಗೆ ಅವರವರ ಯೋಗ್ಯತಾನುಸಾರವಾಗಿ ಹೇರಳವಾಗಿ ವಸ್ತ್ರದಕ್ಷಿಣೆಗಳನ್ನು ಕೊಟ್ಟು ಭೋಜನಮಾಡಿಸಬೇಕು.

೧೭. ಪಂಚಗೌರೀದೇವಿಯರ ತೃಪ್ತ್ಯರ್ಥವಾಗಿ ರಸ ಮತ್ತು ಗಂಧಗಳನ್ನು ಬ್ರಾಹ್ಮಣರಿಗೆ ಕೊಡಬೇಕು. ಅದರಿಂದ ಸೌಭಾಗ್ಯಯುಕ್ತವಾದ ಉತ್ತಮ ಶ್ರೇಯಸ್ಸು ಲಭಿಸುತ್ತದೆ.

೧೮. ಕ್ಷೇತ್ರದಲ್ಲಿ ವಾಸಿಸುವುದಕ್ಕೆ ವಿಘ್ನದಾಯಕರಾದ ವಿನಾಯಕರನ್ನು ಹೇಳುವೆನು- ದೇವಿಯೇ! ಅವರನ್ನು ಪೂಜಿಸಿದರೆ ಮನುಷ್ಯನು ನಿರ್ವಿಘ್ನವಾಗಿ ಫಲವನ್ನು ಹೊಂದುವನು.

೧೯-೨೦. ದೇವಿಯೇ! ಚೌತಿಯದಿನದಲ್ಲಿ ಮೊದಲು ಢುಂಢಿ

ವಿನಾಯಕಂ ತಥೈವಾನ್ಯಂ ಸಿಂದೂರ್ಯಂ ನಾಮ ವಿಶ್ರುತಂ ।
ಚತುರ್ಥ್ಯಾಂ ದೇವಿ ಪ್ರಷ್ಟವ್ಯಾ ಏವಂ ಚೈವ ವಿನಾಯಕಾಃ ॥ ೨೦ ॥

ಲಡ್ಡುಕಾಶ್ಚ ಪ್ರದಾತವ್ಯಾ ಏತಾನುದ್ದಿಶ್ಯ ವಾಡವೇ ।
ಏತೇನ ಚೈವ ಕೃತ್ಯೇನ ಸಿದ್ಧಿಮಾನ್ ಜಾಯತೇ ನರಃ ॥ ೨೧ ॥

ಅತಃ ಪರಂ ಪ್ರವಕ್ಷ್ಯಾಮಿ ಚಂಡಿಕಾಃ ಕ್ಷೇತ್ರರಕ್ಷಕಾಃ ।
ದಕ್ಷಿಣೇ ರಕ್ಷತೇ ದುರ್ಗಾ ನೈರ್ಋತೇ ಚಾಂತರೇಶ್ವರೀ ॥ ೨೨ ॥

ಅಂಗಾರೇಶೀ ಪಶ್ಚಿಮೇ ತು ವಾಯವ್ಯೇ ಭದ್ರಕಾಲಿಕಾ ।
ಉತ್ತರೇ ಭೀಮಚಂಡಾ ಚ ಮಹಾಮತ್ತಾ ತಥೈಶಕೇ ॥ ೨೩ ॥

ಊರ್ಧ್ವಕೇಶೀಸಮಾಯುಕ್ತಾ ಶಾಂಕರೀ ಪೂರ್ವತಃ ಸ್ಮೃತಾಃ ।
ಅರ್ಧಕೇಶೀ ತಥಾಗ್ನೇಯ್ಯಾಂ ಚಿತ್ರಘಂಟಾ ಚ ಮಧ್ಯತಃ ॥ ೨೪ ॥

---

ವಿನಾಯಕನನ್ನು ದರ್ಶನಮಾಡಿ ಬಳಿಕ ಕಿಲವಿನಾಯಕ, ದೇವೀವಿನಾಯಕ, ಗೋಪ್ರೇಕ್ಷ, ಹಸ್ತಿಹಸ್ತಿ ಎಂಬ ವಿನಾಯಕರು ಮತ್ತು ಸಿಂದೂರ್ಯನೆಂದು ವಿಖ್ಯಾತನಾದ ಇನ್ನೊಬ್ಬ ವಿನಾಯಕ ಎಂಬೀ ವಿನಾಯಕರನ್ನು ದರ್ಶನ ಮಾಡಬೇಕು.

೨೧. ಈ ವಿನಾಯಕರ ತೃಪ್ತ್ಯರ್ಥವಾಗಿ ಬ್ರಾಹ್ಮಣರಿಗೆ ಲಡ್ಡುಗಳನ್ನು ಕೊಡಬೇಕು. ಈ ಕೃತ್ಯದಿಂದಲೇ ಮನುಷ್ಯನು ಸಿದ್ಧಿವಂತನಾಗುವನು.

೨೨. ಈಗ ಕ್ಷೇತ್ರಪಾಲಕರಾದ ಚಂಡಿಕಾದೇವಿಯರನ್ನು ಹೇಳುವೆನು. ದಕ್ಷಿಣದಿಕ್ಕಿನಲ್ಲಿ ದುರ್ಗಾದೇವಿಯೂ, ನೈಋತ್ಯದಿಕ್ಕಿನಲ್ಲಿ ಅಂತರೇಶ್ವರಿಯೂ ಪಾಲಕರಾಗಿರುವರು.

೨೩. ಪಶ್ಚಿಮದಿಕ್ಕಿನಲ್ಲಿ ಅಂಗಾರೇಶಿಯೂ, ವಾಯವ್ಯದಿಕ್ಕಿನಲ್ಲಿ ಭದ್ರಕಾಲಿಕೆಯೂ, ಉತ್ತರದಲ್ಲಿ ಭೀಮಚಂಡಿಯೂ, ಈಶಾನ್ಯದಲ್ಲಿ ಮಹಾಮತ್ತೆಯೂ ರಕ್ಷಕರಾಗಿರುವರು.

೨೪. ಪೂರ್ವದಲ್ಲಿ ಊರ್ಧ್ವಕೇಶೀಯುಕ್ತಳಾದ ಶಾಂಕರೀದೇವಿಯೂ, ಆಗ್ನೇಯದಿಗ್ಭಾಗದಲ್ಲಿ ಅರ್ಧಕೇಶಿಯೂ, ಮಧ್ಯದಲ್ಲಿ ಚಿತ್ರಘಂಟಾದೇವಿಯೂ ರಕ್ಷಕರಾಗಿರುವರು.

ಏತಾಸ್ತು ಚಂಡಿಕಾದೇವೀರ್ಯೋ ನೈ ಪಶ್ಯತಿ ಮಾನವಃ ।
ತಸ್ಯ ತುಷ್ಟಾಶ್ಚ ತಾಃ ಸರ್ವಾಃ ಕ್ಷೇತ್ರಂ ರಕ್ಷತಿ ತತ್ಪರಾಃ ॥ ೧೫ ॥

ವಿಘ್ನಂ ಕುರ್ವಂತಿ ಸತತಂ ಪಾಪಿನಾಂ ದೇವಿ ಸರ್ವದಾ ।
ತಸ್ಮಾದ್ದೇವ್ಯಃ ಸದಾ ಪೂಜ್ಯಾ ರಕ್ಷಾರ್ಥೇ ಸವಿನಾಯಕಾಃ ॥ ೧೬ ॥

ಯದೀಚ್ಛೇತ್ಪರಮಾಂ ಸಿದ್ಧಿಂ ಸಂತತಿಂ ವಿಭವಂ ಸುಖಂ ।
ತತೋ ಭಕ್ತ್ಯಾ ಗಂಧಪುಷ್ಪನೈವೇದ್ಯಾದೀನ್ ಸಮರ್ಪಯೇತ್ ॥ ೧೭ ॥

ಅನ್ಯಚ್ಚ ತೇ ಪ್ರವಕ್ಷ್ಯಾಮಿ ತಸ್ಮಿನ್ ಸ್ಥಾನೇ ಸುಲೋಚನೇ ।
ತಿಸ್ರೋ ನದ್ಯಸ್ತು ತತ್ರಸ್ಥಾ ವಹಂತಿ ಚ ಶುಭೋದಕಾಃ ॥ ೧೮ ॥

ತಾಸಾಂ ದರ್ಶನಮಾತ್ರೇಣ ಬ್ರಹ್ಮಹತ್ಯಾ ನಿವರ್ತತೇ ।
ಏಕಾ ತು ತತ್ರ ತ್ರಿಸ್ರೋತಾ ತಥಾ ಮಂದಾಕಿನೀ ಪರಾ ॥ ೧೯ ॥

---

೧೫. ಈ ಚಂಡಿಕಾದೇವಿಯರ ದರ್ಶನಮಾಡುವ ಮಾನವನಿಗೆ ಕ್ಷೇತ್ರ ಪಾಲಕರಾದ ಆ ದೇವಿಯರೆಲ್ಲರೂ ಪ್ರಸನ್ನರಾಗುವರು.

೧೬. ದೇವಿಯೇ! ಆ ಚಂಡಿಕಾದೇವಿಯರು ಪಾಪಿಗಳಿಗೆ ಯಾವಾಗಲೂ ವಿಘ್ನಮಾಡುವರು. ಆದಕಾರಣ ರಕ್ಷಣಾರ್ಥವಾಗಿ ವಿನಾಯಕಸಹಿತರಾದ ಆ ದೇವಿಯರನ್ನು ಪೂಜಿಸಬೇಕು.

೧೭ ದೇವಿಯೇ! ಪರಮಸಿದ್ಧಿ, ಸಂತಾನ, ಐಶ್ವರ್ಯ ಮತ್ತು ಸುಖಗಳನ್ನು ಬಯಸುವವನು ಯಾವಾಗಲೂ ಭಕ್ತಿಯಿಂದ ಗಂಧ ಪುಷ್ಪ ನೈವೇದ್ಯ ಮುಂತಾದುವನ್ನು ದೇವಿಗೆ ಅರ್ಪಿಸಬೇಕು.

೧೮. ಸುಲೋಚನೇ! ಆ ಸ್ಥಳದಲ್ಲಿರುವ ಇನ್ನೊಂದು ವಿಶೇಷವನ್ನು ನಿನಗೆ ಹೇಳುವೆನು. ಅಲ್ಲಿ ಪುಣ್ಯಕರವಾದ ಉದಕಗಳುಳ್ಳ ಮೂರು ನದಿಗಳು ಹರಿಯುತ್ತಿವೆ.

೧೯-೨೦. ಅವುಗಳನ್ನು ದರ್ಶನಮಾಡುವ ಮಾತ್ರದಿಂದ ಬ್ರಹ್ಮಹತ್ಯೆಯು ಪರಿಹಾರವಾಗುವುದು. ಅವುಗಳಲ್ಲಿ ಒಂದನೆಯದು ತ್ರಿಸ್ರೋತವು,

ಮತ್ಸ್ಯೋದರೀ ತೃತೀಯಾ ಚ ಏತಾಸ್ತಿಸ್ರಸ್ತು ಪುಣ್ಯದಾಃ ।
ಮಂದಾಕಿನೀ ತತ್ರ ಪುಣ್ಯಾ ಮಧ್ಯಮೇಶ್ವರಸಂಸ್ಥಿತಾ ॥ ೩೦ ॥

ಪಿತಾಮಹಸ್ರೋತಿಕಾ ಚ ಅವಿಮುಕ್ತೇತಿಪುಣ್ಯದಾ
ಮತ್ಸ್ಯೋದರೀ ತು ಓಂಕಾರೇ ಪುಣ್ಯದಾ ಸರ್ವದೈವ ಹಿ ॥ ೩೧ ॥

ತಸ್ಮಿನ್ ಸ್ಥಾನೇ ಯದಾ ಗಂಗಾ ಆಗಮಿಷ್ಯತಿ ಮೋಹಿನಿ ।
ತದಾ ಪುಣ್ಯತಮಃ ಕಾಲೋ ದೇವಾನಾಮಪಿ ದುರ್ಲಭಃ ॥ ೩೨ ॥

ವರುಣಾಸಿಕ್ತಸಲಿಲೇ ಜಾಹ್ನವೀಜಲವಿಪ್ಲುತೇ ।
ತತ್ರ ನಾದೇಶ್ವರೇ ಪುಣ್ಯೇ ಸ್ನಾತಃ ಕಿಮನುಶೋಚತಿ ॥ ೩೩ ॥

ಮತ್ಸ್ಯೋದರೀ ಸಮಾಯುಕ್ತಾ ಯದಾ ಗಂಗಾ ಬಭೂವ ಹ ।
ತಸ್ಮಿನ್ ಕಾಲೇ ಶಿವಃ ಸ್ನಾನಾತ್ಕಪಾಲಂ ಮುಕ್ತವಾನ್ ಶುಭೇ ॥ ೩೪ ॥

---

ಎರಡನೆಯದು ಮಂದಾಕಿನಿಯು, ಮತ್ಸ್ಯೋದರಿಯು ಮೂರನೆಯದು. ಈ ಮೂರೂ ಪುಣಕರವಾದುವುಗಳು. ಅವುಗಳಲ್ಲಿ ಮಂದಾಕಿನಿಯು ಮಧ್ಯಮೇಶ್ವರ ಸ್ಥಿತವಾಗಿ ಅತ್ಯಂತ ಪುಣ್ಯಕರವು.

೩೧. ಪಿತಾಮಹಸ್ರೋತಿಕೆಯು ಅವಿಮುಕ್ತದಲ್ಲಿ ಅತ್ಯಂತ ಪುಣ್ಯಪ್ರದವು. ಯಾವಾಗಲೂ ಮತ್ಸ್ಯೋದರಿಯು ಓಂಕಾರದಲ್ಲಿ ಪುಣ್ಯಪ್ರದವು.

೩೨. ಮೋಹಿನೀ! ಆ ಸ್ಥಳದಲ್ಲಿ ಗಂಗೆಯು ಹರಿಯುವಾಗ ಅತ್ಯಂತ ಪುಣ್ಯಕರಕಾಲವು ಬರುತ್ತದೆ. ಅದು ದೇವತೆಗಳಿಗೂ ಸಹ ದುರ್ಲಭವು.

೩೩. ಜಾಹ್ನವಿಯ ಜಲದಿಂದ ವ್ಯಾಪೃತವಾದ ವರುಣಾನದಿಯ ಜಲದಲ್ಲಿ ಪುಣ್ಯಕರವಾದ ನಾದೇಶ್ವರಸನ್ನಿಧಿಯಲ್ಲಿ ಸ್ನಾನಮಾಡಿದವನು ದುಃಖಪಡುವನೇನು? ಎಂದರೆ ಅವನಿಗೆ ದುಃಖವು ಬರುವುದಿಲ್ಲ.

೩೪. ಗಂಗೆಯು ಮತ್ಸ್ಯೋದರಿಯ ಸಂಗಮವಾದಾಗ ಶಿವನು ಅಲ್ಲಿ ಸ್ನಾನಮಾಡಿ ಕಪಾಲವನ್ನು ಬಿಡಿಸಿಕೊಂಡನು.

ಕಪಾಲಮೋಚನಂ ನಾಮ ತತ್ರೈವ ಸುಮಹತ್ಸರಃ ।
ಪಾವನಂ ಸರ್ವಸತ್ವಾನಾಂ ಪುಣ್ಯದಂ ಪರಿಕೀರ್ತಿತಂ ॥ ೩೫ ॥

ಮತ್ಸ್ಯೋದರೀಜಲೇ ಗಂಗಾ ಓಂಕಾರೇಶ್ವರಸನ್ನಿಧೌ ।
ತದಾ ತಸ್ಮಿನ್ ಜಲೇ ಸ್ನಾತ್ವಾ ದೃಷ್ಟ್ವಾ ಚೋಂಕಾರಮೀಶ್ವರಂ ॥ ೩೬ ॥

ಶೋಕಂ ಜರಾಂ ಮೃತ್ಯುಬಂಧಂ ತತೋ ನ ಸ್ಪೃಶತೇ ನರಃ ।
ತಸ್ಮಿನ್ ಸ್ನಾತಃ ಶಿವಃ ಸಾಕ್ಷಾದೋಂಕಾರೇಶ್ವರಸಂಜ್ಞಿತೇ ॥ ೩೭ ॥

ಏತದ್ರಹಸ್ಯಮಾಖ್ಯಾತಂ ತವ ಸ್ನೇಹಾದ್ವರಾನನೇ ।
ಅಕಾರಂ ಚಾಪ್ಯುಕಾರಂ ಚ ಮಕಾರಂ ಚ ಪ್ರಕೀರ್ತಿತಂ ॥ ೩೮ ॥

ಅಕಾರಸ್ತತ್ರ ವಿಜ್ಞೇಯೋ ವಿಷ್ಣುಲೋಕಗತಿಪ್ರದಃ ।
ತಸ್ಯ ದಕ್ಷಿಣಪಾರ್ಶ್ವೇ ತು ಉಕಾರಃ ಪರಿಕೀರ್ತಿತಃ ॥ ೩೯ ॥

---

೩೫. ಅಲ್ಲಿಯೇ ಕಪಾಲಮೋಚನವೆಂಬ ಅತ್ಯಂತದೊಡ್ಡದಾದ ಸರೋವರವಿದೆ. ಅದು ಸಕಲಪ್ರಾಣಿಗಳಿಗೂ ಪವಿತ್ರಕರವು ಮತ್ತು ಪುಣ್ಯಕರವು ಎಂಬುದಾಗಿ ಹೇಳಿದೆ.

೩೬-೩೭. ಮತ್ಸ್ಯೋದರೀಜಲದಲ್ಲಿ ಗಂಗೆಯು ಸಂಗತವಾದಾಗ ಓಂಕಾರೇಶ್ವರ ಸನ್ನಿಧಿಯಲ್ಲಿ ಆ ನೀರಿನಲ್ಲಿ ಸ್ನಾನಮಾಡಿ ಓಂಕಾರೇಶ್ವರನನ್ನು ದರ್ಶನ ಮಾಡಿದರೆ ಮನುಷ್ಯನು ದುಃಖ, ಮುಪ್ಪು, ಸಾವು, ಬಂಧ ಇವುಗಳನ್ನು ಕಳೆದುಕೊಳ್ಳುವನು. ಓಂಕಾರೇಶ್ವರ ನಾಮಕವಾದ ಆ ತೀರ್ಥದಲ್ಲಿ ಸ್ನಾನಮಾಡಿದವನು ಸಾಕ್ಷಾತ್ ಶಿವನಾಗುವನು. ಎಂದರೆ ಶಿವನ ಅನುಗ್ರಹಕ್ಕೆ ಪಾತ್ರನಾಗುವನೆಂದು ಭಾವ.

೩೮. ವರಾನನೇ! ಈ ರಹಸ್ಯವನ್ನು ಅಭಿಮಾನದಿಂದ ನಿನಗೆ ಹೇಳಿರುವೆನು. ಅಕಾರ, ಉಕಾರ, ಮಕಾರ ಎಂಬ ಮೂರುವರ್ಣಗಳು ಓಂಕಾರದಲ್ಲಿ ಅಡಗಿವೆ.

೩೯. ಅದರಲ್ಲಿ ಅಕಾರವು ವಿಷ್ಣುಲೋಕಗತಿಯನ್ನು ಕೊಡುತ್ತದೆ. ಅದರ ದಕ್ಷಿಣಭಾಗದಲ್ಲಿ ಉಕಾರವು ಉಕ್ತವಾಗಿದೆ.

ತತ್ರ ಸಿದ್ಧಿಂ ಪರಾಂ ಪ್ರಾಪ್ತೋ ದೇವಾಚಾರ್ಯೋ ಬೃಹಸ್ಪತಿಃ ।
ಓಂಕಾರಂ ತತ್ರ ವಿಜ್ಞೇಯಂ ಬ್ರಹ್ಮಣಃ ಪದಮವ್ಯಯಂ ॥ ೪೦ ॥

ತಯೋಸ್ತಥೋತ್ತರೇ ಭಾಗೇ ಮಕಾರಂ ವಿಷ್ಣುಸಂಜ್ಞಿತಂ ।
ತಸ್ಮಿನ್ ಲಿಂಗೇ ತು ಸಂಸಿದ್ಧಃ ಕಪಿಲರ್ಷಿರ್ಮಹಾಮುನಿಃ ॥ ೪೧ ॥

ವಾರಾಣಸೀಮಭ್ಯುಪೇತ್ಯ ಪಂಚಾಯತನಮುತ್ತಮಂ ।
ಆರಾಧ್ಯಮಾನೋ ದೇವೇಶಂ ಭೀಷ್ಮಸ್ತತ್ರ ಸ್ಥಿತೋಭವತ್ ॥ ೪೨ ॥

ತಸ್ಮಿನ್ ಸ್ಥಾನೇ ತು ಸುಭಗೇ ಸ್ವಯಮಾವಿರಭೂಚ್ಛಿವಃ ।
ಗೋಪ್ರೇಕ್ಷಕ ಇತಿ ಖ್ಯಾತಃ ಸಂಸ್ತುತಃ ಸರ್ವದೈವತೈಃ ॥ ೪೩ ॥

ಗೋಪ್ರೇಕ್ಷೇಶ್ವರಮಾಗತ್ಯ ದೃಷ್ಟ್ವಾಭ್ಯರ್ಚ್ಯ ಚ ಮಾನವಃ ।
ನ ದುರ್ಗತಿಮವಾಪ್ನೋತಿ ಕಲ್ಮಷೈಶ್ಚ ವಿಮುಚ್ಯತೇ ॥ ೪೪ ॥

---

೪೦. ಅಲ್ಲಿ ದೇವತೆಗಳಿಗೆ ಆಚಾರ್ಯನಾದ ಬೃಹಸ್ಪತಿಯು ಉತ್ತಮಸಿದ್ಧಿಯನ್ನು ಪಡೆದನು. ಅಲ್ಲಿ ಓಂಕಾರವನ್ನು ಶಾಶ್ವತವೂ ನಾಶರಹಿತವೂ ಆದ ಬ್ರಹ್ಮಪದವೆಂದು ತಿಳಿಯಬೇಕು.

೪೧. ಅವುಗಳ ಉತ್ತರಭಾಗದಲ್ಲಿ ವಿಷ್ಣುನಾಮಕವಾದ ಮಕಾರವಿದೆ. ಆ ಲಿಂಗದಲ್ಲಿ ಮಹಾಮುನಿಯಾದ ಕಪಿಲ ಮಹರ್ಷಿಯು ಸಿದ್ಧಿಯನ್ನು ಹೊಂದಿರುವನು.

೪೨. ಭೀಷ್ಮನು ವಾರಣಾಸೀ ಕ್ಷೇತ್ರಕ್ಕೆ ಹೋಗಿ ಉತ್ತಮವಾದ ಪಂಚಾಯತನದಲ್ಲಿ ದೇವೇಶನನ್ನು ಆರಾಧಿಸುವವನಾಗಿ ಅಲ್ಲಿ ವಾಸಮಾಡಿದನು.

೪೩. ಸುಂದರೀ! ಆ ಸ್ಥಳದಲ್ಲಿ ಶಿವನು ಸ್ವಯಂವ್ಯಕ್ತನಾಗಿರುವನು. ಅದು ಗೋಪ್ರೇಕ್ಷಕ ಎಂಬುದಾಗಿ ಪ್ರಸಿದ್ಧಿಯನ್ನು ಹೊಂದಿ ಸರ್ವದೇವತೆಗಳಿಂದಲೂ ಸ್ತುತಿಸಲ್ಪಟ್ಟಿದೆ.

೪೪. ಮಾನವನು ಅಲ್ಲಿಗೆಹೋಗಿ ಗೋಪ್ರೇಕ್ಷೇಶ್ವರನನ್ನು ದರ್ಶನಮಾಡಿ ಪೂಜಿಸಿದರೆ ದುರ್ಗತಿಯನ್ನು ಹೊಂದುವುದಿಲ್ಲ. ದೋಷಗಳನ್ನು ಕಳೆದುಕೊಳ್ಳುವನು,

ವನಸ್ಥಾ ದಹ್ಯಮಾನಾಸ್ತು ಸುರಭ್ಯೋ ದಾವವಹ್ನಿನಾ ।
ಭ್ರಮಂತ್ಯೋಽಸ್ಮಿನ್ ಹ್ರದೇಭ್ಯೇತ್ಯ ಶಾಂತಾಸ್ತೋಯಂ ಪಪುಸ್ತದಾ ॥೪೫॥

ಕಪಿಲಾಹ್ರದ ಇತ್ಯೇವಂ ತತಃ ಪ್ರಭೃತಿ ಕಥ್ಯತೇ ।
ತತ್ರಾಪಿ ಸ ಶಿವಃ ಸಾಕ್ಷಾದ್ವೃಷಧ್ವಜ ಇತಿ ಸ್ಮೃತಃ ॥ ೪೬ ॥

ಸಾನ್ನಿಧ್ಯಂ ಕೃತವಾನ್ ದೇವೋ ದೃಶ್ಯಮಾನಃ ಸದಾ ಸ್ಥಿತಃ ।
ಕಪಿಲಾಹ್ರದತೀರ್ಥೇಽಸ್ಮಿನ್ ಸ್ನಾತ್ವಾ ಸಂಯತಮಾನಸಃ ॥ ೪೭ ॥

ವೃಷಧ್ವಜಂ ಶಿವಂ ದೃಷ್ಟ್ವಾ ಸರ್ವಯಜ್ಞಫಲಂ ಲಭೇತ್ ।
ಸ್ವರ್ಲೋಕಜಾಂ ಮೃತಸ್ತತ್ರ ಪೂಜಯಿತ್ವಾ ಶಿವೋ ಭವೇತ್ ॥ ೪೮ ॥

ಲಭತೇ ದೇಹಭೇದೇನ ಗಣತ್ವಂ ಚಾತಿದುರ್ಲಭಂ ।
ಅಸ್ಮಿನ್ನೇವ ಪ್ರದೇಶೇ ತು ಗಾವೋ ವೈ ಬ್ರಹ್ಮಣಾ ಸ್ವಯಂ ॥ ೪೯ ॥

---

೪೫. ಕಾಡಿನಲ್ಲಿದ್ದ ಗೋವುಗಳು ಕಾಡುಗಿಚ್ಚಿನಿಂದ ಸುಡಲ್ಪಟ್ಟು ಈಹ್ರದಕ್ಕೆ ಓಡಿಬಂದು ತಾಪವನ್ನು ಶಮನವಮಾಡಿಕೊಂಡು ಇಲ್ಲಿ ನೀರನ್ನು ಕುಡಿದುವು.

೪೬. ಆಗಿನಿಂದ ಈ ಹ್ರದವು ಕಪಿಲಾಹ್ರದವೆಂಬುದಾಗಿ ಪ್ರಸಿದ್ಧವಾಯಿತು. ಅಲ್ಲಿಯೂ ಸಹ ಶಿವನು ವೃಷಧ್ವಜನಾಮಕನಾಗಿ ಸನ್ನಿಹಿತನಾಗಿರುವನು.

೪೭-೪೮. ದೇವನು ಅಲ್ಲಿ ತನ್ನ ಸಾನ್ನಿಧ್ಯವನ್ನಿಟ್ಟು ಸರ್ವದಾ ದರ್ಶನ ಕೊಡುತ್ತಿರವನು. ಈ ಕಪಿಲಾಹ್ರದ ತೀರ್ಥದಲ್ಲಿ ಸ್ನಾನಮಾಡಿ ಮನಸ್ಸನ್ನು ಸ್ವಾಧೀನದಲ್ಲಿಟ್ಟುಕೊಂಡು ವೃಷಧ್ವಜೇಶ್ವರನನ್ನು ದರ್ಶನಮಾಡಿದರೆ ಸಕಲಯಜ್ಞಗಳ ಫಲವೂ ಬರುತ್ತದೆ. ಸ್ವರ್ಗಲೋಕದಲ್ಲಿ ಹುಟ್ಟಿದ ಧೇನುವನ್ನು ಪೂಜಿಸಿ ಅಲ್ಲಿ ಮೃತನಾದವನು ಈಶ್ವರನ ಅನುಗ್ರಹಕ್ಕೆ ಪಾತ್ರನಾಗುವನು.

೪೯-೫೦. ಮತ್ತು ಬೇರೆ ದೇಹವನ್ನು ಪಡೆದು ಅತ್ಯಂತ ದುರ್ಲಭವಾದ ಗಣತ್ವವನ್ನೂ ಹೊಂದುವನು ಈ ಪ್ರದೇಶದಲ್ಲಿಯೇ ಬ್ರಹ್ಮನು ಸಕಲಲೋಕಗಳ ಶಾಂತ್ಯರ್ಥವಾಗಿಯೂ, ಎಲ್ಲವನ್ನೂ ಪವಿತ್ರವನ್ನಾಗಿ ಮಾಡುವುದಕ್ಕಾಗಿಯೂ, ಗೋವುಗ

ಶಾಂತ್ಯರ್ಥಂ ಸರ್ವಲೋಕಾನಾಂ ಸರ್ವಾನ್ ಪಾವಯಿತುಂ ಧ್ರುವಂ ।
ಭದ್ರದೋಹಂ ಸರಸ್ತತ್ರ ಪುಣ್ಯಂ ಪಾಪಹರಂ ಶುಭಂ ॥ ೫೦ ॥

ತಸ್ಮಿನ್ ಸ್ಥಾನೇ ನರಃ ಸ್ನಾತಃ ಸಾಕ್ಷಾದ್ವಾಗೀಶ್ವರೋ ಭವೇತ್ ।
ಶಿವಸ್ತತ್ರ ಸಮಾನೀಯ ಸ್ಥಾಪಿತಃ ಪರಮೇಷ್ಠಿನಾ ॥ ೫೧ ॥

ಬ್ರಹ್ಮಣಶ್ಚಾಪಿ ಸಂಗೃಹ್ಯ ವಿಷ್ಣುನಾ ಸ್ಥಾಪಿತಃ ಪುನಃ ।
ಹಿರಣ್ಯಗರ್ಭ ಇತ್ಯೇವಂ ನಾಮ್ನಾ ತತ್ರ ಸ್ಥಿತಃ ಶಿವಃ ॥ ೫೨ ॥

ಪುನಶ್ಚಾಪಿ ತತೋ ಬ್ರಹ್ಮಾ ಸ್ವರ್ಲೋಕೇಶ್ವರಸಂಜ್ಞಕಂ ।
ಸ್ಥಾಪಯಾಮಾಸ ವೈ ಲಿಂಗಂ ಸ್ವರ್ಲೀಲಂ ಕಾರಣೇ ಕ್ವಚಿತ್ ॥ ೫೩ ॥

ದೃಷ್ಟ್ವಾ ವೈ ತಂ ತು ದೇವೇಶಂ ಶಿವಲೋಕೇ ಮಹೀಯತೇ ।
ಪ್ರಾಣಾನಿಹ ಪುನಸ್ತ್ಯಕ್ತ್ವಾ ನ ಪುನರ್ಜಾಯತೇ ಕ್ವಚಿತ್ ॥ ೫೪ ॥

---

ಳನ್ನು ಕರೆದನು. ಅದು ಪುಣ್ಯಕರವೂ ಪಾಪಪರಿಹಾರಕವೂ ಆದ ಭದ್ರದೋಹ ವೆಂಬ ಶುಭಸರೋವರವಾಯಿತು.

೫೧. ಆ ಸ್ಥಳದಲ್ಲಿ ಸ್ನಾನಮಾಡಿದ ಮನುಷ್ಯನು ಸಾಕ್ಷಾದ್ವಾಗೀಶ್ವರನ ಪರಮಾನುಗ್ರಹಕ್ಕೆ ಪಾತ್ರನಾಗುವನು. ಪರಮೇಷ್ಠಿಯು ಶಿವನನ್ನು ಕರೆತಂದು ಅಲ್ಲಿ ಸ್ಥಾಪಿಸಿರುವನು.

೫೨. ವಿಷ್ಣುವು ಬ್ರಹ್ಮನನ್ನು ಸಂಗ್ರಹಿಸಿ ಪುನಃ ಅಲ್ಲಿ ಸ್ಥಾಪಿಸಿರುವನು. ಅಲ್ಲಿ ಶಿವನು ಹಿರಣ್ಯಗರ್ಭ ಎಂಬ ನಾಮಧೇಯದಿಂದಲೇ ಸನ್ನಿಹಿತನಾಗಿರುವನು.

೫೩. ತರುವಾಯ ಪುನಃ ಬ್ರಹ್ಮನು ಯಾವುದೋ ಒಂದು ಕಾರಣದಿಂದ ಸ್ವರ್ಲೋಕೇಶ್ವರನಾಮಕವಾದ ಸ್ವರ್ಗಲೋಕದ ಲೀಲಾವಿಗ್ರಹವಾದ ಲಿಂಗ ವನ್ನು ಸ್ಥಾಪಿಸಿದನು.

೫೪. ದೇವೇಶ್ವರನನ್ನು ದರ್ಶನಮಾಡಿದವನು ಶಿವಲೋಕದಲ್ಲಿ ಸತ್ಕರಿ ಸಲ್ಪಡುವನು. ಇಲ್ಲಿ ಪ್ರಾಣಗಳನ್ನು ಬಿಟ್ಟರೆ ಅವನು ಪುನಃ ಜನ್ಮವನ್ನು ಹೊಂದುವುದಿಲ್ಲ.

ಅನಂತಾ ಸಾ ಗತಿಸ್ತಸ್ಯ ಯೋಗಿನಾಮೇವ ಯಾ ಸ್ಮೃತಾ ।
ಅಸ್ಮಿನ್ನೇವ ಮಹೀದೇಶೇ ದೈತ್ಯೋ ದೈವತಕಂಟಕಃ ॥ ೫೫ ॥

ವ್ಯಾಘ್ರರೂಪಂ ಸಮಾಸ್ಥಾಯ ನಿಹತೋ ದರ್ಪಿತೋ ಬಲೀ ।
ವ್ಯಾಘ್ರೇಶ್ವರ ಇತಿ ಖ್ಯಾತೋ ನಿತ್ಯಂ ತತ್ರ ಸಮಾಸ್ಥಿತಃ ॥ ೫೬ ॥

ನ ಪುನರ್ದುರ್ಗತಿಂ ಯಾತಿ ದೃಷ್ಟ್ವೈನಮಮರೇಶ್ವರಂ ।
ಹಿಮವತ್ಸ್ಥಾಪಿತಂ ಲಿಂಗಂ ಶೈಲೇಶ್ವರಮಿತಿ ಸ್ಥಿತಂ ॥ ೫೭ ॥

ದೃಷ್ಟ್ವೈತನ್ಮನುಜೋ ಭದ್ರೇ ನ ದುರ್ಗತಿಮವಾಪ್ನುಯಾತ್ ।
ಉತ್ಪಲೋ ವಿದಲಶ್ಚೈವ ಯೌ ದೈತ್ಯೌ ಬ್ರಹ್ಮಣೋ ವರಾತ್ ॥ ೫೮ ॥

ಸ್ತ್ರೀಲೌಲ್ಯಾದ್ದರ್ಪಿತೌ ದೃಷ್ಟ್ವಾ ಪಾರ್ವತ್ಯಾ ನಿಹತಾವುಭೌ ।
ಸಾರಂಗಂ ಕಂತುಕೇನಾತ್ರ ತಸ್ಯೇದಂ ಚಿಹ್ನಮಾಸ್ಥಿತಂ ॥ ೫೯ ॥

---

೫೫-೫೬. ಅವನಿಗೆ ಯೋಗಿಗಳಿಗೆ ವಿಹಿತವಾದ ಅನಂತಗತಿಯಾಗುವುದು. ಈ ಭೂಪ್ರದೇಶದಲ್ಲಿ ದರ್ಪಯುಕ್ತನು, ಬಲಿಷ್ಠನು, ಹುಲಿಯರೂಪವನ್ನು ಧರಿಸಿ ದೇವತೆಗಳಿಗೆ ಕಂಟಕನೂ ಆಗಿದ್ದ ದೈತ್ಯನು ಈಶ್ವರನಿಂದ ಸಂಹರಿಸಲ್ಪಟ್ಟನು. ಆಗಿನಿಂದಲೂ ವ್ಯಾಘ್ರೇಶ್ವರನೆಂದು ಪ್ರಸಿದ್ಧನಾಗಿ ಈಶ್ವರನು ಸರ್ವದಾ ಅಲ್ಲಿ ಸನ್ನಿಹಿತನಾಗಿರುವನು.

೫೭. ಈ ದೇವೇಶ್ವರನನ್ನು ದರ್ಶನಮಾಡಿದರೆ ಪುನಃ ದುರ್ಗತಿಯನ್ನು ಹೊಂದುವುದಿಲ್ಲ. ಹಿಮವತ್ಪರ್ವತದಲ್ಲಿ ಶೈಲೇಶ್ವರವೆಂಬ ಲಿಂಗವು ಸ್ಥಾಪಿಸಲ್ಪಟ್ಟಿದೆ.

೫೮-೫೯. ಶೋಭನೇ! ಈ ಲಿಂಗವನ್ನು ನೋಡಿದರೆ ಮನುಷ್ಯನು ದುರ್ಗತಿಯನ್ನು ಹೊಂದುವುದಿಲ್ಲ. ಉತ್ಪಲ ಮತ್ತು ವಿದಳ ಎಂಬ ಇಬ್ಬರು ದೈತ್ಯರು ಬ್ರಹ್ಮನ ವರದಿಂದ ಅಹಂಕೃತರಾಗಿ ಸ್ತ್ರೀಚಾಪಲ್ಯದಿಂದಿರುವುದನ್ನು ನೋಡಿ ಅವರಿಬ್ಬರನ್ನೂ ಪಾರ್ವತೀದೇವಿಯು ಸಂಹರಿಸಿದಳು. ಮನ್ಮಥನು ಅದರ ಗುರ್ತಿಗಾಗಿ ಇಲ್ಲಿ ಚಿತ್ರಬಣ್ಣವುಳ್ಳ ಲಿಂಗವನ್ನು ಸ್ಥಾಪಿಸಿರುವನು.

ದೃಷ್ಟ್ವೈತನ್ಮನುಜೋ ಲಿಂಗಂ ಜ್ಯೇಷ್ಠಸ್ಥಾನಂ ಸಮಾಶ್ರಿತಂ ।
ನ ಶೋಚತಿ ಪುನರ್ಭದ್ರೇ ಸಿದ್ಧ್ಯೇ ಜನ್ಮನಿಜನ್ಮನಿ ॥ ೬೦ ॥

ಸಮಂತಾತ್ತಸ್ಯ ದೇವೈಸ್ತು ಲಿಂಗಾನಿ ಸ್ಥಾಪಿತಾನಿ ಚ ।
ದೃಷ್ಟ್ವಾ ಚ ತಾನಿ ವೈ ಮರ್ತ್ಯೋ ದೇಹಭೇದೇ ಗಣೋ ಭವೇತ್ ॥ ೬೧ ॥

ನದೀ ವಾರಾಣಸೀ ಚೇಯಂ ಪುಣ್ಯಾ ಪಾಪಪ್ರಣಾಶಿನೀ ।
ಕ್ಷೇತ್ರಮೇತದಲಂಕೃತ್ಯ ಜಾಹ್ನವ್ಯಾ ಸಹ ಸಂಗತಾ ॥ ೬೨ ॥

ಸ್ಥಾಪಿತಂ ಸಂಗಮೇ ಚಾಸ್ಮಿನ್ ಬ್ರಹ್ಮಣಾ ಲಿಂಗಮುತ್ತಮಂ ।
ಸಂಗಮೇಶ್ವರಮಿತ್ಯೇವ ಖ್ಯಾತಂ ಜಗತಿ ದೃಶ್ಯತಾಂ ॥ ೬೩ ॥

ಸಂಗಮೇ ದೇವನದ್ಯೋಶ್ಚ ಯಃ ಸ್ನಾತ್ವಾ ಮನುಜಃ ಶುಭೇ ।
ಅರ್ಚಯೇತ್ಸಂಗಮೇಶಾನಂ ತಸ್ಯ ಜನ್ಮಭಯಂ ಕುತಃ ॥ ೬೪ ॥

---

೬೦. ಉತ್ತಮಸ್ಥಾನದಲ್ಲಿರುವ ಈ ಲಿಂಗವನ್ನು ನೋಡಿದರೆ ಮನುಷ್ಯನು ಪುನಃ ದುಃಖಕ್ಕೀಡಾಗುವುದಿಲ್ಲ. ಶೋಭನೇ! ಅವನು ಎಲ್ಲಾ ಜನ್ಮಗಳಲ್ಲಿಯೂ ಸಿದ್ಧಿಹೊಂದುವನು.

೬೧. ಆದರಸುತ್ತಲೂ ದೇವತೆಗಳು ಲಿಂಗಗಳನ್ನು ಸ್ಥಾಪಿಸಿರುವರು. ಅವುಗಳನ್ನು ನೋಡಿ ಮನುಷ್ಯನು ದೇಹವನ್ನು ಬಿಟ್ಟರೆ ಗಣದಲ್ಲಿ ಸೇರುವನು.

೬೨. ಪುಣ್ಯಕರವು, ಪಾಪನಾಶಕವೂ ಆದ ಈ ವಾರಾಣಸೀನದಿಯು ಈ ಕ್ಷೇತ್ರವನ್ನಲಂಕರಿಸಿ ಜಾಹ್ನವಿಯಿಂದ ಸಂಗಮವಾಗಿದೆ.

೬೩. ಈ ಸಂಗಮಸ್ಥಾನದಲ್ಲಿ ಬ್ರಹ್ಮನು ಉತ್ತಮ ಲಿಂಗವನ್ನು ಸ್ಥಾಪಿಸಿರುವನು. ಅದು ಸಂಗಮೇಶ್ವರ ಎಂಬುದಾಗಿ ಜಗತ್ತಿನಲ್ಲಿ ಪ್ರಖ್ಯಾತವಾಗಿದೆ. ಅದನ್ನು ದರ್ಶನಮಾಡಬೇಕು!

೬೪. ದೇವನದಿಗಳ ಸಂಗಮಸ್ಥಾನದಲ್ಲಿ ಸ್ನಾನಮಾಡಿ ಮನುಷ್ಯನು

ಸ್ಥಾಪಿತಂ ಲಿಂಗಮೇತಚ್ಚ ಶುಕ್ರೇಣ ಭೃಗುಸೂನುನಾ ।
ನಾಮ್ನಾ ಶುಕ್ರೇಶ್ವರಂ ಭದ್ರೇ ಸರ್ವಸಿದ್ಧಾಮರಾರ್ಚಿತಂ ॥ ೬೫ ॥

ದೃಷ್ಟ್ವೈತನ್ಮಾನವಃ ಸದ್ಯೋ ಮುಕ್ತಃ ಸ್ಯಾತ್ಸರ್ವಕಿಲ್ಬಿಷೈಃ ।
ಮೃತಶ್ಚ ನ ಪುನರ್ಜನ್ಮ ಸಂಸಾರೇ ಲಭತೇ ನರಃ ॥ ೬೬ ॥

ಜಂಬುಕೋತ್ರ ಹತೋ ದೈತ್ಯೋ ಮಹಾದೇವೇನ ಮೋಹಿನಿ ।
ತಲ್ಲಿಂಗಂ ತು ನರೋ ದೃಷ್ಟ್ವಾ ಸರ್ವಾನ್ ಕಾಮಾನವಾಪ್ನುಯಾತ್ ॥೬೭॥

ದೇವೈಃ ಶಕ್ರಪುರೋಗೈಶ್ಚ ಏತಾನಿ ಸ್ಥಾಪಿತಾನಿ ಹಿ ।
ಜಾನೀಹಿ ಪುಣ್ಯಲಿಂಗಾನಿ ಸರ್ವಕಾಮಪ್ರದಾನಿ ಚ ॥ ೬೮ ॥

---

ಸಂಗಮೇಶ್ವರನನ್ನು ಪೂಜಿಸಿದರೆ ಅವನಿಗೆ ಜನ್ಮಭಯವು ಹೇಗೆಬಂದೀತು? ಎಂದರೆ ಅಂತಹವನಿಗೆ ಪುನರ್ಜನ್ಮಬರದೆ ಮುಕ್ತಿಯಾಗುವುದೆಂದು ಭಾವ.

೬೫. ಅಲ್ಲಿ ಭೃಗುಪುತ್ರನಾದ ಶುಕ್ರನಿಂದ ಲಿಂಗವು ಸ್ಥಾಪಿತವಾಗಿದೆ. ಶೋಭನೇ! ಅದು ಶುಕ್ರೇಶ್ವರ ಎಂಬ ನಾಮಧೇಯದಿಂದ ಪ್ರಸಿದ್ಧವಾಗಿ ಸಿದ್ಧರು ಮತ್ತು ದೇವತೆಗಳು ಇವರೆಲ್ಲರಿಂದಲೂ ಪೂಜಿಸಲ್ಪಟ್ಟಿದೆ.

೬೬. ಈ ಲಿಂಗವನ್ನು ದರ್ಶನಮಾಡಿದ ಮನುಷ್ಯನು ತಕ್ಷಣದಲ್ಲಿಯೇ ಸಕಲಪಾಪಗಳನ್ನೂ ಕಳೆದುಕೊಳ್ಳುವನು. ಅವನು ಸತ್ತಮೇಲೆ ಈ ಸಂಸಾರದಲ್ಲಿ ಜನ್ಮವನ್ನು ಪಡೆಯುವುದಿಲ್ಲ.

೬೭. ಮೋಹಿನೀ! ಇಲ್ಲಿ ಮಹಾದೇವನು ಜಂಬುಕಾಸುರನನ್ನು ಕೊಂದಿರುವನು. ಆ ಲಿಂಗವನ್ನು ನೋಡಿದ ಮನುಷ್ಯನು ಸಕಲೇಷ್ಟಾರ್ಥಗಳನ್ನೂ ಹೊಂದುವನು.

೬೮. ಇಂದ್ರಾದಿ ದೇವತೆಗಳಿಂದ ಈ ಲಿಂಗಗಳು ಸ್ಥಾಪಿಸಲ್ಪಟ್ಟಿವೆ. ಇವೆಲ್ಲವೂ ಪುಣ್ಯಲಿಂಗಗಳು ಮತ್ತು ಸಕಲೇಷ್ಟಾರ್ಥಪ್ರದಗಳೆಂದು ತಿಳಿ!

ಏವಮೇತಾನಿ ಸರ್ವಾಣಿ ಶಿವಲಿಂಗಾನಿ ಮೋಹಿನಿ ।
ಕಥಿತಾನಿ ಮಯಾ ತುಭ್ಯಂ ಕ್ಷೇತ್ರೇಸ್ಮಿನ್ನವಿಮುಕ್ತಕೇ ॥ ೬೯ ॥

ಇತಿ ಶ್ರೀನಾರದೀಯಮಹಾಪುರಾಣೋತ್ತರಭಾಗೇ ಮೋಹಿನೀ
ವಸುಸಂವಾದೇ ಕಾಶೀಮಾಹಾತ್ಮ್ಯಂ ನಾಮ
ಪಂಚಾಶತ್ತಮೋಽಧ್ಯಾಯಃ



---

೬೯. ಮೋಹಿನೀ! ಈ ರೀತಿಯಾಗಿ ಈ ಅವಿಮುಕ್ತಕ್ಷೇತ್ರದಲ್ಲಿರುವ ಸಕಲ ಶಿವಲಿಂಗಗಳನ್ನೂ ನಿನಗೆ ಹೇಳಿರುವೆನು.

ಇಂತು ಶ್ರೀನಾರದೀಯಪುರಾಣೋತ್ತರಭಾಗದಲ್ಲಿನ ಮೋಹಿನೀ ವಸು
ಸಂವಾದದಲ್ಲಿ ಕಾಶೀಮಾಹಾತ್ಮ್ಯೆಯೆಂಬ ಐವತ್ತನೆಯ
ಅಧ್ಯಾಯವು ಮುಗಿದುದು.



# ಏಕಪಂಚಾಶತ್ತಮೋಽಧ್ಯಾಯಃ

---

ವಸುರುವಾಚ

ಅಥಾನ್ಯತ್ತೇ ಪ್ರವಕ್ಷ್ಯಾಮಿ ಗಂಗಾಮಾಹಾತ್ಮ್ಯಮುತ್ತಮಂ ।
ವಾರಾಣಸೀಸ್ಥಿತಂ ಭದ್ರೇ ಭುಕ್ತಿಮುಕ್ತಿಫಲಪ್ರದಂ ॥ ೧ ॥

ಅವಿಮುಕ್ತೇ ಕೃತಂ ಯತ್ತು ತದೇವಾಕ್ಷಯತಾಂ ವ್ರಜೇತ್ ।
ಅವಿಮುಕ್ತಗತಃ ಕಶ್ಚಿನ್ನರಕಂ ನೈತಿ ಕಿಲ್ಬಿಷೀ ॥ ೨ ॥

ಅವಿಮುಕ್ತಕೃತಂ ಯತ್ತು ಪಾಪಂ ವಜ್ರಂ ಭವೇಚ್ಛುಭೇ ।
ತ್ರೈಲೋಕ್ಯೇ ಯಾನಿ ತೀರ್ಥಾನಿ ಮೋಕ್ಷದಾನಿ ಚ ಕೃತ್ಸ್ನಶಃ ॥ ೩ ॥

ಸೇವಂತೇ ಸತತಂ ಗಂಗಾಂ ಕಾಶ್ಯಾಮುತ್ತರವಾಹಿನೀಂ ।
ದಶಾಶ್ವಮೇಧೇ ಯಃ ಸ್ನಾತ್ವಾ ದೃಷ್ಟ್ವಾ ವಿಶ್ವೇಶ್ವರಂ ಶಿವಂ ॥ ೪ ॥

---

## ಐವತ್ತೊಂದನೆಯ ಅಧ್ಯಾಯ.

೧. ವಸುವು ಹೇಳಿದನು :—ಶೋಭನೇ! ಭೋಗಮೋಕ್ಷಗಳನ್ನು ಕೊಡುವ, ಕಾಶೀಕ್ಷೇತ್ರದಲ್ಲಿರುವ, ಉತ್ತಮವಾದ ಇನ್ನೊಂದು ಗಂಗಾಮಹಿಮೆಯನ್ನು ನಿನಗೆ ಈಗ ಹೇಳುವೆನು.

೨. ಅವಿಮುಕ್ತನಾಮಕವಾದ ಕಾಶೀಕ್ಷೇತ್ರದಲ್ಲಿ ಮಾಡಿದಕರ್ಮವೆಲ್ಲವೂ ಅಕ್ಷಯವಾಗುವುದು. ಪಾಪಿಯಾದರೂ ಅವಿಮುಕ್ತಕ್ಷೇತ್ರವಾಸಿಯಾದ ಯಾವ ಮನುಷ್ಯನೂ ನರಕಕ್ಕೆ ಹೋಗುವುದಿಲ್ಲ.

೩-೪. ಶೋಭನೇ ! ಅವಿಮುಕ್ತಕ್ಷೇತ್ರದಲ್ಲಿ ಮಾಡಿದಪಾಪವು ವಜ್ರಾಯುಧದಂತಾಗುವುದು. ಮೂರುಲೋಕಗಳಲ್ಲಿಯೂ ಇರುವ ಮೋಕ್ಷದಾಯಕವಾದ ಎಲ್ಲಾ ತೀರ್ಥಗಳೂ ಕಾಶಿಯಲ್ಲಿರುವ ಉತ್ತರದಿಕ್ಕಿಗೆ ಹರಿಯುತ್ತಿರುವ ಗಂಗೆಯನ್ನು ಯಾವಾಗಲೂ ಸೇವಿಸುತ್ತವೆ.

**ಸದ್ಯೋ ನಿಷ್ಪಾತಕೋ ಭೂತ್ವಾ ಮುಚ್ಯತೇ ಭವಬಂಧನಾತ್ |**
**ಗಂಗಾ ಹಿ ಸರ್ವತಃ ಪುಣ್ಯಾ ಬ್ರಹ್ಮಹತ್ಯಾಪಹಾರಿಣೀ || ೫ ||**

**ವಾರಾಣಸ್ಯಾಂ ವಿಶೇಷೇಣ ಯತ್ರ ಚೋತ್ತರವಾಹಿನೀ |**
**ವರುಣಾಸ್ಯಾಸ್ತಥಾಸ್ಯಾಶ್ಚ ಜಾಹ್ನವ್ಯಾಃ ಸಂಗಮೇ ನರಃ || ೬ ||**

**ಸ್ನಾನಮಾತ್ರೇಣ ಸರ್ವೇಭ್ಯಃ ಪಾತಕೇಭ್ಯಃ ಪ್ರಮುಚ್ಯತೇ |**
**ಕಾಶ್ಯಾಮುತ್ತರವಾಹಿನ್ಯಾಂ ಗಂಗಾಯಾಂ ಕಾರ್ತಿಕೇ ತಥಾ || ೭ ||**

**ಸ್ನಾತ್ವಾ ಮಾಘೇ ಚ ಮುಚ್ಯಂತೇ ಮಹಾಪಾಪಾತಿಪಾತಕೈಃ |**
**ಸರ್ವಲೋಕೇಷು ತೀರ್ಥಾನಿ ಯಾನಿ ಖ್ಯಾತಾನಿ ತಾನಿ ಚ || ೮ ||**

**ಸರ್ವಾಣ್ಯೇತಾನಿ ಸುಭಗೇ ಕಾಶ್ಯಾಮಾಯಾಂತಿ ಜಾಹ್ನವಿ |**
**ನಿತ್ಯಂ ಪರ್ವಸು ಸರ್ವೇಷು ಪುಣ್ಯೈಶ್ಚಾಯತನೈಃ ಸಹ || ೯ ||**

---

೪-೫. ದಶಾಶ್ವಮೇಧ ತೀರ್ಥದಲ್ಲಿ ಸ್ನಾನಮಾಡಿ ವಿಶ್ವೇಶ್ವರಸ್ವಾಮಿಯ ದರ್ಶನಮಾಡಿದರೆ ಕೂಡಲೇ ಅವನು ಪಾಪಗಳನ್ನೆಲ್ಲಾ ಪರಿಹರಿಸಿಕೊಂಡು ಸಂಸಾರಬಂಧನದಿಂದ ಬಿಡುಗಡೆಯನ್ನು ಹೊಂದುವನು.

೫-೬. ಗಂಗೆಯು ಎಲ್ಲಾ ಕಡೆಗಳಲ್ಲಿಯೂ ಪುಣ್ಯಕರವಾದುದು. ವಾರಾಣಸೀ ಕ್ಷೇತ್ರದಲ್ಲಿ ಉತ್ತರದಿಕ್ಕಿಗೆ ಹರಿಯುತ್ತಿರುವ ಗಂಗೆಯಾದರೋ ವಿಶೇಷವಾಗಿ ಬ್ರಹ್ಮಹತ್ಯೆಯನ್ನು ಪರಿಹರಿಸುವುದು.

೬-೭. ಗಂಗಾ ವಾರಾಣಸೀನದಿಗಳ ಸಂಗಮದಲ್ಲಿ ಸ್ನಾನಮಾಡುವ ಮಾತ್ರದಿಂದ ಮನುಷ್ಯನು ಸಕಲಪಾಪಗಳಿಂದಲೂ ಮುಕ್ತನಾಗುವನು.

೭-೮. ಕಾಶಿಯಲ್ಲಿರುವ ಉತ್ತರವಾಹಿನಿಯಾದ ಗಂಗೆಯಲ್ಲಿ ಕಾರ್ತಿಕ ಮಾಘಮಾಸಗಳಲ್ಲಿ ಸ್ನಾನಮಾಡುವುದರಿಂದ ಮಹಾಪಾಪ ಮತ್ತು ಅತಿಪಾತಕಗಳಿಂದ ಮುಕ್ತನಾಗುವನು.

೮-೯. ಸಕಲಲೋಕಗಳಲ್ಲಿಯೂ ಪ್ರಸಿದ್ಧವಾಗಿರುವ ತೀರ್ಥಗಳೆಲ್ಲವೂ ಕಾಶಿಯಲ್ಲಿರುವ ಗಂಗೆಯನ್ನು ಕುರಿತು ಬರುತ್ತವೆ.

ಉತ್ತರಾಭಿಮುಖೀಂ ಗಂಗಾಂ ಕಾಶ್ಯಾಮಾಯಾಂತಿ ಜಾನ್ವಹಂ |
ಮಹಾಪಾತಕದೋಷಾದಿದುಷ್ಟಾನಾಂ ಸ್ಪರ್ಶನೋದ್ಭವಂ || ೧೦ ||

ವ್ಯಪೋಹಿತುಂ ಸ್ವಪಾಪಂ ಚ ಜಂತುಪಾಪವಿಮುಕ್ತಯೇ |
ಜನ್ಮಾಂತರಶತೇನಾಪಿ ಸತ್ಕರ್ಮನಿರತಸ್ಯ ಚ || ೧೧ ||

ಅನ್ಯತ್ರ ಸುಧಿಯೋ ಭದ್ರೇ ಮೋಕ್ಷೋ ಲಭ್ಯೇತ ವಾ ನ ವಾ |
ಏಕೇನ ಜನ್ಮನಾ ತ್ವತ್ರ ಗಂಗಾಯಾಂ ಮರಣೇನ ಚ || ೧೨ ||

ಮೋಕ್ಷಸ್ತು ಲಭ್ಯತೇ ಕಾಶ್ಯಾಂ ನರೇಣಾವಲಿತಾತ್ಮನಾ |
ಖ್ಯಾತೋ ಧರ್ಮನದೋ ನಾಮ ಹ್ರದಸ್ತತ್ರೈವ ಸುಂದರಿ || ೧೩ ||

ಧರ್ಮ ಏವ ಸ್ವರೂಪೇಣ ಮಹಾಪಾತಕನಾಶನಃ |
ಧೂಲೀ ಚ ಧೂತಪಾಪಾ ಸಾ ಸರ್ವತೀರ್ಥಮಯೀ ಶುಭಾ || ೧೪ ||

---

೯-೧೦. ಶೋಭನೇ! ಸಕಲ ಪರ್ವಕಾಲಗಳಲ್ಲಿಯೂ ಪುಣ್ಯಕರವಾದ ಆಯತನಗಳಸಹಿತವಾಗಿ ತೀರ್ಥಾಭಿಮಾನಿ ದೇವತೆಗಳೆಲ್ಲರೂ ಮಹಾಪಾತಕಗಳನ್ನು ಮಾಡಿ ದೂಷಿತರಾದವರ ಸ್ಪರ್ಶದಿಂದ ಉಂಟಾದ ಪಾಪ ಮತ್ತು ಪ್ರಾಣಿಗಳ ಪಾಪಗಳನ್ನು ಪರಿಹರಿಸುವುದಕ್ಕಾಗಿ ಕಾಶಿಯಲ್ಲಿ ಉತ್ತರದಿಕ್ಕಿಗೆ ಹರಿಯುತ್ತಿರುವ ಗಂಗೆಯಲ್ಲಿ ಪ್ರತಿದಿನವೂ ಸನ್ನಿಹಿತರಾಗಿರುವರು.

೧೧-೧೨. ಶೋಭನೇ! ನೂರಾರು ಜನ್ಮಗಳಲ್ಲಿ ಸತ್ಕರ್ಮನಿರತನಾದವನಿಗೂ ಸಹ ಬೇರೆಸ್ಥಳಗಳಲ್ಲಿ ಮೋಕ್ಷವು ಲಭಿಸುವುದೋ ಇಲ್ಲವೋ ಹೇಳಲಾಗುವುದಿಲ್ಲ. ಕಾಶಿಯಲ್ಲಿ ಗಂಗಾತೀರದಲ್ಲಿ ಮರಣಹೊಂದುವುದರಿಂದ ಒಂದೇಜನ್ಮದಲ್ಲಿ ಮನುಷ್ಯನು ಮೋಕ್ಷವನ್ನು ಖಂಡಿತವಾಗಿಯೂ ಪಡೆಯುವನು.

೧೩-೧೪. ಸುಂದರೀ! ಅಲ್ಲಿಯೇ ಧರ್ಮನದವೆಂಬ ಮಡುವು ವಿಖ್ಯಾತವಾಗಿರುವುದು. ಅದು ಧರ್ಮದಸ್ವರೂಪವಾಗಿ ಮಹಾಪಾತಕಗಳನ್ನು ನಾಶಪಡಿಸುವುದು.

ಹರೇನ್ಮಹಾಪಾಪಸಂಘಾನ್ಕೂಲಜಾನಿವ ಯೊಸ್ಪಪೂನ್ ।
ಕಿರಣಾ ಧೂತಪಾಪಾ ಚ ಪುಣ್ಯತೋಯಾ ಸರಸ್ವತೀ ॥ ೧೫ ॥

ಗಂಗಾ ಚ ಯಮುನಾ ಚೈವ ಪಂಚನದ್ಯಃ ಪ್ರಕೀರ್ತಿತಾಃ ।
ಅತಃ ಪಂಚನದಂ ನಾಮ ತೀರ್ಥಂ ತ್ರೈಲೋಕ್ಯವಿಶ್ರುತಂ ॥ ೧೬ ॥

ತತ್ರಾಪ್ಲುತೋ ನ ಗೃಹ್ಣೀಯಾದ್ದೇಹಿತಾಂ ಪಾಂಚಭೌತಿಕೀಂ ।
ಅಸ್ಮಿನ್ ಪಂಚನದೀನಾಂ ತು ಸಂಗಮೇಽಘೌಘಭೇದನೇ ॥ ೧೭ ॥

ಸ್ನಾನಮಾತ್ರಾನ್ನರೋ ಯಾತಿ ಭಿತ್ವಾ ಬ್ರಹ್ಮಾಂಡಮಂಡಪಂ ।
ಪ್ರಯಾಗೇ ಮಾಘಮಾಸೇ ತು ಸಮ್ಯಕ್ಸ್ನಾನಸ್ಯ ಯತ್ಫಲಂ ॥ ೧೮ ॥

ತತ್ಫಲಂ ಸ್ಯಾದ್ದಿನೈಕೇನ ಕಾಶ್ಯಾಂ ಪಂಚನದೇ ಧ್ರುವಂ ।
ಸ್ನಾತ್ವಾ ಪಂಚನದೇ ತೀರ್ಥೇ ಕೃತ್ವಾ ಚ ಪಿತೃತರ್ಪಣಂ ॥ ೧೯ ॥

---

೧೪-೧೫. ಮಂಗಳಕರವೂ ಸಕಲ ತೀರ್ಥಮಯವೂ ಆದ ಧೂತಪಾಪ ಎಂಬುದರ ಧೂಳಿಯು, ಪ್ರವಾಹವು ತೀರದಲ್ಲಿರುವ ಬಹು ವೃಕ್ಷಗಳನ್ನು ನಾಶಪಡಿಸುವಂತೆ ಮಹಾಪಾತಕ ರಾಶಿಗಳನ್ನು ನಿರ್ಮೂಲಮಾಡುವುದು

೧೫-೧೬. ಕಿರಣಾ, ಧೂತಪಾಪ, ಪುಣ್ಯಕರಜಲವುಳ್ಳ ಸರಸ್ವತಿ, ಗಂಗೆ ಮತ್ತು ಯಮುನಾ ಎಂಬಿವು ಪಂಚನದಿಗಳೆಂದು ಉಕ್ತವಾಗಿವೆ. ಆದ ಕಾರಣ ಪಂಚನದವೆಂಬ ತೀರ್ಥವು ಮೂರುಲೋಕಗಳಲ್ಲಿಯೂ ವಿಖ್ಯಾತವಾಗಿದೆ.

೧೭-೧೮. ಆ ಪಂಚನದೀ ತೀರ್ಥದಲ್ಲಿ ಅವಗಾಹನ ಸ್ನಾನಮಾಡಿದವನು ಪುನಃ ಪಾಂಚಭೌತಿಕದೇಹವನ್ನು ಪಡೆಯುವುದಿಲ್ಲ. ಪಾಪರಾಶಿಗಳನ್ನು ಪರಿಹರಿಸುವಂತಹ ಪಂಚನದೀ ಸಂಗಮದಲ್ಲಿ ಸ್ನಾನಮಾಡುವ ಮಾತ್ರದಿಂದ ಮನುಷ್ಯನು ಬ್ರಹ್ಮಾಂಡವನ್ನು ಭೇದಿಸಿಕೊಂಡು ಮುಕ್ತಿಯನ್ನು ಪಡೆಯುವನು.

೧೮-೧೯. ಕಾಶಿಯಲ್ಲಿನ ಪಂಚನದೀ ತೀರ್ಥದಲ್ಲಿ ಒಂದುದಿನ ಸ್ನಾನ ಮಾಡುವುದರಿಂದ ಪ್ರಯಾಗಕ್ಷೇತ್ರದಲ್ಲಿ ಮಾಘಮಾಸದಲ್ಲಿ ಸ್ನಾನಮಾಡಿದರೆ ಬರುವ ಫಲವು ಖಂಡಿತವಾಗಿಯೂ ಬರುವುದು

ವಿಷ್ಣುಂ ಮಾಧವಮಭ್ಯರ್ಚ್ಯ ನ ಭೂಯೋ ಜನ್ಮಭಾಗ್ಭವೇತ್ ।
ಯಾವತ್ಸಂಖ್ಯಾಸ್ತಿಲಾ ದತ್ತಾಃ ಪಿತೃಭ್ಯೋ ಜಲತರ್ಪಣೇ ॥ ೨೦ ॥

ಪುಣ್ಯೇ ಪಂಚನದೇ ತೀರ್ಥೇ ತೃಪ್ತಿಃ ಸ್ಯಾತ್ತಾವದಾಬ್ದಿಕೀ ।
ಶ್ರದ್ಧಯಾ ಯೈಃ ಕೃತಂ ಶ್ರಾದ್ಧಂ ತೀರ್ಥೇ ಪಂಚನದೇ ಶುಭೇ ॥ ೨೧ ॥

ತೇಷಾಂ ಪಿತಾಮಹಾ ಮುಕ್ತಾ ನಾನಾಯೋನಿಗತಾ ಅಪಿ ।
ಯಮಲೋಕೇ ಪಿತೃಗಣೈರ್ಗಾಥೇಯಂ ಪರಿಗೀಯತೇ ॥ ೨೨ ॥

ಮಹಿಮಾನಂ ಪಾಂಚನದಂ ದೃಷ್ಟ್ವಾ ಶ್ರಾದ್ಧಂ ವಿಧಾನತಃ ।
ಅಸ್ಮಾಕಮಪಿ ವಂಶ್ಯೋತ್ರ ಕಶ್ಚಿಚ್ಛ್ರಾದ್ಧಂ ಕರಿಷ್ಯತಿ ॥ ೨೩ ॥

ಕಾಶ್ಯಾಂ ಪಂಚನದಂ ಪ್ರಾಪ್ಯ ಯೇನ ಮುಚ್ಯಾಮಹೇ ವಯಂ ।
ತತ್ರ ಪಂಚನದೇ ತೀರ್ಥೇ ಯತ್ಕಿಂಚಿದ್ದೀಯತೇ ವಸು ॥ ೨೪ ॥

---

೧೯-೨೦. ಪಂಚನದೀ ತೀರ್ಥದಲ್ಲಿ ಸ್ನಾನಮಾಡಿ ಪಿತೃಗಳಿಗೆ ತರ್ಪಣ ಕೊಟ್ಟು ಮಾಧವರೂಪಿಯಾದ ವಿಷ್ಣುವನ್ನು ಪೂಜಿಸಿದರೆ ಪುನರ್ಜನ್ಮವನ್ನು ಹೊಂದುವುದಿಲ್ಲ.

೨೦-೨೧. ಪಿತೃಗಳಿಗೆ ತರ್ಪಣಕೊಡುವಾಗ ಪುಣ್ಯಕರವಾದ ಪಂಚನದೀ ತೀರ್ಥದಲ್ಲಿ ಎಷ್ಟು ಎಳ್ಳುಕಾಳುಗಳನ್ನು ಬಿಡುವರೋ, ಅಷ್ಟುವರ್ಷಗಳ ಕಾಲ ಪಿತೃಗಳಿಗೆ ತೃಪ್ತಿಯಾಗುವುದು.

೨೧-೨೨. ಪುಣ್ಯಕರವಾದ ಪಂಚನದೀ ತೀರ್ಥದಲ್ಲಿ ಶ್ರದ್ಧೆಯಿಂದ ಶ್ರಾದ್ಧಮಾಡಿದವರ ಪಿತಾಮಹಾದಿಗಳು ಮುಕ್ತರಾಗಿದ್ದರೂ ಅಥವಾ ನಾನಾಜನ್ಮಗಳನ್ನೆತ್ತಿದ್ದರೂ ಸಹ ಯಮಲೋಕದಲ್ಲಿ ಪಿತೃಗಣಸಹಿತರಾಗಿ ಈ ಗಾಥೆಯನ್ನು ಹೇಳುವರು.

೨೩-೨೪. ಪಂಚನದೀ ತೀರ್ಥದಲ್ಲಿ ವಿಧಾನೋಕ್ತಪ್ರಕಾರ ಮಾಡಿದ ಶ್ರಾದ್ಧಮಹಿಮೆಯನ್ನು ನೋಡಿ ನಮ್ಮಕುಲದಲ್ಲಿ ಹುಟ್ಟಿದ ಯಾವನಾವರೊಬ್ಬನು ಕಾಶಿಯಲ್ಲಿ ಪಂಚನದೀ ತೀರ್ಥಕ್ಕೆಹೋಗಿ ನಮಗೆ ಮುಕ್ತಿದಾಯಕವಾದ ಶ್ರಾದ್ಧವನ್ನು ಮಾಡುವನು.

ಕಲ್ಪಕ್ಷಯೇಽಪಿ ನಭವೇತ್ತಸ್ಯ ಪುಣ್ಯಸ್ಯ ಸಂಕ್ಷಯಃ ।
ವಂಧ್ಯಾಪಿ ವರ್ಷಪರ್ಯಂತಂ ಸ್ನಾತ್ವಾ ಪಂಚನದೇ ಹ್ರದೇ ॥ ೨೫ ॥

ಸಮಭ್ಯರ್ಚ್ಯ ಮಂಗಳಾಂ ಗೌರೀಂ ಪುತ್ರಂ ಜನಯತಿ ಧ್ರುವಂ ।
ಜಲೈಃ ಪಾಂಚನದ್ಯೈಃ ಪುಣ್ಯೈರ್ವಾಸಸಾ ಪರಿಶೋಧಿತೈಃ ॥ ೨೬ ॥

ಮಹಾಫಲಮವಾಪ್ನೋತಿ ಸ್ನಾಪಯಿತ್ವೇಹ ಪೂಜ್ಯ ತಾಂ ।
ಪಂಚಾಮೃತಾನಾಂ ಕಲಶೈರಷ್ಟೋತ್ತರಶತೋನ್ಮಿತೈಃ ॥ ೨೭ ॥

ತುಲಿತೋಧಿಕತಾಂ ಪ್ರಾಪ್ತೋ ಬಿಂದುಪಾಂಚನದಸ್ತು ಸಃ ।
ಪಂಚಕೂರ್ಚೇನ ಪೀತೇನ ಯಾತ್ರ ಶುದ್ಧಿರುದಾಹೃತಾ ॥ ೨೮ ॥

ಸಾ ಶುದ್ಧಿಃ ಶ್ರದ್ಧಯಾ ಪ್ರಾಪ್ಯ ವಿಶ್ವಂ ಪಂಚನದಾಂಭಸಂ ।
ಭವೇದಥ ಹ್ರದಸ್ನಾನಾದ್ರಾಜಸೂಯಾಶ್ವಮೇಧಯೋಃ ॥ ೨೯ ॥

---

೨೪-೨೫. ಆ ಪಂಚನದೀ ತೀರ್ಥದಲ್ಲಿ ಸ್ವಲ್ಪದ್ರವ್ಯವನ್ನು ದಾನಮಾಡಿದವನಿಗೆ ಕಲ್ಪಕ್ಷಯವಾದರೂ ಪುಣ್ಯಕ್ಷಯವಾಗುವುದಿಲ್ಲ.

೨೫-೨೬. ಗೊಡ್ಡಿಯೂ ಸಹ ಪಂಚನದೀ ಹ್ರದದಲ್ಲಿ ಒಂದು ವರ್ಷಕಾಲ ಸ್ನಾನಮಾಡಿ ಮಂಗಳಗೌರಿಯನ್ನು ಪೂಜಿಸಿದರೆ ಖಂಡಿತವಾಗಿಯೂ ಅವಳಿಗೆ ಮಗನು ಹುಟ್ಟುವನು.

೨೬-೨೭. ವಸ್ತ್ರದಿಂದ ಶೋಧಿಸಿದ ಪುಣ್ಯಕರವಾದ ಪಂಚನದೋದಕದಿಂದ ಅಭಿಷೇಕಮಾಡಿ ಆ ಗೌರಿಯನ್ನು ಪೂಜಿಸಿದರೆ ಮಹಾಫಲವು ಲಭಿಸುವುದು

೨೭-೨೮. ಪಂಚನದ ತೀರ್ಥದ ಬಿಂದುಮಾತ್ರೋದಕವು ನೂರೆಂಟು ಪಂಚಾಮೃತ ಕಲಶಗಳಿಗಿಂತಲೂ ಅಧಿಕ ಫಲಪ್ರದವು.

೨೮-೨೯. ಪಂಚಕೂರ್ಚೋದಕ ಪಾನಮಾಡುವುದರಿಂದಾಗುವ ಶುದ್ಧಿಯು ಶ್ರದ್ಧೆಯಿಂದ ಪಂಚನದ ಜಲವನ್ನು ಸ್ಪರ್ಶಮಾಡಿದರೆ ಲಭಿಸುವುದು.

೨೯-೩೦. ಹ್ರದದಲ್ಲಿ ಸ್ನಾನಮಾಡುವುದರಿಂದ ರಾಜಸೂಯಾಶ್ವಮೇಧಯಾಗಗಳ ಫಲಕ್ಕಿಂತಲೂ ನೂರರಷ್ಟು ಹೆಚ್ಚುಫಲವು ಬರುವುದು. ಪಂಚನದ

ಯತ್ಫಲಂ ತಚ್ಛತಗುಣಂ ಸ್ಮೃತಂ ಪಂಚನದಾಂಬುನಾ ।
ರಾಜಸೂಯಾಶ್ವಮೇಧೌ ಚ ಭವೇತಾಂ ಸ್ವರ್ಗಸಾಧನೌ ॥ ೩೦ ॥

ಆಬ್ರಹ್ಮಪಟ್ಟಿಕಾದ್ವಂದ್ವಾನ್ಮುಕ್ತಿಃ ಪಂಚನದಾಂಬುಭಿಃ ।
ಸ್ವರ್ಗನದ್ಯಭಿಷೇಕೋಽಪಿ ನ ತಥಾ ಸಂಮತಃ ಸತಾಂ ॥ ೩೧ ॥

ಅಭಿಷೇಕಃ ಪಾಂಚನದೋ ಯಥಾನನ್ಯೋ ವರಪ್ರದಃ ।
ಶತಂ ಸಮಾಸ್ತಪಸ್ತಪ್ತ್ವಾ ಕೃತೇ ಯತ್ಪ್ರಾಪ್ಯತೇ ಫಲಂ ॥ ೩೨ ॥

ತತ್ಕಾರ್ತಿಕೇ ಪಂಚನದೇ ಸಕೃತ್ಸ್ನಾನೇನ ಲಭ್ಯತೇ ।
ಇಷ್ಟಾಪೂರ್ತೇಷು ಧರ್ಮೇಷು ಯಾವಜ್ಜನ್ಮಕೃತೇಷು ಯತ್ ॥ ೩೩ ॥

ಅನ್ಯತ್ರ ಸ್ಯಾತ್ಫಲಂ ತಸ್ಯಾಧಿಕಂ ಪಂಚನದಾಂಬುಭಿಃ ।
ನ ಧೂತಪಾಪಸದೃಶಂ ತೀರ್ಥಂ ಕ್ವಾಪಿ ಮಹೀತಲೇ ॥ ೩೪ ॥

---

ತೀರ್ಥಜಲದಿಂದ ಮಾಡುವ ರಾಜಸೂಯ ಮತ್ತು ಅಶ್ವಮೇಧಯಾಗಗಳು ಸ್ವರ್ಗ ಸಾಧಕಗಳಾಗುವುವು.

೩೧. ಪಂಚನದ ತೀರ್ಥದ ನೀರಿನಿಂದ ಮಾಡುವ ಅಭಿಷೇಕವು ಬ್ರಹ್ಮ ಪಟ್ಟಿಕಾದ್ವಂದ್ವಮೋಚಕವಾಗುವುದು. ದೇವಗಂಗೆಯ ಜಲದ ಅಭಿಷೇಕವೂ ಸಹ ಅಷ್ಟು ಫಲಪ್ರದವಲ್ಲವೆಂದು ಸಾಧುಸಮ್ಮತವು.

೩೨-೩೩. ಪಂಚನದೋದಕದ ಅಭಿಷೇಕವು ಬೇರಾವುದರಿಂದಲೂ ಪಡೆ ಯಲಶಕ್ಯವಾದ ವರಪ್ರದವಾಗಿದೆ. ನೂರುವರ್ಷಗಳು ತಪಸ್ಸುಮಾಡಿದರೆ ಬರುವ ಫಲವು ಪಂಚನದ ತೀರ್ಥದಲ್ಲಿ ಕಾರ್ತಿಕಮಾಸದಲ್ಲಿ ಒಂದಾವರ್ತಿ ಸ್ನಾನ ಮಾಡುವುದರಿಂದ ಬರುವುದು.

೩೩-೩೪. ಇತರ ಸ್ಥಳಗಳಲ್ಲಿ ಹುಟ್ಟಿದಾಗಿನಿಂದ ಮಾಡಿದ ಯಾಗ, ತಟಾಕಾದಿ ನಿರ್ಮಾಣಗಳಿಂದ ಬರುವಫಲಕ್ಕಿಂತ ಹೆಚ್ಚುಫಲವು ಪಂಚನದ ತೀರ್ಥ ದಲ್ಲಿ ಮಾಡುವ ಯಾಗಾದಿಗಳಿಂದ ಲಭಿಸುವುದು.

ಯದೇಕಸ್ನಾನತೋ ನಶ್ಯೇದಘಂ ಜನ್ಮತ್ರಯಾರ್ಜಿತಂ ।
ಕೃತೇ ಧರ್ಮನದಂ ನಾಮ ತ್ರೇತಾಯಾಂ ಧೂತಪಾತಕಂ ॥ ೩೫ ॥

ದ್ವಾಪರೇ ಬಿಂದುತೀರ್ಥಂ ಚ ಕಲೌ ಪಂಚನದಂ ಸ್ಮೃತಂ ।
ಬಿಂದುತೀರ್ಥೇ ನರೋ ದತ್ವಾ ಕಾಂಚನಂ ಕೃಷ್ಣಲೋನ್ಮಿತಂ ॥ ೩೬ ॥

ನ ದರಿದ್ರೋ ಭವೇತ್ಕ್ವಾಪಿ ನ ಸುಖೇನ ವಿಯುಜ್ಯತೇ ।
ಗೋಭೂತಿಲಹಿರಣ್ಯಾಶ್ವವಾಸೋನ್ನಸ್ಥಾನಭೂಷಣಂ ॥ ೩೭ ॥

ಯತ್ಕಿಂಚಿದ್ಬಿಂದುತೀರ್ಥೇ ಚ ದತ್ವಾಕ್ಷಯಮವಾಪ್ನುಯಾತ್ ।
ಏಕಾಮಪ್ಯಾಹುತಿಂ ಕೃತ್ವಾ ಸಮಿದ್ಧೇಗ್ನೌ ವಿಧಾನತಃ ॥ ೩೮ ॥

---

೩೪-೩೫. ಭೂಲೋಕದಲ್ಲಿ ಧೂತಪಾಪಕ್ಕೆ ಸಮಾನವಾದ ತೀರ್ಥವು ಎಲ್ಲಿಯೂ ಇಲ್ಲ. ಅದರಲ್ಲಿ ಒಂದಾವರ್ತಿ ಸ್ನಾನಮಾಡುವುದರಿಂದ ಮೂರು ಜನ್ಮಗಳಲ್ಲಿ ಸಂಪಾದಿಸಿದ ಪಾಪವೆಲ್ಲವೂ ನಾಶವಾಗುವುದು.

೩೫-೩೬. ಕೃತಯುಗದಲ್ಲಿ ಧರ್ಮನದ ತೀರ್ಥವೂ, ತ್ರೇತಾಯುಗದಲ್ಲಿ ಧೂತಪಾಪ ತೀರ್ಥವೂ, ದ್ವಾಪರದಲ್ಲಿ ಬಿಂದು ತೀರ್ಥವೂ, ಕಲಿಯುಗದಲ್ಲಿ ಪಂಚನದ ತೀರ್ಥವೂ ಪ್ರಶಸ್ತಗಳು.

೩೬-೩೭. ಬಿಂದು ತೀರ್ಥದಲ್ಲಿ ಕೃಷ್ಣಲಪರಿಮಿತವಾದ ಸುವರ್ಣವನ್ನು ದಾನಮಾಡಿದರೆ ಮನುಷ್ಯನು ಯಾವಾಗಲೂ ಬಡವನಾಗುವುದಿಲ್ಲ. ಸುಖಿಯಾಗಿಯೇ ಇರುವನು.

೩೭-೩೮. ಬಿಂದು ತೀರ್ಥದಲ್ಲಿ ಗೋವು, ಭೂಮಿ, ಎಳ್ಳು, ಬಂಗಾರ, ಕುದುರೆ, ವಸ್ತ್ರ, ಅನ್ನ, ಸ್ಥಾನ, ಭೂಷಣ ಇವುಗಳನ್ನು ಸ್ವಲ್ಪವಾಗಿ ದಾನಮಾಡಿದವನೂ ಸಹ ಅಕ್ಷಯಫಲವನ್ನು ಹೊಂದುವನು.

೩೮-೩೯. ಪುಣ್ಯಕರವಾದ ಧರ್ಮನದ ತೀರ್ಥಸನ್ನಿಧಿಯಲ್ಲಿ ವಿಧಾನೋಕ್ತ ಪ್ರಕಾರವಾಗಿ ಚೆನ್ನಾಗಿ ಪ್ರಜ್ವಲಿಸುತ್ತಿರುವ ಅಗ್ನಿಯಲ್ಲಿ ಒಂದು ಹೋಮಮಾಡಿದರೂ ಕೋಟಿಹೋಮಗಳ ಫಲವು ಬರುವುದು.

ಪುಣ್ಯೇ ಧರ್ಮನದೀತೀರ್ಥೇ ಕೋಟಿಹೋಮಫಲಂ ಲಭೇತ್ ।
ನ ಪಂಚನದತೀರ್ಥಸ್ಯ ಮಹಿಮಾನಮನಂತಕಂ ॥ ೩೯ ॥

ಕೋಽಪಿ ವರ್ಣಯಿತುಂ ಶಕ್ತಶ್ಚತುರ್ವರ್ಗಶುಭೌಕಸಃ ।
ಇತಿ ತೇ ಕಥಿತಂ ಭದ್ರೇ ಕಾಶೀಮಾಹಾತ್ಮ್ಯಮುತ್ತಮಂ ॥ ೪೦ ॥

ಸುಖದಂ ಮೋಕ್ಷದಂ ನೄಣಾಂ ಮಹಾಪಾತಕನಾಶನಂ ।
ಬ್ರಹ್ಮಘ್ನೋ ಮಧುಪಃ ಸ್ವರ್ಣಸ್ತೇಯೀ ಚ ಗುರುತಲ್ಪಗಃ ॥ ೪೧ ॥

ಮಹಾಪಾತಕಯುಕ್ತೋಽಪಿ ಸಂಯುಕ್ತೋಽಪ್ಯುಪಪಾತಕೈಃ ।
ಅವಿಮುಕ್ತಸ್ಯ ಮಾಹಾತ್ಮ್ಯಶ್ರವಣಾಚ್ಛುದ್ಧಿಮಾಪ್ನುಯಾತ್ ॥ ೪೨ ॥

ಬ್ರಾಹ್ಮಣೋ ವೇದವಿದ್ವಾನ್ ಸ್ಯಾತ್ ಕ್ಷತ್ರಿಯೋ ವಿಜಯೀ ರಣೇ ।
ವೈಶ್ಯೋ ಧನಪತಿಃ ಶೂದ್ರೋ ವಿಷ್ಣುಭಕ್ತಸಮಾಗಮೀ ॥ ೩೪ ॥

---

೩೯-೪೦. ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವರ್ಗ ಶುಭ ಫಲಕ್ಕೆ ಮೂಲಸ್ಥಾನವಾದ ಪಂಚನದ ತೀರ್ಥದ ಅನಂತ ಮಹಿಮೆಯನ್ನು ವರ್ಣಿಸಲು ಯಾರೂ ಸಮರ್ಥರಲ್ಲ.

೪೦-೪೧. ಮಂಗಳಕರಳಾದ ಮೋಹಿನೀ ! ಮನುಷ್ಯರಿಗೆ ಸುಖ, ಮೋಕ್ಷಗಳನ್ನು ಕೊಡುವ, ಮಹಾಪಾತಕಗಳನ್ನು ನಾಶಪಡಿಸುವಂತಹ ಉತ್ತಮವಾದ ಕಾಶೀಮಾಹಾತ್ಮ್ಯೆಯನ್ನು ನಿನಗೆ ಹೇಳಿರುವೆನು.

೪೧-೪೨. ಬ್ರಹ್ಮಹತ್ಯೆ, ಮದ್ಯಪಾನ, ಸುವರ್ಣಚೌರ್ಯ, ಗುರುಸ್ತ್ರೀ ಸಂಭೋಗ ಎಂಬ ಮಹಾಪಾತಕಗಳು ಮತ್ತು ಉಪಪಾತಕಗಳೂ ಸಹ ಅವಿಮುಕ್ತ ಕ್ಷೇತ್ರದ ಮಹಾತ್ಮ್ಯೆಯನ್ನು ಶ್ರವಣಮಾಡುವುದರಿಂದ ನಾಶವಾಗಿ ಅಂತಹ ಪಾಪಿಯೂ ಶುದ್ಧಿಯನ್ನು ಪಡೆಯುವನು.

೪೩-೪೪. ಸುಂದರೀ ! ಈ ಮಹಾತ್ಮ್ಯೆಯ ಶ್ರವಣದಿಂದ ಬ್ರಾಹ್ಮಣನು ವೇದವಿದ್ವಾಂಸನಾಗುವನು. ಕ್ಷತ್ರಿಯನು ಯುದ್ಧದಲ್ಲಿ ಜಯಶೀಲನಾಗುವನು. ವೈಶ್ಯನು ಧನಿಕನಾಗುವನು. ಶೂದ್ರನು ವಿಷ್ಣುಭಕ್ತರ ಸಹವಾಸವನ್ನು ಹೊಂದು

ಶ್ರವಣಾದಸ್ಯ ಸುಭಗೇ ಭೂಯೋತ್ಸರನತೋಽಪಿ ವಾ ।
ಸರ್ವಯಜ್ಞೇಷು ಯತ್ಪುಣ್ಯಂ ಸರ್ವತೀರ್ಥೇಷು ಯತ್ಫಲಂ ॥ ೪೪ ॥

ತತ್ಸರ್ವಂ ಸ ಸಮಾಪ್ನೋತಿ ಪಠನಾಚ್ಛ್ರವಣಾದಪಿ ।
ವಿದ್ಯಾರ್ಥೀ ಲಭತೇ ವಿದ್ಯಾಂ ಧನಾರ್ಥೀ ಲಭತೇ ಧನಂ ॥ ೪೫ ॥

ಭಾರ್ಯಾರ್ಥೀ ಲಭತೇ ಭಾರ್ಯಾಂ ಸುತಾರ್ಥೀ ಪುತ್ರಮಾಪ್ನುಯಾತ್ ।
ಅವಿಮುಕ್ತಸ್ಯ ಮಾಹಾತ್ಮ್ಯಂ ಮಯಾ ತೇ ಪರಿಕೀರ್ತಿತಂ ॥ ೪೬ ॥

ವಿಷ್ಣುಭಕ್ತಾಯ ದಾತವ್ಯಂ ಶಿವಭಕ್ತಿರತಾಯ ಚ ।
ಜಗಜ್ಜನನಿಭಕ್ತಾಯ ಸೂರ್ಯಹೇರಂಬಸೇವನೇ ॥ ೪೭ ॥

---

ವನು. ಪುನಃ ಪುನಃ ಈ ಮಾಹಾತ್ಮ್ಯೆಯನ್ನು ಪಠಣಮಾಡಿದರೂ ಈ ಫಲಗಳೇ ಬರುವುವು.

೪೪-೪೫. ಈ ಮಾಹಾತ್ಮ್ಯೆಯ ಪಠಣಶ್ರವಣಗಳಿಂದ ಸಕಲಯಜ್ಞಗಳ ಪುಣ್ಯ, ಸಕಲತೀರ್ಥಗಳ ಫಲ ಇವುಗಳು ಬರುವುವು. ವಿದ್ಯಾರ್ಥಿಯು ಇದರಿಂದ ವಿದ್ಯೆಯನ್ನೂ, ಧನಾರ್ಥಿಯು ಹಣವನ್ನೂ ಪಡೆಯುವರು.

೪೬. ಈ ಮಾಹಾತ್ಮ್ಯೆಯ ಶ್ರವಣಾದಿಗಳಿಂದ ಭಾರ್ಯಾರ್ಥಿಯು ಭಾರ್ಯೆಯನ್ನೂ, ಪುತ್ರಾರ್ಥಿಯು ಮಗನನ್ನೂ ಹೊಂದುವರು. ಈ ರೀತಿಯಾದ ಅವಿಮುಕ್ತಕ್ಷೇತ್ರದ ಮಹಾತ್ಮ್ಯೆಯನ್ನು ನಾನು ನಿನಗೆ ಹೇಳಿರುವೆನು.

೪೭-೪೮. ಈ ಮಾಹಾತ್ಮ್ಯೆಯನ್ನು ವಿಷ್ಣುಭಕ್ತ, ಶಿವಭಕ್ತ, ಜಗನ್ಮಾತೆಯ ಭಕ್ತ, ಸೂರ್ಯ ಗಣಪತಿಗಳ ಭಕ್ತ ಮತ್ತು ಗುರುಸೇವೆ ಮಾಡಿದವನು ಇವರುಗಳಿಗೆ ಮಾತ್ರ ಉಪದೇಶಿಸಬೇಕು. ಇಂತಹವರಿಗೆ ಉಪದೇಶಮಾಡಿದರೆ ತೀರ್ಥಸ್ನಾನ ಫಲವು ಬರುವುದು.

ಗುರುಶುಶ್ರೂಷಣೇ ದತ್ವಾ ತೀರ್ಥಸ್ನಾನಫಲಂ ಲಭೇತ್ ।
ಶಠಾಯ ನಿಂದಕಾಯಾಪಿ ಗೋವಿಪ್ರಸುರವಿದ್ವಿಷೇ ।
ಗುರುದ್ರೋಹಾಸೂಯಕಾಯ ದತ್ವಾ ಮೃತ್ಯುಮವಾಪ್ನುಯಾತ್ ॥ ೪೮ ॥

ಇತಿ ಶ್ರೀನಾರದೀಯಮಹಾಪುರಾಣೋತ್ತರಭಾಗೇ ಮೋಹಿನೀ
ವಸುಸಂವಾದೇ ಕಾಶೀಮಾಹಾತ್ಮ್ಯೇ
ಏಕಪಂಚಾಶತ್ತಮೋಽಧ್ಯಾಯಃ

---

೪೮. ದುಷ್ಟ. ನಿಂದಕ, ಗೋಬ್ರಾಹ್ಮಣ ದೇವ ದ್ವೇಷಿಗಳು, ಗುರು ದ್ರೋಹಿ, ಅಸೂಯಾಪರ ಇವರಿಗೆ ಈ ಮಹಿಮೆಯನ್ನು ಹೇಳುವವನು ಮೃತ್ಯುವಿಗೆ ಗುರಿಯಾಗುವನು.

ಇಂತು ಶ್ರೀನಾರದೀಯಪುರಾಣೋತ್ತರಭಾಗದಲ್ಲಿ ವಸುಮೋಹಿನೀ ಸಂವಾದ
ರೂಪವಾದ ಕಾಶೀಮಾಹಾತ್ಮ್ಯವರ್ಣನೆಯಲ್ಲಿ ಐವತ್ತೊಂದನೆಯ
ಅಧ್ಯಾಯವು ಮುಗಿದುದು.

# ದ್ವಿಪಂಚಾಶತ್ತಮೋಽಧ್ಯಾಯಃ

---

ಮೋಹಿನ್ಯುವಾಚ

ಧನ್ಯೋಽಸಿ ವಿಪ್ರವರ್ಯ ತ್ವಂ ಕೃಪಾಲುಃ ಸರ್ವದೇಹಿಷು ।
ಯಚ್ಛ್ರುತಂ ತೇ ಮುಖಾಂಭೋಜಾತ್ಕಾಶೀಮಾಹಾತ್ಮ್ಯಮುತ್ತಮಂ ॥

ಅಧುನಾಹಂ ಕೃತಾರ್ಥಾಸ್ಮಿ ತ್ವಯಾ ಹಿ ಪ್ರತಿಬೋಧಿತಾ ।
ಕೃಪಾಲುನಾ ನಿಪತಿತಾಭ್ಯುದ್ಧೃತಾ ಭವಸಾಗರಾತ್ ॥ ೨ ॥

ಅಧುನಾ ಶ್ರೋತುಮಿಚ್ಛಾಮಿ ಹರೇಃ ಕ್ಷೇತ್ರಸ್ಯ ಮಾನದ ।
ಮಾಹಾತ್ಮ್ಯಂ ಯತ್ರ ಗಮನಾತ್ಕೃತಾರ್ಥೋಽ ಜಾಯತೇ ನರಃ ॥ ೩ ॥

ಪುರುಷೋತ್ತಮವಿಷ್ಣೋಽಸ್ತು ಕ್ಷೇತ್ರಂ ಮುಕ್ತಿವಿಧಾಯಕಂ ।
ಶ್ರೂಯತೇ ಹಿ ಪುರಾಣೇಷು ವರ್ಣಿತಂ ಮುನಿಭಿರ್ದ್ವಿಜೈಃ ॥ ೪ ॥

---

## ಐವತ್ತೆರಡನೆಯ ಅಧ್ಯಾಯ.

೧. ಮೋಹಿನಿಯು ಹೇಳಿದಳು :—ವಿಪ್ರವರನೇ! ನೀನು ಧನ್ಯನು. ಸಕಲಪ್ರಾಣಿಗಳಲ್ಲಿಯೂ ದಯೆಯನ್ನು ಬೀರುತ್ತಿರುವೆ. ನಿನ್ನ ಮುಖಕಮಲದಿಂದ ಉತ್ತಮವಾದ ಕಾಶೀಮಾಹಾತ್ಮ್ಯೆಯನ್ನು ಶ್ರವಣಮಾಡಿದೆನು.

೨. ಸಂಸಾರಸಾಗರದಲ್ಲಿ ಸಿಲುಕಿ ನರಳುತ್ತಿದ್ದ ನಾನು ದಯಾಳುವಾದ ನಿನ್ನಿಂದ ಉದ್ಧರಿಸಲ್ಪಟ್ಟು, ಎಚ್ಚೆತ್ತವಳಾಗಿ ಈಗ ಕೃತಾರ್ಥಳಾದೆನು.

೩. ಮಾನದಾಯಕನಾದ ವಸುವೇ! ಮನುಷ್ಯನು ಎಲ್ಲಿಗೆಹೋದರೆ ಕೃತಾರ್ಥನಾಗುವನೋ ಅಂತಹ ಹರಿಕ್ಷೇತ್ರದ ಮಾಹಾತ್ಮ್ಯೆಯನ್ನು ಈಗ ಶ್ರವಣ ಮಾಡಬೇಕೆಂದು ಬಯಸುವೆನು.

೪. ಪುರುಷೋತ್ತಮನಾದ ವಿಷ್ಣುವಿನ ಕ್ಷೇತ್ರವು ಮುಕ್ತಿದಾಯಕವೆಂದು ಪುರಾಣಗಳಲ್ಲಿ ಮುನಿಗಳಿಂದ ವರ್ಣಿತವಾಗಿದೆಯೆಂದು ದ್ವಿಜರು ಹೇಳಿರುವರು.

ತತ್ಕಥ್ಯತಾಂ ಮಹಾಭಾಗ ಶಿಷ್ಯಾಹಂ ಯದಿ ತೇ ಪ್ರಿಯಾ ।
ಸಾಧವಃ ಸರ್ವಲೋಕಸ್ಯ ಸತತೋಪಕೃತೌ ಸ್ಥಿತಾಃ ॥ ೫ ॥

ವಸುರುವಾಚ

ಶೃಣು ದೇವಿ ಪ್ರವಕ್ಷ್ಯಾಮಿ ತುಭ್ಯಂ ಮಾಹಾತ್ಮ್ಯಮುತ್ತಮಂ ।
ಪುರುಷೋತ್ತಮನಾಮ್ನಸ್ತು ಕ್ಷೇತ್ರಸ್ಯ ಬ್ರಹ್ಮಣೋದಿತಂ ॥ ೬ ॥

ಪೃಥಿವ್ಯಾಂ ಭಾರತಂ ವರ್ಷಂ ಕರ್ಮಭೂಮಿರುದಾಹೃತಾ ।
ತತ್ರಾಸ್ತೇ ಭಾರತೇ ವರ್ಷೇ ದಕ್ಷಿಣೋದಧಿತೀರಗಃ ॥ ೭ ॥

ಉತ್ಕಲೇತಿ ಸಮಾಖ್ಯಾತಃ ಸ್ವರ್ಗಮೋಕ್ಷಪ್ರದಾಯಕಃ ।
ಸಮುದ್ರಾದುತ್ತರಂ ತಾವದ್ಯಾವದ್ವಿರಜಮಂಡಲಂ ॥ ೮ ॥

ದೇಶೋಽಸೌ ಪುಣ್ಯಶೀಲಾನಾಂ ಗುಣೈಃ ಸರ್ವೈರಲಂಕೃತಾ ।
ಸರ್ವತೀರ್ಥಾನಿ ಪುಣ್ಯಾನಿ ಪುಣ್ಯಾನ್ಯಾಯತನಾನಿ ಚ ॥ ೯ ॥

---

೫. ಪೂಜ್ಯನೇ! ನಾನು ಪ್ರಿಯಶಿಷ್ಯಳೆಂದು ನೀನು ಭಾವಿಸುವುದಾದರೆ ಅಂತಹ ವಿಷ್ಣುಕ್ಷೇತ್ರದ ಮಾಹಾತ್ಮ್ಯೆಯನ್ನು ಹೇಳು. ಯಾವಾಗಲೂ ಲೋಕೋಪಕಾರ ಮಾಡುತ್ತಿರುವುದೇ ಸಾಧುಗಳ ಸ್ವಭಾವವು!

೬. ವಸುವು ಹೇಳಿದನು :—ದೇವಿಯೇ! ಬ್ರಹ್ಮನಿಂದ ಹೇಳಲ್ಪಟ್ಟಿರುವ ಪುರುಷೋತ್ತಮವೆಂಬ ವಿಷ್ಣುಕ್ಷೇತ್ರದ ಉತ್ತಮ ಮಾಹಾತ್ಮ್ಯೆಯನ್ನು ನಿನಗೆ ಹೇಳುವೆನು ಕೇಳು.

೭-೮. ಈ ಭೂಮಂಡಲದಲ್ಲಿ ಭರತಖಂಡವು ಕರ್ಮಭೂಮಿಯೆಂದು ಜ್ಞಾನಿಗಳು ಹೇಳಿರುವರು. ಆ ಭರತಖಂಡದಲ್ಲಿ ದಕ್ಷಿಣಸಮುದ್ರತೀರದಲ್ಲಿರುವ ಸ್ವರ್ಗಮೋಕ್ಷದಾಯಕವಾದ ಉತ್ಕಲೆಯೆಂದು ವಿಖ್ಯಾತದೇಶವು ಸಮುದ್ರದ ಉತ್ತರಭಾಗದಲ್ಲಿ ವಿರಜದೇಶದವರೆಗೂ ವ್ಯಾಪಿಸಿದೆ.

೯-೧೦. ವಿಶಾಲಾಕ್ಷೀ! ಈ ದೇಶವು ಪುಣ್ಯಶೀಲರ ಸಕಲಗುಣಗಳಿಂದಲೂ ಅಲಂಕೃತವಾಗಿದೆ. ಸಮುದ್ರದ ಉತ್ತರತೀರದಲ್ಲಿರುವ ಸರ್ವೋತ್ತಮ

ಉತ್ಕಲೇ ತು ವಿಶಾಲಾಕ್ಷೀ ವೇದಿತವ್ಯಾನಿ ತಾನಿ ತು ।
ಸಮುದ್ರಸ್ಯೋತ್ತರೇ ತೀರೇ ತಸ್ಮಿನ್ ದೇಶೇಖಿಲೋತ್ತಮೇ ॥ ೧೦ ॥

ಅಸ್ತೇ ಗುಹ್ಯಂ ಪರಂ ಕ್ಷೇತ್ರಂ ಮುಕ್ತಿದಂ ಪಾಪನಾಶನಂ ।
ಸರ್ವತ್ರ ವಾಲುಕಾಕೀರ್ಣೇ ಪವಿತ್ರಂ ಕರ್ಮ ಕಾಮದಂ ॥ ೧೧ ॥

ದಶಯೋಜನವಿಸ್ತೀರ್ಣಂ ಕ್ಷೇತ್ರಂ ಪರಮದುರ್ಲಭಂ ।
ನಕ್ಷತ್ರಾಣಾಂ ಯಥಾ ಸೋಮಃ ಸರಸಾಂ ಸಾಗರೋ ಯಥಾ ॥ ೧೨ ॥

ತಥಾ ಸಮಸ್ತತೀರ್ಥಾನಾಂ ವರಿಷ್ಠಂ ಪುರುಷೋತ್ತಮಂ ।
ವಸೂನಾಂ ಪಾವಕೋ ಯದ್ವದ್ರುದ್ರಾಣಾಂ ಶಂಕರೋ ಯಥಾ ॥ ೧೩ ॥

ತಥಾ ಶ್ರೇಷ್ಠಂ ಹಿ ತೀರ್ಥಾನಾಂ ಸರ್ವೇಷಾಂ ಪುರುಷೋತ್ತಮಂ ।
ವರ್ಣಾನಾಂ ಬ್ರಾಹ್ಮಣೋ ಯದ್ವದ್ವೈನತೇಯಶ್ಚ ಪಕ್ಷಿಣಾಂ ॥ ೧೪ ॥

---

ವಾದ ಆ ಉತ್ಕಲದೇಶದಲ್ಲಿ ಸಕಲ ಪುಣ್ಯತೀರ್ಥಗಳೂ, ಪುಣ್ಯಕರವಾದ ಆಲಯಗಳೂ ಇವೆಯೆಂದು ತಿಳಿಯಬೇಕು.

೧೧. ಆ ದೇಶದಲ್ಲಿ ಗೋಪ್ಯವು, ಮುಕ್ತಿಪ್ರದವು, ಪಾಪನಾಶಕವು, ಎಲ್ಲಾ ಕಡೆಯಲ್ಲಿಯೂ ಮರಳಿನಿಂದವ್ಯಾಪ್ತವಾದುದು, ಪವಿತ್ರವು, ಇಷ್ಟಾರ್ಥಪ್ರದವೂ ಆಗಿರುವ ಉತ್ತಮಕ್ಷೇತ್ರವಿದೆ.

೧೨-೧೩. ಹತ್ತು ಸಾವಿರ ಗಾವುದ ವಿಸ್ತಾರವುಳ್ಳ ಅಂತಹ ಕ್ಷೇತ್ರವು ಅತ್ಯಂತ ದುರ್ಲಭವು. ನಕ್ಷತ್ರಗಳಲ್ಲಿ ಚಂದ್ರನಂತೆಯೂ, ಸರೋವರಗಳಲ್ಲಿ ಸಮುದ್ರದಂತೆಯೂ, ಸಮಸ್ತ ತೀರ್ಥಗಳಲ್ಲಿಯೂ ಪುರುಷೋತ್ತಮ ತೀರ್ಥವು ಶ್ರೇಷ್ಠವಾದುದು.

೧೩-೧೪. ವಸುಗಣದಲ್ಲಿ ಪಾವಕನು, ರುದ್ರರಲ್ಲಿ ಶಂಕರನೂ ಉತ್ತಮರಾಗಿರುವಂತೆ ಸಕಲ ತೀರ್ಥಗಳಲ್ಲಿಯೂ ಪುರುಷೋತ್ತಮ ತೀರ್ಥವೇ ಉತ್ತಮವು.

೧೪-೧೫. ವರ್ಣಗಳಲ್ಲಿ ಬ್ರಾಹ್ಮಣವರ್ಣವೂ, ಪಕ್ಷಿಗಳಲ್ಲಿ ಗರುಡನೂ,

ತಥಾ ಸಮಸ್ತತೀರ್ಥಾನಾಂ ವರಿಷ್ಠಂ ಪುರುಷೋತ್ತಮಂ ।
ಸೇನಾನೀನಾಂ ಯಥಾ ಸ್ಕಂದಃ ಸಿದ್ಧಾನಾಂ ಕಪಿಲೋ ಯಥಾ ॥ ೧೫ ॥

ಐರಾವತೋ ಗಜೇಂದ್ರಾಣಾಂ ಮಹರ್ಷೀಣಾಂ ಭೃಗುರ್ಯಥಾ ।
ಮೇರುಃ ಶಿಖರಿಣಾಂ ಯದ್ವನ್ನಗಾನಾಂ ಚ ಹಿಮಾಲಯಃ ॥ ೧೬ ॥

ಉಚ್ಚೈಶ್ರವಾ ಯಥಾಶ್ವಾನಾಂ ಕವೀನಾಮುಶನಾಯಥಾ ।
ಮುನೀನಾಂ ಚ ಯಥಾ ವ್ಯಾಸಃ ಕುಬೇರೋ ಯಕ್ಷರಕ್ಷಸಾಂ ॥ ೧೭ ॥

ಇಂದ್ರಿಯಾಣಾಂ ಮನೋ ಯದ್ವದ್ಭೂತಾನಾಮವನೀ ಯಥಾ ।
ಅಶ್ವತ್ಥಃ ಸರ್ವ ವೃಕ್ಷಾಣಾಂ ಪವನಃ ಪವತಾಂ ಯಥಾ ॥ ೧೮ ॥

ಅರುಂಧತೀ ಯಥಾ ಸ್ತ್ರೀಣಾಂ ಶಸ್ತ್ರಾಣಾಂ ಕುಲಿಶಂ ಯಥಾ ।
ಅಕಾರಃ ಸರ್ವವರ್ಣಾನಾಂ ಗಾಯತ್ರೀ ಛಂದಸಾಂ ಯಥಾ ॥ ೧೯ ॥

ಸರ್ವಾಂಗೇಭ್ಯೋ ಯಥಾ ಶ್ರೇಷ್ಠಮುತ್ತಮಾಂಗಂ ವಿಧಾತ್ಮಜೇ ।
ಯಥಾ ಸಮಸ್ತವಿದ್ಯಾನಾಂ ಮೋಕ್ಷವಿದ್ಯಾ ಪರಾ ಸ್ಮೃತಾ ॥ ೨೦ ॥

---

ಶ್ರೇಷ್ಠವಾಗಿರುವಂತೆ ಸಮಸ್ತ ತೀರ್ಥಗಳಲ್ಲಿಯೂ ಪುರುಷೋತ್ತಮ ತೀರ್ಥವು ಶ್ರೇಷ್ಠವು

೧೫-೨೫. ಸೇನಾನಿಗಳಲ್ಲಿ ಸ್ಕಂದನು, ಸಿದ್ಧರಲ್ಲಿ ಕಪಿಲನು, ಆನೆಗಳಲ್ಲಿ ಐರಾವತವು, ಮಹರ್ಷಿಗಳಲ್ಲಿ ಭೃಗುಮುನಿಯು, ಬೆಟ್ಟಗಳಲ್ಲಿ ಮೇರುಗಿರಿಯು ಪರ್ವತಗಳಲ್ಲಿ ಹಿಮಾಲಯವು, ಕುದುರೆಗಳಲ್ಲಿ ಉಚ್ಚೈಃಶ್ರವಸ್ಸೆಂಬ ಅಶ್ವವು, ಕವಿಗಳಲ್ಲಿ ಶುಕ್ರಾಚಾರ್ಯರು, ಮುನಿಗಳಲ್ಲಿ ವ್ಯಾಸಮುನಿಯು, ಯಕ್ಷರಕ್ಷರಲ್ಲಿ ಕುಬೇರನು, ಇಂದ್ರಿಯಗಳಲ್ಲಿ ಮನಸ್ಸು, ಭೂತಗಳಲ್ಲಿ ಪೃಥಿವಿಯು, ವೃಕ್ಷಗಳಲ್ಲೆಲ್ಲಾ ಅರಳಿಯ ಮರವು, ವಾಯುಗಳಲ್ಲಿ ಪ್ರಾಣವೆಂಬ ಮುಖ್ಯವಾಯುವು, ಸ್ತ್ರೀಯರಲ್ಲಿ ಅರುಂಧತಿಯು, ಶಸ್ತ್ರಗಳಲ್ಲಿ ವಜ್ರಾಯುಧವು, ವರ್ಣಗಳಲ್ಲಿ ಅಕಾರವು, ಛಂದಸ್ಸುಗಳಲ್ಲಿ ಗಾಯತ್ರಿಯು, ಅವಯವಗಳಲ್ಲೆಲ್ಲಾ ಶಿರಸ್ಸು, ಸಮಸ್ತವಿದ್ಯೆಗಳಲ್ಲಿಯೂ ಮೋಕ್ಷವಿದ್ಯೆಯು, ಮನುಷ್ಯರಲ್ಲಿ ರಾಜನು, ಗೋವುಗಳಲ್ಲಿ

ಮನುಷ್ಯಾಣಾಂ ಯಥಾ ರಾಜಾ ಧೇನೂನಾಂ ಕಾಮಧುಗ್ಯಥಾ ।
ಸುವರ್ಣಂ ಸರ್ವಧಾತೂನಾಂ ಸರ್ಪಾಣಾಂ ವಾಸುಕಿರ್ಯಥಾ ॥ ೨೦ ॥

ಪ್ರಹ್ಲಾದಃ ಸರ್ವದೈತ್ಯಾನಾಂ ರಾಮಃ ಶಸ್ತ್ರಭೃತಾಂ ಯಥಾ ।
ಝಷಾಣಾಂ ಮಕರೋ ಯದ್ವನ್ಮೃಗಾಣಾಂ ಮೃಗರಾಡ್ಯಥಾ ॥ ೨೨ ॥

ವರುಣೋ ಯಾದಸಾಂ ಯದ್ವದ್ಯಮಃ ಸಂಯಮಿನಾಂ ಯಥಾ ।
ಕ್ಷೀರೋದಃ ಸಾಗರಾಣಾಂ ಚ ದೇವರ್ಷೀಣಾಂ ಚ ನಾರದಃ ॥ ೨೩ ॥

ಪುರೋಧಸಾಂ ಯಥಾ ಜೀವಃ ಕಾಲಃ ಕಲಯತಾಂ ಯಥಾ ।
ಗ್ರಹಾಣಾಂ ಭಾಸ್ಕರೋ ಯದ್ವನ್ಮಂತ್ರಾಣಾಂ ಪ್ರಣವೋ ಯಥಾ ॥ ೨೪ ॥

ಕೃತ್ಯಾನಾಂ ಧರ್ಮಕಾರ್ಯಂ ಚ ತದ್ವಚ್ಛ್ರೀಪುರುಷೋತ್ತಮಂ ।
ಪುರುಷಾಖ್ಯಂ ಸಕೃದ್ದೃಷ್ಟ್ವಾ ಸಾಗರಾಂತಂ ಸಕೃನ್ಮತಂ ॥ ೨೫ ॥

---

ಕಾಮಧೇನುವು, ಧಾತುಗಳಲ್ಲೆಲ್ಲಾ ಸುವರ್ಣವು, ಸರ್ಪಗಳಲ್ಲಿ ವಾಸುಕಿಯು, ದೈತ್ಯರಲ್ಲಿ ಪ್ರಹ್ಲಾದನು, ಶಸ್ತ್ರಧಾರಿಗಳಲ್ಲಿ ರಾಮನು, ಜಲಚರಜಂತುಗಳಲ್ಲಿ ಮೊಸಳೆಯು, ಮೃಗಗಳಲ್ಲಿ ಸಿಂಹವು, ಜಲಜಂತುಗಳಲ್ಲಿ ವರುಣನು, ಸಂಯಮಿಗಳಲ್ಲಿ ಯಮನು, ಸಮುದ್ರಗಳಲ್ಲಿ ಕ್ಷೀರಾಬ್ಧಿಯು, ದೇವರ್ಷಿಗಳಲ್ಲಿ ನಾರದನು, ಮುಂದಿನಹಿತವನ್ನು ತಿಳಿಯುವವರಲ್ಲಿ ಜೀವನು, ಬಾಧಕಗಳಲ್ಲಿ ಕಾಲವು, ಗ್ರಹಗಳಲ್ಲಿ ಸೂರ್ಯನು, ಮಂತ್ರಗಳಲ್ಲಿ ಪ್ರಣವವು ಮತ್ತು ಕರ್ತವ್ಯಗಳಲ್ಲಿ ಧರ್ಮಕಾರ್ಯವೂ ಉತ್ತಮವಾಗಿರುವಂತೆ ಶ್ರೀ ಪುರುಷೋತ್ತಮನು ತೀರ್ಥವು ಶ್ರೇಷ್ಠವಾದುದು.

೨೫-೨೬. ಒಂದಾವರ್ತಿ ಬ್ರಹ್ಮವಿದ್ಯೆಯು ಶ್ರವಣ ಮನನಾದಿಗಳನ್ನು ಮಾಡುವುದರಿಂದ ಪುನಃ ಗರ್ಭವಾಸ ಎಂದರೆ ಜನ್ಮವು ಬರುವುದಿಲ್ಲ. ಮುಕ್ತನಾಗುವನೆಂದು ಭಾವ. ಅದರಂತೆ ಪುರುಷೋತ್ತಮಕ್ಷೇತ್ರವನ್ನು ಒಂದಾವರ್ತಿ ದರ್ಶನಮಾಡಿದರೆ ನರನು ಶ್ರೇಯಸ್ಸನ್ನು ಪಡೆಯುವನು. ಈ ರೀತಿಯಾಗಿ ಸಕಲಗುಣ

ಬ್ರಹ್ಮವಿದ್ಯಾಂ ಸಕೃತ್ ಜ್ಞಾತ್ವಾ ಗರ್ಭವಾಸೋ ನ ವಿದ್ಯತೇ
ಏವಂ ಸರ್ವಗುಣೋಪೇತಂ ಕ್ಷೇತ್ರಂ ಪರಮದುರ್ಲಭಂ ॥ ೨೬ ॥

ಆಸ್ತೇ ಯತ್ರ ವರಾರೋಹೇ ವಿಖ್ಯಾತಂ ಪುರುಷೋತ್ತಮಂ ।
ಜಗದ್ವ್ಯಾಪೀ ಸ ವಿಶ್ವಾತ್ಮಾ ದೇವೇಶಃ ಪುರುಷೋತ್ತಮಃ ॥ ೨೭ ॥

ಜಗದ್ಯೋನಿರ್ಜಗನ್ನಾಥಸ್ತತ್ರ ಸರ್ವೈಃ ಪ್ರತಿಷ್ಠಿತಂ ।
ಅಜಃ ಶಕ್ರಶ್ಚ ರುದ್ರಶ್ಚ ದೇವಾಶ್ಚಾಗ್ನಿಪುರೋಗಮಾಃ ॥ ೨೮ ॥

ನಿವಸಂತಿ ಮಹಾಭಾಗೇ ತಸ್ಮಿನ್ ದೇಶೇ ಸದೈವ ಹಿ ।
ಗಂಧರ್ವಾಪ್ಸರಸಃ ಸಿದ್ಧಾಃ ಪಿತರೋ ದೇವಮಾನುಷಾಃ ॥ ೨೯ ॥

ಯಕ್ಷಾ ವಿದ್ಯಾಧರಾಶ್ಚೈವ ಮುನಯಃ ಶಂಸಿತವ್ರತಾಃ ।
ಋಷಯೋ ವಾಲಖಿಲ್ಯಾದ್ಯಾಃ ಕಶ್ಯಪಾದ್ಯಾಃ ಪ್ರಜೇಶ್ವರಾಃ ॥ ೩೦ ॥

ಸುಪರ್ಣಾಃ ಕಿನ್ನರಾ ನಾಗಾಸ್ತಥಾನ್ಯೇ ಸ್ವರ್ಗವಾಸಿನಃ ।
ಸಾಂಗಾ ವೇದಾಶ್ಚ ಚತ್ವಾರೋ ಶಾಸ್ತ್ರಾಣಿ ವಿವಿಧಾನಿ ಚ ॥ ೩೧ ॥

---

ಯುಕ್ತವಾದ ಪುರುಷೋತ್ತಮವೆಂದು ವಿಖ್ಯಾತವಾದ ಕ್ಷೇತ್ರವು ಸುಲಭವಾಗಿ ದೊರೆಯುವುದಿಲ್ಲ.

೨೭-೨೮. ವರಾರೋಹೇ! ಜಗದ್ವ್ಯಾಪಕನು, ಜಗದಂತರ್ಯಾಮಿಯು, ಜಗತ್ಕಾರಣನು, ಜಗವೊಡೆಯನೂ ಆದ ಪುರುಷೋತ್ತಮ ದೇವೇಶನು ಸನ್ನಿಹಿತನಾಗಿರುವ ಆ ಕ್ಷೇತ್ರದಲ್ಲಿ ಸರ್ವರೂ ಸನ್ನಿಹಿತರಾಗಿರುವರು.

೨೮-೨೯. ಧನ್ಯಳೇ! ಬ್ರಹ್ಮ, ಇಂದ್ರ, ರುದ್ರ, ಅಗ್ನಿ ಮುಂತಾದ ದೇವತೆಗಳು, ಗಂಧರ್ವರು, ಅಪ್ಸರಸ್ತ್ರೀಯರು, ಸಿದ್ಧರು, ಪಿತೃಗಳು ಮತ್ತು ದೇವಮಾನುಷರು ಇವರೆಲ್ಲರೂ ಆ ಪುಣ್ಯದೇಶದಲ್ಲಿ ಯಾವಾಗಲೂ ವಾಸಿಸುವರು.

೩೦-೩೩. ಯಕ್ಷರು, ಉತ್ತಮವ್ರತಧಾರಿಗಳಾದ ವಿದ್ಯಾಧರರು ಮುನಿಗಳು, ವಾಲಖಿಲ್ಯಾದಿ ಋಷಿಗಳು, ಕಶ್ಯಪಾದಿ ಪ್ರಜೇಶ್ವರರು, ಗರುಡಾದಿಗಳು, ಕಿನ್ನರರು, ನಾಗಗಳು, ಇತರ ಸ್ವರ್ಗವಾಸಿಗಳು, ಅಂಗಸಹಿತವಾದ ನಾಲ್ಕುವೇದ

ಇತಿಹಾಸಪುರಾಣಾನಿ ಯಜ್ಞಾಶ್ಚ ಬಹುದಕ್ಷಿಣಾಃ ।
ನದ್ಯಶ್ಚ ವಿವಿಧಾಃ ಪುಣ್ಯಾಸ್ತೀರ್ಥಾನ್ಯಾಯತನಾನಿ ಚ ॥ ೩೨ ॥
ಸಾಗರಾಶ್ಚ ತಥಾ ಶೈಲಾಸ್ತಸ್ಮಿನ್ ದೇಶೇ ವ್ಯವಸ್ಥಿತಾಃ ।
ಏವಂ ಪುಣ್ಯತಮೇ ದೇಶೇ ದೇವರ್ಷಿಪಿತೃಸೇವಿತೇ ॥ ೩೩ ॥
ಸರ್ವೋಪಭೋಗಸಹಿತೇ ವಾಸಃ ಕಸ್ಯ ನ ರೋಚತೇ ।
ಶ್ರೇಷ್ಠತ್ವಂ ತಸ್ಯ ದೇಶಸ್ಯ ಕಿಂ ಚಾನ್ಯದಧಿಕಂ ತತಃ ॥ ೩೪ ॥
ಆಸ್ತೇ ಯತ್ರ ಜಗದ್ದೇವೋ ಮುಕ್ತಿದಃ ಪುರುಷೋತ್ತಮಃ ।
ಧನ್ಯಾಸ್ತೇ ವಿಬುಧಪ್ರಖ್ಯಾ ಯೇ ವಸಂತ್ಯುತ್ಕಲೇ ನರಾಃ ॥ ೩೫ ॥
ತೀರ್ಥರಾಜಜಲೇ ಸ್ನಾತ್ವಾ ಪಶ್ಯಂತಿ ಪುರುಷೋತ್ತಮಂ ।
ಸ್ವರ್ಗೇ ವಸಂತಿ ತೇ ಮರ್ತ್ಯಾ ನ ತು ತೇ ರಾಜಸಾಲಯೇ ॥ ೩೬ ॥

---

ಗಳು, ನಾನಾವಿಧಶಾಸ್ತ್ರಗಳು, ಇತಿಹಾಸ, ಪುರಾಣ, ಬಹುದಕ್ಷಿಣಾಕ ಯಜ್ಞಗಳು, ವಿವಿಧ ಪುಣ್ಯನದಿಗಳು, ತೀರ್ಥಗಳು, ದೇವಾಲಯಗಳು, ಸಾಗರಗಳು ಮತ್ತು ಪರ್ವತಗಳೂ ಸಹ ಆ ಪುರುಷೋತ್ತಮ ಕ್ಷೇತ್ರವೆಂಬ ಪುಣ್ಯದೇಶದಲ್ಲಿ ಸನ್ನಿಹಿತರಾಗಿರುವರು.

೩೩-೩೪. ಈರೀತಿಯಾಗಿ ಅತ್ಯಂತ ಪುಣ್ಯಕರವು, ದೇವರ್ಷಿ ಪಿತೃಗಣಗಳಿಂದ ಸೇವಿಸಲ್ಪಡುತ್ತಿರುವುದು, ಸಕಲ ಉಪಭೋಗ ಸಾಧನಗಳಿಂದ ಯುಕ್ತವಾಗಿರುವುದೂ ಆಗಿರುವ ಆ ಕ್ಷೇತ್ರದಲ್ಲಿ ಯಾರುತಾನೇ ವಾಸಮಾಡಬೇಕೆಂದು ಬಯಸಲಾರರು ?

೩೪-೩೫. ಜಗದ್ದೇವನು, ಮೋಕ್ಷವನ್ನು ಕೊಡುವವನೂ ಆದ ಪುರುಷೋತ್ತಮನು ಸನ್ನಿಹಿತನಾಗಿರುವ ಆ ದೇಶವು ಶ್ರೇಷ್ಠವಾದುದು. ಬೇರಾವುದು ಅದಕ್ಕಿಂತ ಅಧಿಕವಾದೀತು ? ಅಂತಹ ಉತ್ಕಲದೇಶದಲ್ಲಿ ವಾಸಮಾಡುತ್ತಿರುವ ದೇವತೆಗಳು, ಮನುಷ್ಯರು ಮುಂತಾದವರು ಧನ್ಯರು!

೩೬. ಶ್ರೇಷ್ಠವಾದ ಪುರುಷೋತ್ತಮ ತೀರ್ಥಜಲದಲ್ಲಿ ಸ್ನಾನಮಾಡಿ ಪುರುಷೋತ್ತಮ ಸ್ವಾಮಿಯನ್ನು ದರ್ಶನಮಾಡುವ ಮನುಷ್ಯರು ಸಾತ್ವಿಕವಾದ ಸ್ವರ್ಗದಲ್ಲಿಯೇ ವಾಸಿಸುವರು. ಅವರು ರಾಜಸಸ್ಥಾನಗಳಿಗೆ ಹೋಗುವುದಿಲ್ಲ.

ಯೇ ವಸಂತ್ಯುತ್ಕಲೇ ಕ್ಷೇತ್ರೇ ಪುಣ್ಯೇ ಶ್ರೀಪುರುಷೋತ್ತಮೇ ।
ಸಫಲಂ ಜೀವಿತಂ ತೇಷಾಮೌತ್ಕಲಾನಾಂ ಸುಮೇಧಸಾಂ ॥ ೩೭ ॥

ಯೇ ಪಶ್ಯಂತಿ ಸುತಾಮ್ರೌಷ್ಠಪ್ರಸನ್ನಾಯತಲೋಚನಂ ।
ಚಾರುಭ್ರೂಕೇಶಮುಕುಟಂ ಚಾರುಕರ್ಣಲತಾರ್ಚಿತಂ ॥ ೩೮ ॥

ಚಾರುಸ್ಮಿತಂ ಚಾರುದಂತಂ ಚಾರುಕುಂಡಲಮಂಡಿತಂ ।
ಸುನಾಸಂ ಸುಕಪೋಲಂ ಚ ಸುಲಲಾಟಂ ಸುಲಕ್ಷಣಂ ॥ ೩೯ ॥

ತ್ರೈಲೋಕ್ಯಾನಂದಜನನಂ ಕೃಷ್ಣಸ್ಯ ಮುಖಪಂಕಜಂ ।
ಪುರಾ ಕೃತಯುಗೇ ದೇವಿ ಶಕ್ರತುಲ್ಯಪರಾಕ್ರಮಃ ॥ ೪೦ ॥

ಬಭೂವ ನೃಪತಿಃ ಶ್ರೀಮಾನಿಂದ್ರದ್ಯುಮ್ನ ಇತಿ ಶ್ರುತಃ ।
ಸತ್ಯವಾದೀ ಶುಚಿರ್ದಕ್ಷಃ ಸರ್ವಶಸ್ತ್ರಭೃತಾಂ ವರಃ ॥ ೪೧ ॥

---

೩೭. ಉತ್ಕಲದೇಶದಲ್ಲಿರುವ ಪುಣ್ಯಕರವಾದ ಶ್ರೀ ಪುರುಷೋತ್ತಮ ಕ್ಷೇತ್ರದಲ್ಲಿ ವಾಸಿಸುವ, ಒಳ್ಳೆಯ ಪ್ರಜ್ಞಾವಂತರಾದ ಉತ್ಕಲದೇಶೀಯರ ಜನ್ಮವೇ ಸಾರ್ಥಕವು !

೩೮-೪೦. ಸಮೀಚೀನ ತಾಮ್ರದಂತಿರುವ ತುಟಿ, ಪ್ರಸನ್ನತೆಯನ್ನು ಬೀರುತ್ತಿರುವ ವಿಶಾಲವಾದ ಕಣ್ಣುಗಳು, ಮನೋಹರವಾದ ಹುಬ್ಬು, ಕೂದಲು, ಕಿರೀಟ, ದಿವ್ಯಕರ್ಣಲತೆಗಳು, ಸುಂದರ ಮಂದಹಾಸ, ಸುಂದರವಾದ ಹಲ್ಲು, ಒಳ್ಳೆಯ ಕುಂಡಲಗಳು, ಒಳ್ಳೆಯ ನಾಸಿಕೆ, ಕೆನ್ನೆ, ಹಣೆ ಮುಂತಾದ ಸಲ್ಲಕ್ಷಣಗಳು ಇವುಗಳಿಂದ ಕೂಡಿದ ಮೂರು ಲೋಕಗಳಿಗೂ ಆನಂದದಾಯಕವಾದ ಕೃಷ್ಣನ ಮುಖಕಮಲವನ್ನು ನೋಡುವ ಪುರುಷೋತ್ತಮ ಕ್ಷೇತ್ರವಾಸಿಗಳ ಜೀವಿತವು ಸಾರ್ಥಕವು !

೪೦-೪೫. ದೇವಿಯೇ ! ಹಿಂದೆ ಕೃತಯುಗದಲ್ಲಿ ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳವನು, ಸತ್ಯವಾದಿಯು, ಶೌಚಾಚಾರಸಂಪನ್ನನು, ಸಮರ್ಥನು, ಶಸ್ತ್ರಧಾರಿಗಳಲ್ಲೆಲ್ಲಾ ಉತ್ತಮನು, ರೂಪವಂತನು, ಮನೋಹರನು,

ರೂಪವಾನ್ ಸುಭಗಃ ಶೂರೋ ದಾತಾ ಭೋಕ್ತಾ ಪ್ರಿಯಂವದಃ ।
ಯಷ್ಟಾ ಸಮಸ್ತಯಜ್ಞಾನಾಂ ಬ್ರಹ್ಮಣ್ಯಃ ಸತ್ಯಸಂಗರಃ ॥ ೪೨ ॥

ಧನುರ್ವೇದೇ ಚ ವೇದೇ ಚ ಶಾಸ್ತ್ರೇ ಚ ನಿಪುಣಃ ಕೃತೀ ।
ವಲ್ಲಭೋ ನರನಾರೀಣಾಂ ಪೌರ್ಣಮಾಸ್ಯಾಂ ಯಥಾ ಶಶೀ ॥ ೪೩ ॥

ಆದಿತ್ಯ ಇವ ದುಷ್ಪ್ರೇಕ್ಷ್ಯೋ ಮಧುರಶ್ಚಂದ್ರಮಾ ಇವ ।
ವೈಷ್ಣವಃ ಸತ್ಯಸಂಪನ್ನೋ ಜಿತಕ್ರೋಧೋ ಜಿತೇಂದ್ರಿಯಃ ॥ ೪೪ ॥

ಅಧ್ಯಾತ್ಮವಿದ್ಯಾನಿರತೋ ಯುಯುತ್ಸುರ್ಧರ್ಮತತ್ಪರಃ ।
ಏವಂ ಸ ಪಾಲಯೇತ್ಪೃಥ್ವೀಂ ರಾಜಾ ಸರ್ವಗುಣಾಕರಃ ॥ ೪೫ ॥

ತಸ್ಯ ಬುದ್ಧಿಃ ಸಮುತ್ಪನ್ನಾ ವಿಷ್ಣೋರಾರಾಧನಂ ಪ್ರತಿ ।
ಕಥಮಾರಾಧಯಿಷ್ಯಾಮಿ ದೇವದೇವಂ ಜನಾರ್ದನಂ ॥ ೪೬ ॥

---

ಶೂರನು, ದಾನಿಯು, ಭೋಕ್ತೃವು, ಪ್ರಿಯನುಡಿಗಳನ್ನು ನುಡಿಯುವವನು, ಸಮಸ್ತಯಜ್ಞಗಳನ್ನೂ ಮಾಡಿದವನು, ಬ್ರಾಹ್ಮಣಪ್ರಿಯನು, ಸತ್ಯಸಂಧನು, ಧನುರ್ವೇದ, ವೇದ, ಶಾಸ್ತ್ರಗಳಲ್ಲಿ ನಿಪುಣನಾದ ಪಂಡಿತನು, ಪೂರ್ಣಿಮೆಯ ಚಂದ್ರನಂತೆ ನರನಾರೀಪ್ರಿಯನು, ಸೂರ್ಯನಂತೆ ದುಷ್ಪ್ರೇಕ್ಷ್ಯನು, ಚಂದ್ರನಂತೆ ಮನೋಹರನು, ವಿಷ್ಣುಭಕ್ತನು, ಸತ್ಯಸಂಪನ್ನನು, ಕೋಪವಿಲ್ಲದವನು, ಜಿತೇಂದ್ರಿಯನು, ಅಧ್ಯಾತ್ಮವಿದ್ಯೆಯಲ್ಲಾಸಕ್ತನು, ಯುದ್ಧಮಾಡುವುದರಲ್ಲಿ ನಿಪುಣನು ಮತ್ತು ಧರ್ಮಕಾರ್ಯನಿರತನೂ ಆಗಿದ್ದ ಶ್ರೀಮಂತನಾದ ಇಂದ್ರದ್ಯುಮ್ನನೆಂಬ ದೊರೆಯಿದ್ದನು. ಸರ್ವಗುಣಾಕರನಾದ ಆ ರಾಜನು ಧರ್ಮದಿಂದ ರಾಜ್ಯಪರಿಪಾಲನೆ ಮಾಡುತ್ತಿದ್ದನು.

೪೬. ಅವನಿಗೆ ದೇವದೇವನಾದ ಜನಾರ್ದನನನ್ನು ಹೇಗೆ ಆರಾಧನೆ ಮಾಡಬೇಕು? ಎಂಬುದಾಗಿ ವಿಷ್ಣ್ವಾರಾಧನೆ ವಿಷಯದಲ್ಲಿ ಬುದ್ಧಿಯು ಹುಟ್ಟಿತು.

ಕಸ್ಮಿನ್ ಕ್ಷೇತ್ರೇಥ ವಾ ತೀರ್ಥೇ ನದೀತೀರೇ ತಥಾಶ್ರಮೇ ।
ಏವಂ ಚಿಂತಾಪರಃ ಸೋಥ ನಿರೀಕ್ಷ್ಯ ಮನಸಾ ಮಹೀಂ ॥ ೪೭ ॥

ಆಲೋಕ್ಯ ಸರ್ವತೀರ್ಥಾನಿ ಯಾನಿ ಪಾಪಹರಾಣಿ ಚ ।
ತಾನಿ ಸರ್ವಾಣಿ ಸಂಚಿಂತ್ಯ ಜಗಾಮ ಮನಸಾ ಪುನಃ ॥ ೪೮ ॥

ವಿಖ್ಯಾತಂ ಪರಮಂ ಕ್ಷೇತ್ರಂ ಮುಕ್ತಿದಂ ಪುರುಷೋತ್ತಮಂ ।
ಸ ಗತ್ವಾ ನೃಪತಿಸ್ತತ್ರ ಸಮೃದ್ಧಬಲವಾಹನಃ ॥ ೪೯ ॥

ಅಯಜಚ್ಚಾಶ್ವಮೇಧೇನ ವಿಧಿವದ್ಭೂರಿದಕ್ಷಿಣಃ ।
ಕಾರಯಿತ್ವಾ ಮಹೋತ್ಸೇಧಂ ಪ್ರಸಾದಂ ಭೂರಿದಕ್ಷಿಣಂ ॥ ೫೦ ॥

ತತ್ರ ಸಂಕರ್ಷಣಂ ಕೃಷ್ಣಂ ಸುಭದ್ರಾಂ ಸ್ಥಾಪ್ಯವೀರ್ಯವಾನ್ ।
ಪಂಚತೀರ್ಥಂ ಚ ವಿಧಿವತ್ಕೃತ್ವಾ ತತ್ರ ಮಹೀಪತಿಃ ॥ ೫೧ ॥

---

೪೭-೪೯. ಕ್ಷೇತ್ರ, ತೀರ್ಥ, ನದೀತೀರ, ಆಶ್ರಮ ಇವುಗಳ ಪೈಕಿ ಎಲ್ಲಿ ಹರಿಯನ್ನು ಆರಾಧಿಸಬೇಕು? ಎಂಬುದಾಗಿ ಚಿಂತಾಪರನಾಗಿ ಆ ರಾಜನು ಭೂಮಂಡಲವನ್ನು ಮನಸ್ಸಿನಲ್ಲಿ ಪರಿಭಾವನೆಮಾಡಿ ಪಾಪಪರಿಹಾರಕವಾದ ಸಕಲತೀರ್ಥಗಳನ್ನೂ ನೋಡಿ ಅವುಗಳಲ್ಲಾವುದು ಉತ್ತಮವೆಂದು ಮನಸ್ಸಿನಲ್ಲಿಯೇ ಯೋಚಿಸಿ ಮೋಕ್ಷಪ್ರದವೂ, ಉತ್ತಮವೆಂದು ವಿಖ್ಯಾತವೂ ಆದ ಪುರುಷೋತ್ತಮ ಕ್ಷೇತ್ರಕ್ಕೆ ಸಂಪೂರ್ಣ ಸೈನ್ಯವಾಹನಗಳ ಸಹಿತವಾಗಿ ಹೋದನು.

೫೦-೫೧. ಅಲ್ಲಿ ಅವನು ಭೂರಿದಕ್ಷಿಣೆಯನ್ನು ಕೊಟ್ಟು ಅಶ್ವಮೇಧ ಯಾಗ ಮಾಡಿದನು. ಆನಂತರ ಬಹುದ್ರವ್ಯ ಸಾಧ್ಯವಾದ ಅತ್ಯುನ್ನತವಾದ ಪ್ರಾಸಾದವನ್ನು ಕಟ್ಟಿಸಿ ಅಲ್ಲಿ ಬಲರಾಮ, ಕೃಷ್ಣ, ಸುಭದ್ರಾದೇವಿಯರನ್ನು ಸ್ಥಾಪಿಸಿ ವಿಧಿವತ್ತಾಗಿ ಪಂಚತೀರ್ಥವನ್ನೂ ನಿರ್ಮಾಣಮಾಡಿಸಿದನು.

ಸ್ನಾನಂ ದಾನಂ ಜಪಂ ಹೋಮಂ ದೇವತಾಪ್ರೇಕ್ಷಣಂ ತಥಾ ।
ಭಕ್ತ್ಯಾ ಽಽರಾಧ್ಯ ವಿಧಿವತ್ಪ್ರತ್ಯಹಂ ಪುರುಷೋತ್ತಮಂ ।
ಪ್ರಸಾದಾದ್ದೇವದೇವಸ್ಯ ತತೋ ಮೋಕ್ಷಮವಾಪ್ನುಯಾತ್ ॥ ೫೨ ॥

ಮೋಹಿನ್ಯುವಾಚ

ತಸ್ಮಿನ್ ಕ್ಷೇತ್ರೇ ವರೇ ಪುಣ್ಯೇ ವೈಷ್ಣವೇ ಪುರುಷೋತ್ತಮೇ ॥ ೫೩ ॥

ಕಿಂ ತತ್ರ ಪ್ರತಿಮಾ ಪೂರ್ವಂ ಸುಸ್ಥಿತಾ ವೈಷ್ಣವೀ ಪ್ರಭೋ ।
ಯೇನಾಸೌ ನೃಪತಿಸ್ತತ್ರ ಗತ್ವಾ ಸಬಲವಾಹನಃ ॥ ೫೪ ॥

ಸ್ಥಾಪಯಾಮಾಸ ಕೃಷ್ಣಂ ಚ ರಾಮಂ ಭದ್ರಾಂ ಶುಭಪ್ರದಾಂ ।
ಸಂಶಯೋಽಸ್ತಿ ಮಹಾಂಸ್ತತ್ರ ವಿಸ್ಮಯಶ್ಚ ದ್ವಿಜೋತ್ತಮ ॥ ೫೫ ॥

ಶ್ರೋತುಮಿಚ್ಛಾಮಿ ತತ್ಸರ್ವಂ ಬ್ರೂಹಿ ತತ್ಕಾರಣಂ ಚ ಯತ್ ।

ವಸುರುವಾಚ

ಶೃಣುಷ್ವ ಪೂರ್ವವೃತ್ತಾಂತಂ ಕಥಾಂ ಪಾಪಪ್ರಣಾಶಿನೀಂ ॥ ೫೬ ॥

---

೫೨. ಬಳಿಕ ಮಹೀಪತಿಯು ಅಲ್ಲಿ ಪ್ರತಿದಿನವೂ ಸ್ನಾನ, ದಾನ, ಜಪ, ಹೋಮ ಮತ್ತು ದೇವತಾದರ್ಶನಗಳನ್ನು ಮಾಡುತ್ತ ವಿಧಿವತ್ತಾಗಿ ಭಕ್ತಿಯಿಂದ ಪುರುಷೋತ್ತಮನನ್ನು ಆರಾಧಿಸಿ ದೇವದೇವನ ಅನುಗ್ರಹದಿಂದ ಮೋಕ್ಷವನ್ನು ಹೊಂದಿದನು.

೫೩-೫೬. ಮೋಹಿನಿಯು ಹೇಳಿದಳು :—ಸ್ವಾಮಿಯೇ ! ಉತ್ತಮವೂ ಪುಣ್ಯಕರವೂ ಆದ ಪುರುಷೋತ್ತಮವೆಂಬ ವೈಷ್ಣವಕ್ಷೇತ್ರದಲ್ಲಿ ಇಂದ್ರದ್ಯುಮ್ನ ರಾಜನು ಹೋದುದಕ್ಕಿಂತ ಮುಂಚೆ ವಿಷ್ಣುಪ್ರತಿಮೆ ಇರಲಿಲ್ಲವೇನು ? ದೊರೆಯು ಸೈನ್ಯವಾಹನಾದಿಗಳ ಸಹಿತವಾಗಿ ಅಲ್ಲಿಗೆಹೋಗಿ ಕೃಷ್ಣ, ಬಲರಾಮ ಮತ್ತು ಸುಭದ್ರೆಯರ ಮಂಗಳವಿಗ್ರಹಗಳನ್ನು ಏತಕ್ಕೋಸ್ಕರ ಪ್ರತಿಷ್ಠೆಮಾಡಿಸಿದನು ? ದ್ವಿಜೋತ್ತಮನೇ ! ಆವಿಷಯದಲ್ಲಿ ನನಗೆ ಮಹಾಸಂಶಯವೂ ಆಶ್ಚರ್ಯವೂ ಉಂಟಾಗಿದೆ. ಅವೆಲ್ಲವನ್ನೂ ತಿಳಿಯಬೇಕೆಂದು ಬಯಕೆಯುಂಟಾಗಿದೆ. ಅದಕ್ಕೆ ಕಾರಣವೇನೆಂಬುದನ್ನು ಹೇಳು ಎಂಬುದಾಗಿ ಮೋಹಿನಿಯು ವಸುವನ್ನು ಕೇಳಿದಳು.

ಪ್ರವಕ್ಷ್ಯಾಮಿ ಸಮಾಸೇನ ಶ್ರಿಯಾ ಪೃಷ್ಟಂ ಚ ಯತ್ಪುರಾ |
ಸುಮೇರೋಃ ಕಾಂಚನೇ ಶೃಂಗೇ ಸರ್ವಾಶ್ಚರ್ಯಸಮನ್ವಿತೇ || ೫೭ ||

ತತ್ರ ಸ್ಥಿತಂ ಜಗನ್ನಾಥಂ ಜಗತ್ಸ್ರಷ್ಟಾರಮವ್ಯಯಂ |
ಪ್ರಣಮ್ಯ ಶಿರಸಾ ದೇವೀ ಲೋಕಾನಾಂ ಹಿತಕಾಮ್ಯಯಾ || ೫೮ ||

ಪಪ್ರಚ್ಛೇದಂ ಮಹಾಪ್ರಶ್ನಂ ಭೂಮೌ ಸ್ಥಾನಮನುತ್ತಮಂ |

ಶ್ರೀರುವಾಚ

ಬ್ರೂಹಿ ತ್ವಂ ಸರ್ವಲೋಕೇಶ ಸಂಶಯಂ ಮೇ ಹೃದಿ ಸ್ಥಿತಂ || ೫೯ ||

ಮರ್ತ್ಯಲೋಕೇ ಮಹಾಶ್ಚರ್ಯೇ ಭೂಮೌ ಕರ್ಮಸುದುರ್ಲಭೇ |
ಲೋಭಮೋಹಮಹಾಗ್ರಾಹೇ ಕಾಮಕ್ರೋಧಮಹಾರ್ಣವೇ || ೬೦ ||

ಯೇನ ಮುಚ್ಯತ ಆತ್ಮೇಶ ದುರ್ಗಸಂಸಾರಸಾಗರಾತ್ |
ತ್ವಾಮೃತೇ ನಾಸ್ತಿ ಲೋಕೇಽಸ್ಮಿನ್ವಕ್ತಾ ಸಂಶಯನಿರ್ಣಯೇ || ೬೧ ||

---

೫೬-೫೮. ವಸುವು ಹೇಳಿದನು :—ಪೂರ್ವದಲ್ಲಿ ನಡೆದ ಪಾಪನಾಶಕವಾದ ಈ ಕಥೆಯನ್ನು ಸಂಕ್ಷೇಪವಾಗಿ ಹೇಳುವೆನು ಕೇಳು. ಇದೇ ವಿಷಯವನ್ನು ಪೂರ್ವದಲ್ಲಿ ಶ್ರೀದೇವಿಯು ಪ್ರಶ್ನೆ ಮಾಡಿರುವಳು. ಆ ಸಂವಾದವನ್ನು ವಿವರಿಸುವೆನು. ಸಕಲಾಶ್ಚರ್ಯಗಳಿಂದ ಯುಕ್ತನಾದ, ಕಾಂಚನಮಯವಾದ, ಮೇರು ಶಿಖರದಲ್ಲಿ ಕುಳಿತಿದ್ದ ಜಗತ್ಸೃಷ್ಟಿಕರ್ತನಾದ ನಾಶವಿಲ್ಲದ ಜಗನ್ನಾಥನಿಗೆ ತಲೆಬಾಗಿ ನಮಸ್ಕರಿಸಿ ಶ್ರೀದೇವಿಯು ಲೋಕಹಿತಕ್ಕಾಗಿ ಭೂಮಂಡಲದಲ್ಲಿ ಉತ್ಕೃಷ್ಟವಾದ ಈ ಸ್ಥಳದವಿಷಯದಲ್ಲಿ ದೊಡ್ಡಪ್ರಶ್ನೆಯನ್ನು ಮಾಡಿದಳು.

೫೯-೬೧. ಶ್ರೀದೇವಿಯು ಹೇಳಿದಳು:—ಸಕಲಲೋಕನಾಥನೇ! ನನ್ನ ಮನಸ್ಸಿನಲ್ಲಿ ನಾಟಿರುವ ಈ ಸಂಶಯವನ್ನು ನೀನು ಪರಿಹರಿಸು. ಮಹಾಶ್ಚರ್ಯಕರವು, ಕರ್ಮಗಳಿಂದ ದುರ್ಲಭವು, ಲೋಭ ಮೋಹಗಳೆಂಬ ಮಹಾಸರ್ಪಗಳನ್ನೊಳಗೊಂಡ ಕಾಮಕ್ರೋಧವೆಂಬ ಮಹಾಸಾಗರವುಳ್ಳುದೂ ಆಗಿರುವ ಈ ಮನುಷ್ಯಲೋಕದಲ್ಲಿ ಆತ್ಮನು ದಾಟಲಶಕ್ಯವಾದ ಸಂಸಾರವೆಂಬ ಸಮುದ್ರವನ್ನು ಹೇಗೆ ದಾಟಿಯಾನು ?

ಶ್ರುತ್ವೈವಂ ವಚನಂ ತಸ್ಯಾ ದೇವದೇವೋ ಜನಾರ್ದನಃ |
ಪ್ರೋವಾಚ ಪರಯಾ ಪ್ರೀತ್ಯಾ ಪರಂ ಸಾರಾಮೃತೋಪಮಂ || ೬೨ ||

ಸರ್ವೋಪಾಯಂ ಸುಸಾಧ್ಯಂ ಚ ನಿರಾಯಾಸಂ ಮಹಾಫಲಂ |

ಶ್ರೀಭಗವಾನುವಾಚ

ಅಸ್ತೇ ತೀರ್ಥವರಂ ದೇವಿ ವಿಖ್ಯಾತಂ ಪುರುಷೋತ್ತಮಂ || ೬೩ ||

ನ ತೇನ ಸದೃಶಂ ಕಿಂಚಿತ್ತ್ರಿಷು ಲೋಕೇಷು ವಿದ್ಯತೇ |
ಕೀರ್ತನಾದ್ಯಸ್ಯ ದೇವೇಶಿ ಮುಚ್ಯತೇ ಸರ್ವಪಾತಕೈಃ || ೬೪ ||

ನ ವಿಜ್ಞಾತೋ ನರೈಃ ಸರ್ವೈರ್ನ ದೈತ್ಯೈರ್ನ ಚ ದಾನವೈಃ |
ಮರೀಚ್ಯಾದ್ಯೈರ್ಮುನಿವರ್ಯೈರ್ದರ್ಶಿತೋಽಯಂ ವರಾನನೇ || ೬೫ ||

---

ಸ್ವಾಮಿಯೇ! ಇಂತಹ ಸಂದಿಗ್ಧವಿಷಯಗಳಲ್ಲಿ ನಿರ್ಣಯವನ್ನು ಹೇಳಲು ಸಮರ್ಥರು ಈ ಲೋಕದಲ್ಲಿ ನಿನ್ನ ಹೊರತು ಬೇರೆಯಾರೂ ಇಲ್ಲ ಆದಕಾರಣ ನನ್ನ ಸಂಶಯವನ್ನು ಪರಿಹರಿಸು ಎಂದು ಶ್ರೀದೇವಿಯು ಕೇಳಿದಳು.

೬೨. ದೇವೋತ್ತಮನಾದ ಜನಾರ್ದನನು ಆ ದೇವಿಯಮಾತನ್ನು ಕೇಳಿ ಪರಮಾದರದಿಂದ ಸಾರವು, ಅಮೃತಕ್ಕೆ ಸಮಾನವು, ಸಕಲಕ್ಕೂ ಉಪಾಯವು, ಸುಲಭಸಾಧ್ಯವು, ಆಯಾಸರಹಿತವು, ಮಹಾಫಲದಾಯಕವೂ ಆದ ಉತ್ತಮ ವಿಷಯವನ್ನು ಹೇಳತೊಡಗಿದನು.

೬೩-೬೪. ಭಗವಂತನು ಹೇಳಿದನು :—ದೇವಿಯೇ! ಪುರುಷೋತ್ತಮವೆಂದು ವಿಖ್ಯಾತವಾದ ಉತ್ತಮತೀರ್ಥವಿದೆ. ಮೂರುಲೋಕಗಳಲ್ಲಿಯೂ ಅದಕ್ಕೆ ಸಮಾನವಾದುದಿಲ್ಲ. ಅದರ ನಾಮಸಂಕೀರ್ತನೆ ಮಾಡುವುದರಿಂದಲೇ ಮನುಷ್ಯನು ಸಕಲಪಾಪಗಳಿಂದಲೂ ಮುಕ್ತನಾಗುವನು.

೬೫-೬೬. ಸುಂದರವದನಳೇ! ಮನುಷ್ಯರು, ದೈತ್ಯರು ಮತ್ತು ದಾನವರು ಇವರೆಲ್ಲರೂ ಈ ಪುರುಷೋತ್ತಮತೀರ್ಥದ ಮಹಿಮೆಯನ್ನು ತಿಳಿಯಲಾರರು. ದಕ್ಷಿಣಸಮುದ್ರದ ತೀರದಲ್ಲಿ ವಟವೃಕ್ಷವಿರುವೆಡೆಯಲ್ಲಿ ಮರೀಚಿ ಮುಂತಾದ ಮುನಿವರ್ಯರಿಂದ ಈ ಪುರುಷೋತ್ತಮ ತೀರ್ಥವು ತೋರಿಸಲ್ಪಟ್ಟಿದೆ.

ದಕ್ಷಿಣಸ್ಯೋದಧೇಸ್ತೀರೇ ನ್ಯಗ್ರೋಧೋ ಯತ್ರ ತಿಷ್ಠತಿ ।
ಯಸ್ತು ಕಲ್ಪೇ ಸಮುತ್ಪನ್ನೇ ಮಹದುಲ್ಕಾನಿಬರ್ಹಣೇ ॥ ೬೬ ॥

ವಿನಾಶನೇ ವೈ ಚಾಭ್ಯೇತಿ ಸ್ವಯಂ ತತ್ರೈವ ಸಂಸ್ಥಿತಃ ।
ದೃಷ್ಟಮಾತ್ರೇ ವಟೇ ತಸ್ಮಿನ್ ಛಾಯಾಮಾಶ್ರಿತ್ಯ ಚಾಸಕೃತ್ ॥ ೬೭ ॥

ಬ್ರಹ್ಮಹತ್ಯಾ ಪ್ರಮುಚ್ಯೇತ ಪಾಪೇಷ್ವನ್ಯೇಷು ಕಾ ಕಥಾ ।
ಪ್ರದಕ್ಷಿಣಂ ಕೃತಂ ಯೈಸ್ತು ನಮಸ್ಕಾರೈಸ್ತು ಜಂತುಭಿಃ ॥ ೬೮ ॥

ಸರ್ವೇ ವಿಧೂತಪಾಪಾಸ್ತೇ ಗತಾ ವೈ ಕೇಶವಾಲಯಂ ।
ನ್ಯಗ್ರೋಧಸ್ಯೋತ್ತರೇ ಕಿಂಚಿದ್ದಕ್ಷಿಣೇ ಕೇಶವಸ್ಯ ತು ॥ ೬೯ ॥

ಪ್ರಾಸಾದೇ ತತ್ರ ತಿಷ್ಠೇತ್ತು ಪದಂ ಧರ್ಮಮಯಂ ಹಿ ತತ್ ।
ಪ್ರತಿಮಾಂ ತತ್ರ ತಾಂ ದೃಷ್ಟ್ವಾ ಸ್ವಯಂ ದೇವೇನ ನಿರ್ಮಿತಾಂ ॥ ೭೦ ॥

ಅನಾಯಾಸೇನ ವೈ ಯಾಂತಿ ಭವನಂ ಮೇ ತತೋ ನರಾಃ ।
ಗಚ್ಛನ್ನೇವ ತು ತಂ ದೃಷ್ಟ್ವಾ ಏಕದಾ ಧರ್ಮರಾಟ್ ಪ್ರಿಯಂ ॥ ೭೧ ॥

---

೬೬-೬೭ ಪ್ರಳಯವುಂಟಾದಾಗ ಮಹತ್ತರವಾದ ಪ್ರಳಯಾಗ್ನಿಜ್ವಾಲೆಯಿಂದ ಜಗತ್ತೆಲ್ಲವೂ ನಾಶವಾದಾಗಲೂ ಆ ವಟ (ಆಲದ) ವೃಕ್ಷವು ಅಲ್ಲಿಯೇ ಇದ್ದಿತು.

೬೭-೬೮. ಆ ವಟವೃಕ್ಷವನ್ನು ನೋಡಿ ಅದರ ಛಾಯೆಯನ್ನಾಶ್ರಯಿಸುವುದರಿಂದ ಅನೇಕಬಾರಿಮಾಡಿದ ಬ್ರಹ್ಮಹತ್ಯೆಗಳೂ ಸಹ ಪರಿಹಾರವಾಗುವುವು. ಇತರ ಸಣ್ಣಪಾಪಗಳು ಪರಿಹಾರವಾಗುತ್ತವೆಂದು ಹೇಳುವುದೇನು ?

೬೮-೬೯. ಆ ವಟವೃಕ್ಷಕ್ಕೆ ಪ್ರದಕ್ಷಿಣೆ ನಮಸ್ಕಾರಮಾಡುವ ಪ್ರಾಣಿಗಳೆಲ್ಲರೂ ತಮ್ಮಪಾಪಗಳನ್ನು ಪರಿಹರಿಸಿಕೊಂಡು ಕೇಶವಮಂದಿರಕ್ಕೆ ಹೋಗುವರು.

೬೯-೭೧. ವಟವೃಕ್ಷದ ಉತ್ತರದಲ್ಲಿ ಸ್ವಲ್ಪ ದಕ್ಷಿಣದಕಡೆ ಇರುವ ಕೇಶವನ ಪ್ರಾಸಾದದಲ್ಲಿ ವಾಸಮಾಡಬೇಕು. ಆ ಸ್ಥಾನವು ಧರ್ಮಮಯವು ಅಲ್ಲಿ ಸಾಕ್ಷಾದ್ದೇವನಿರ್ಮಿತವಾದ ಆ ಪ್ರತಿಮೆಯನ್ನು ದರ್ಶನಮಾಡಿದರೆ ಮನುಷ್ಯರು ಅನಾಯಾಸವಾಗಿ ನನ್ನಲೋಕಕ್ಕೆ ಹೋಗುವರು.

ಮುದೇತಿಕಮನುಪ್ರಾಪ್ಯ ಪ್ರಣಮ್ಯ ಶಿರಸಾಬ್ರವೀತ್ ।
ನಮಸ್ತೇ ಭಗವನ್ ದೇವ ಲೋಕನಾಥಾಯ ತೇಜಸೇ ॥ ೨೨ ॥

ಕ್ಷೀರೋದವಾಸಿನಂ ದೇವಂ ಶೇಷಭೋಗೋಪಶಾಯಿನಂ ।
ವರಂ ವರೇಣ್ಯಂ ವರದಂ ಕರ್ತಾರಂ ಹ್ಯಕ್ಷಯಂ ಪ್ರಭುಂ ॥ ೨೩ ॥

ವಿಶ್ವೇಶ್ವರಮಜಂ ವಿಷ್ಣುಂ ಸರ್ವಜ್ಞಮಪರಾಜಿತಂ ।
ನೀಲೋತ್ಪಲದಲಶ್ಯಾಮಂ ಪುಂಡರೀಕನಿಭೇಕ್ಷಣಂ ॥ ೨೪ ॥

ಸರ್ವಗಂ ನಿರ್ಗುಣಂ ಶಾಂತಂ ಜಗದ್ಧಾತಾರಮವ್ಯಯಂ ।
ಸರ್ವಲೋಕವಿಧಾತಾರಂ ಲೋಕನಾಥಂ ಸುಖಾವಹಂ ॥ ೨೫ ॥

ಪುರಾಣಪುರುಷಂ ವೇದ್ಯಂ ವ್ಯಕ್ತಾವ್ಯಕ್ತಂ ಸನಾತನಂ ।
ಪುರಾಂ ಪುರಾಣಂ ಸ್ರಷ್ಟಾರಂ ಲೋಕತೀರ್ಥಂ ಜಗದ್ಗುರುಂ ॥ ೨೬ ॥

---

೨೧-೨೨. ಒಂದು ದಿನ ಧರ್ಮರಾಜನು ಹೋಗುತ್ತಿರುವಾಗ ಆ ದೇವನನ್ನು ಭಕ್ತಿಯಿಂದ ದರ್ಶನಮಾಡಿ ನನ್ನ ಬಳಿಗೆ ಬಂದು ತಲೆಬಾಗಿನಮಸ್ಕರಿಸಿ "ಷಡ್ಗುಣೈಶ್ವರ್ಯಸಂಪನ್ನನು ತೇಜೋಮಯನೂ ಆದ ದೇವನೇ! ಲೋಕನಾಥನಾದ ನಿನಗೆ ನಮಸ್ಕಾರಮಾಡುವೆನು" ಎಂದು ಹೇಳಿದನು.

೨೩-೪೦. ಕ್ಷೀರಸಾಗರಶಾಯಿಯು, ಶೇಷಪರ್ಯಂಕದಲ್ಲಿ ಮಲಗಿರುವವನು, ಉತ್ತಮನು, ಉತ್ತಮೋತ್ತಮನು, ವರದಾತನು, ಸ್ವತಂತ್ರಕರ್ತನು, ನಾಶರಹಿತನು, ಸ್ವಾಮಿಯು, ಜಗನ್ನಿಯಾಮಕನು, ಉತ್ಪತ್ತಿರಹಿತನು, ಸರ್ವಜ್ಞನು, ಯಾರಿಂದಲೂ ಪರಾಜಯವಿಲ್ಲದವನು, ಕನ್ನೈದಿಲೆಯದಳದಂತೆ ಶ್ಯಾಮವರ್ಣವುಳ್ಳವನು, ಪದ್ಮದಂತಿರುವ ಕಣ್ಣುಗಳುಳ್ಳವನು, ಸರ್ವವ್ಯಾಪಕನು, ಪ್ರಾಕೃತಗುಣವಿಲ್ಲದವನು, ಶಾಂತನು, ಜಗದ್ಧಾತೃವು, ವೃದ್ಧಿಹ್ರಾಸಗಳಿಲ್ಲದವನು, ಸಕಲ ಲೋಕಗಳನ್ನೂ ವಿಶೇಷವಾಗಿ ಸೃಷ್ಟಿಮಾಡಿರುವವನು, ಜಗದೊಡೆಯನು, ಸುಖಕಾರಕನು, ಪುರಾಣಪುರುಷನು, ಜ್ಞಾನಿಗಮ್ಯನು, ವ್ಯಕ್ತ ಮತ್ತು ಅವ್ಯಕ್ತರೂಪಗಳುಳ್ಳವನು, ಸನಾತನನು, ಆದಿಸೃಷ್ಟಿಕರ್ತನು, ಲೋಕಪಾವನನು, ಜಗದ್ಗುರುವು, ವಕ್ಷಃಸ್ಥಲದಲ್ಲಿ ಶ್ರೀವತ್ಸವೆಂಬ ಮಚ್ಚೆವುಳ್ಳವನು, ವನಮಾಲೆಯಿಂದಲಂ

ಶ್ರೀವತ್ಸವಕ್ಷಸಂ ಯುಕ್ತಂ ವನಮಾಲಾವಿಭೂಷಿತಂ ।
ಪೀತವಸ್ತ್ರಂ ಚತುರ್ಬಾಹುಂ ಶಂಖಚಕ್ರಗದಾಧರಂ ॥ ೭೭ ॥

ಹಾರಕೇಯೂರಸಂಯುಕ್ತಂ ಮುಕುಟಾಂಗದಧಾರಿಣಂ ।
ಸರ್ವಲಕ್ಷಣಸಂಯುಕ್ತಂ ಸರ್ವೇಂದ್ರಿಯವಿವರ್ಜಿತಂ ॥ ೭೮ ॥

ಕೂಟಸ್ಥಮಚಲಂ ಸೂಕ್ಷ್ಮಂ ಜ್ಯೋತೀರೂಪಂ ಸನಾತನಂ ।
ಭಾವಾಭಾವವಿನಿರ್ಮುಕ್ತಂ ವ್ಯಾಪಿನಂ ಪ್ರಕೃತೇಃ ಪರಂ ॥ ೭೯ ॥

ತೇ ನಮಸ್ತೇ ಜಗನ್ನಾಥ ಭಾಸ್ವರಂ ಸುಖದಂ ಪ್ರಭುಂ ।
ಇತ್ಯೇವಂ ಧರ್ಮರಾಜೇನ ಸ್ತುತೋ ದೇವೋ ಜಗತ್ಪ್ರಭುಃ ॥ ೮೦ ॥

ಉವಾಚ ದೇವೇಶಮಹೋ ಸರ್ವದೇವಮಯೋ ಹ್ಯಸಿ ।
ಕಿಮರ್ಥಂ ತ್ವಂ ಸ್ತುಷೇ ನಿತ್ಯಂ ಸಂಕ್ಷೇಪಾದ್ಬ್ರೂಹಿ ತನ್ಮಮ ॥ ೮೧ ॥

ಯಮ ಉವಾಚ

ಅಸ್ಮಿನ್ನಾಯತನೇ ಪುಣ್ಯೇ ವಿಖ್ಯಾತೇ ಪುರುಷೋತ್ತಮೇ ।
ಇಂದ್ರನೀಲಮಯೋತ್ಕೃಷ್ಟಾ ಪ್ರತಿಮಾ ಸಾರ್ವಕಾಮಿಕೀ ॥ ೮೨ ॥

---

ಕೃತನು, ಪೀತಾಂಬರಧಾರಿಯು, ನಾಲ್ಕುಬಾಹುಗಳುಳ್ಳವನು, ಶಂಖ ಚಕ್ರ ಗದೆಗಳನ್ನು ಧರಿಸಿರುವವನು, ಹಾರಕೇಯೂರಯುಕ್ತನು, ಕಿರೀಟಾಭರಣಧಾರಿಯು, ಸಕಲಲಕ್ಷಣಸಂಪನ್ನನು, ಪ್ರಕೃತಿನಿರ್ಮಿತವಾದ ಯಾವ ಇಂದ್ರಿಯವೂ ಇಲ್ಲದವನು, ನಿರ್ವಿಕಾರನು, ಅಚಲನು, ಸೂಕ್ಷ್ಮನು, ಜ್ಯೋತಿಸ್ಸ್ವರೂಪನು, ಭಾವಾಭಾವ ವಿನಿರ್ಮುಕ್ತನು, ಸರ್ವವ್ಯಾಪಿಯು, ಪ್ರಕೃತಿಗಿಂತಲೂ ಉತ್ತಮನು, ಭಾಸ್ವರರೂಪನು, ಸುಖಪ್ರದನು ಮತ್ತು ಸ್ವಾಮಿಯೂ ಆದ ಜಗನ್ನಾಥನೇ! ನಿನಗೆ ನಮಸ್ಕಾರ! ಎಂಬುದಾಗಿ ಧರ್ಮರಾಜನು ಸ್ವಾಮಿಯನ್ನು ಸ್ತೋತ್ರಮಾಡಿದನು.

೮೧. ಧರ್ಮರಾಜನ ಈ ಸ್ತೋತ್ರವನ್ನು ಕೇಳಿ ಜಗನ್ನಾಥನು "ಯಮರಾಜನೇ! ನೀನು ಸರ್ವದೇವಮಯನಾಗಿರುವೆ ಏತಕ್ಕೋಸ್ಕರ ನನ್ನನ್ನು ಈ ರೀತಿ ಸ್ತುತಿಸುವೆ? ಸಂಕ್ಷೇಪವಾಗಿ ಹೇಳು" ಎಂದು ಕೇಳಿದನು.

೮೨. ಪುರುಷೋತ್ತಮವೆಂದು ವಿಖ್ಯಾತವಾದ ಈ ಪುಣ್ಯಾಯತನದಲ್ಲಿ ಸಕಲೇಷ್ಟಾರ್ಥಪ್ರದವಾದ ಇಂದ್ರನೀಲಮಯಪ್ರತಿಮೆಯು ಪ್ರತಿಷ್ಠಿತವಾಗಿದೆ.

ಗಾಂ ದೃಷ್ಟ್ವಾ ಪುಂಡರೀಕಾಕ್ಷ ಭಾವೇನೈಕೇನ ಶ್ರದ್ಧಯಾ ।
ಶ್ವೇತಾಖ್ಯಂ ಭುವನಂ ಯಾಂತಿ ನಿಷ್ಕಾಮಾಶ್ಚೈವ ಮಾನವಾಃ ॥ ೮೩ ॥

ತತಃ ಸಾ ಪ್ರತಿಮಾ ದೇವಿ ವಲ್ಲೀಭಿರ್ದೀಪಿತಾ ತಥಾ ।
ಯಥಾ ತತ್ರ ನ ಪಶ್ಯಂತಿ ಮನುಜಾಃ ಸರ್ಗಕಾಂಕ್ಷಿಣಃ ॥ ೮೪ ॥

ಪ್ರಚ್ಛಾದ್ಯ ವಲ್ಲಿಕೈರ್ದೇವಿ ಜಾತರೂಪಪರಿಚ್ಛದೈಃ ।
ಯಮಂ ಪ್ರಸ್ಥಾಪಯಾಮಾಸ ತಾಂ ಪುರೀಂ ದಕ್ಷಿಣಾಂ ದಿಶಂ ॥ ೮೫ ॥

ಲಗ್ನಾಯಾಂ ಪ್ರತಿಮಾಯಾಂ ತು ಇಂದ್ರನೀಲಸ್ಯ ವೈ ತದಾ ।
ತಸ್ಮಿನ್ ಕ್ಷೇತ್ರವರೇ ಪುಣ್ಯೇ ವಿಖ್ಯಾತೇ ಪುರುಷೋತ್ತಮೇ ॥ ೮೬ ॥

ಯತ್ಕೃತಂ ಕರ್ಮ ತತ್ರತ್ಯೈರ್ದೇವದೇವೋ ಜನಾರ್ದನಃ ।
ತತ್ಸರ್ವಂ ಕಥಯಾಮಾಸ ಸ ತಸ್ಯೈ ಭಗವಾನ್ ಪುರಾ ॥ ೮೭ ॥

---

೮೩. ಪುಂಡರೀಕಾಕ್ಷನೇ! ಆ ವಿಗ್ರಹವನ್ನು ಶ್ರದ್ಧಾಯುಕ್ತವಾದ ಭಕ್ತಿ ಭಾವದಿಂದ ದರ್ಶನಮಾಡಿದರೆ ನಿಷ್ಕಾಮರಾದ ಮಾನವರು ಶ್ವೇತದ್ವೀಪವೆಂಬ ವಿಷ್ಣುಭವನಕ್ಕೆ ಹೋಗುವರು ಎಂದು ಯಮನು ಹೇಳಿದನು.

೮೪. ದೇವಿಯೇ! ಆದಕಾರಣ ಸ್ವರ್ಗವನ್ನು ಬಯಸುವ ಮನುಷ್ಯರಿಗೆ ಕಾಣದಂತೆ ಆ ಪ್ರತಿಮೆಯು ಬಳ್ಳಿಗಳಿಂದ ಆಚ್ಛಾದಿತವಾಗಿದೆ.

೮೫. ದೇವಿಯೇ! ಸುವರ್ಣಮಯವಾದ ಪರ್ಣಗಳುಳ್ಳ ಬಳ್ಳಿಗಳಿಂದ ಅದನ್ನು ಮುಚ್ಚಿ, ಯಮನನ್ನು ದಕ್ಷಿಣದಿಕ್ಕಿನಲ್ಲಿರು ಅವನ ಪಟ್ಟಣಕ್ಕೆ ಕಳುಹಿಸಿದನು.

೮೬-೮೭. ದೇವದೇವನಾದ ಜನಾರ್ದನನು ಪುರುಷೋತ್ತಮವೆಂದು ಪ್ರಸಿದ್ಧವಾದ ಆ ಉತ್ಕೃಷ್ಟಪುಣ್ಯಕ್ಷೇತ್ರದಲ್ಲಿ ಇಂದ್ರನೀಲಪ್ರತಿಮೆಯು ಪ್ರತಿಷ್ಠಿತವಾದಮೇಲೆ ಅಲ್ಲಿ ನೆರದಿದ್ದವರು ಮಾಡಿದ ವ್ಯಾಪಾರವನ್ನೆಲ್ಲಾ ಪೂರ್ವದಲ್ಲಿ ಶ್ರೀದೇವಿಗೆ ಹೇಳಿದನು.

ಇಂದ್ರದ್ಯುಮ್ನಸ್ಯ ಗಮನಂ ಕ್ಷೇತ್ರಸಂದರ್ಶನಂ ತಥಾ ।
ಕ್ಷೇತ್ರಸ್ಯ ವರ್ಣನಂ ಚೈವ ಪ್ರೃಷ್ಟಿಂ ತಸ್ಯ ಚ ಮೋಹಿನಿ ॥ ೮೮ ॥

ದರ್ಶನಂ ಬಲದೇವಸ್ಯ ಕೃಷ್ಣಸ್ಯ ಚ ವಿಶೇಷತಃ ।
ಸುಭದ್ರಾಯಾಶ್ಚ ತತ್ರೈವ ಮಾಹಾತ್ಮ್ಯಂ ಚೈವ ಸರ್ವಶಃ ॥ ೮೯ ॥

ದರ್ಶನಂ ನರಸಿಂಹಸ್ಯ ಪ್ರೃಷ್ಟಿಸಂಕೀರ್ತನಂ ತಥಾ ।
ಅನಂತವಾಸುದೇವಸ್ಯ ದರ್ಶನಂ ಗುಣಕೀರ್ತನಂ ॥ ೯೦ ॥

ಶ್ವೇತಮಾಧವಮಾಹಾತ್ಮ್ಯಂ ಸ್ವರ್ಗದ್ವಾರಸ್ಯ ವರ್ಣನಂ ।
ಉದಧೇರ್ದರ್ಶನಂ ಚೈವ ಸ್ನಾನಂ ತರ್ಪಣಮೇವ ಚ ॥ ೯೧ ॥

ಸಮುದ್ರಸ್ನಾನಮಾಹಾತ್ಮ್ಯಮಿಂದ್ರದ್ಯುಮ್ನಸ್ಯ ಚಾಪಿ ವೈ ।
ಪಂಚತೀರ್ಥಫಲಂ ಚೈವ ಮಹಾಜ್ಯೈಷ್ಠ್ಯಾಂ ತಥೈವ ಚ ॥ ೯೨ ॥

---

೮೮-೯೩. ಮೋಹಿನೀ ! ಪೂರ್ವದಲ್ಲಿ ಇಂದ್ರದ್ಯುಮ್ನನು ಹೋಗಿ ಕ್ಷೇತ್ರದರ್ಶನಮಾಡಿದುದು, ಅವನು ಮಾಡಿದ ಕ್ಷೇತ್ರವರ್ಣನೆ, ಅದರಫಲ, ಅಲ್ಲಿಯೇ ಬಲದೇವ, ಕೃಷ್ಣ, ಸುಭದ್ರಾದೇವಿಯರ ದರ್ಶನ, ಅದರ ಮಹಿಮೆ, ಅಲ್ಲಿರುವ ನರಸಿಂಹದರ್ಶನ, ಫಲಸಂಕೀರ್ತನೆ, ಅನಂತವಾಸುದೇವ ದರ್ಶನ, ಅವನ ಗುಣಸಂಕೀರ್ತನೆ, ಶ್ವೇತಮಾಧವ ಮಹಾತ್ಮ್ಯೆ, ಸ್ವರ್ಗದ್ವಾರದ ವರ್ಣನೆ, ಸಮುದ್ರದರ್ಶನ, ಸ್ನಾನ, ತರ್ಪಣ, ಸಮುದ್ರಸ್ನಾನದ ಮಾಹಾತ್ಮ್ಯೆ, ಇಂದ್ರದ್ಯುಮ್ನಕೃತ ಪಂಚತೀರ್ಥಫಲ, ಜ್ಯೇಷ್ಠಮಾಸದ ಪೌರ್ಣಿಮೆಯಲ್ಲಿ ತೀರ್ಥಸ್ನಾನ, ಕೃಷ್ಣಬಲರಾಮರ ದರ್ಶನ, ಸರ್ವಯಾತ್ರಾಫಲ, ಕ್ಷೇತ್ರ ಮತ್ತು ವಿಷ್ಣುಲೋಕಗಳ

ಸ್ನಾನಂ ಕೃಷ್ಣಸ್ಯ ಹಲಿನಃ ಸರ್ವಯಾತ್ರಾಫಲಂ ತಥಾ ।
ವರ್ಣನಂ ವಿಷ್ಣುಲೋಕಸ್ಯ ಕ್ಷೇತ್ರಸ್ಯ ಚ ಪುನಃ ಸ್ವಯಂ ।
ಪೂರ್ವಂ ಕಥಿತವಾಂಸ್ತಥ್ಯಂ ತಸ್ಯೈ ಸ ಪುರುಷೋತ್ತಮಃ ॥ ೯೩ ॥

ಇತಿ ಶ್ರೀನಾರದೀಯಮಹಾಪುರಾಣೋತ್ತರಭಾಗೇ ಮೋಹಿನೀ
ವಸುಸಂವಾದೇ ಪುರುಷೋತ್ತಮಮಾಹಾತ್ಮ್ಯೇ
ದ್ವಿಪಂಚಾಶತ್ತಮೋಽಧ್ಯಾಯಃ

——

ವರ್ಣನೆ, ಇವೆಲ್ಲವನ್ನೂ ಪುರುಷೋತ್ತಮನು ಯಥಾಸ್ಥಿತವಾಗಿ ಶ್ರೀದೇವಿಗೆ ಹೇಳಿರುವನು.

ಇಂತು ಶ್ರೀನಾರದೀಯಪುರಾಣೋತ್ತರಭಾಗದಲ್ಲಿ ವಸು ಮೋಹಿನೀ
ಸಂವಾದದೊಳು ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯಯೆಂಬ
ಐವತ್ತೆರಡನೆಯ ಅಧ್ಯಾಯವು ಮುಗಿದುದು.



# ತ್ರಿಪಂಚಾಶತ್ತಮೋಽಧ್ಯಾಯಃ

——

ಮೋಹಿನ್ಯುವಾಚ

ಬ್ರೂಹಿ ಮೇ ಮುನಿಶಾರ್ದೂಲ ಯತ್ಪೃಚ್ಛಾಮಿ ಪುರಾತನಂ ।
ಯಥಾ ತಾಃ ಪ್ರತಿಮಾಃ ಪೂರ್ವಮಿಂದ್ರದ್ಯುಮ್ನೇನ ನಿರ್ಮಿತಾಃ ॥ ೧ ॥

ಕೇನ ಚೈವ ಪ್ರಕಾರೇಣ ತುಷ್ಟಸ್ತಸ್ಮೈ ಸ ಮಾಧವಃ ।
ತತ್ಸರ್ವಂ ವದ ಮೇ ವಿಪ್ರ ಶ್ರೋತುಂ ಕೌತೂಹಲಂ ಮಮ ॥ ೨ ॥

ವಸುರುವಾಚ

ಶೃಣುಷ್ವ ಚಾರುನಯನೇ ಪುರಾಣಂ ವೇದಸಂಮಿತಂ ।
ಕಥಯಾಮಿ ಪುರಾವೃತ್ತಂ ಪ್ರತಿಮಾನಾಂ ಚ ಸಂಭವಂ ॥ ೩ ॥

---

## ಐವತ್ತುಮೂರನೆಯ ಅಧ್ಯಾಯ

೧-೨. ಮೋಹಿನಿಯು ಹೇಳಿದಳು:—ಮುನಿವರ್ಯನೇ! ಪೂರ್ವವೃತ್ತಾಂತವನ್ನು ಕೇಳುವೆನು; ನನಗೆ ಅದನ್ನು ವಿವರಿಸಿ ಹೇಳು. ಇಂದ್ರದ್ಯುಮ್ನನು ಆ ಪ್ರತಿಮೆಗಳನ್ನು ಹೇಗೆ ಮಾಡಿದನು? ಮಾಧವನು ಅವನ ವಿಷಯದಲ್ಲಿ ಹೇಗೆ ಸಂತುಷ್ಟನಾದನು? ಅವೆಲ್ಲವನ್ನೂ ತಿಳಿದುಕೊಳ್ಳಬೇಕೆಂದು ಕುತೂಹಲವುಂಟಾಗಿದೆ. ಆದಕಾರಣ ಅವೆಲ್ಲವನ್ನೂ ನನಗೆ ಹೇಳು.

೩. ವಸುವು ಹೇಳಿದನು:—ಸುಂದರನಯನಳಾದ ಮೋಹಿನೀ! ವೇದಸದೃಶವಾದ ಪುರಾಣವನ್ನೂ, ಪೂರ್ವದಲ್ಲಿ ನಡೆದ ಪ್ರತಿಮೆಗಳ ನಿರ್ಮಾಣವನ್ನೂ ಸಹ ಹೇಳುವೆನು ಕೇಳು!

ಪ್ರವೃತ್ತೇ ಚ ಮಹಾಯಜ್ಞೇ ಪ್ರಾಸಾದೇ ಚೈವ ನಿರ್ಮಿತೇ ।
ಚಿಂತಾ ತಸ್ಯ ಬಭೂವಾಥ ಪ್ರತಿಮಾರ್ಥಮಹರ್ನಿಶಂ ॥ ೪ ॥

ಕೇನೋಪಾಯೇನ ದೇವೇಶಂ ಸರ್ವಲೋಕವಿಭಾವನಂ ।
ಸರ್ಗಸ್ಥಿತ್ಯಂತಕರ್ತಾರಂ ಪಶ್ಯಾಮಿ ಪುರುಷೋತ್ತಮಂ ॥ ೫ ॥

ಚಿಂತಾವಿಷ್ಟೋ ನರೇಂದ್ರಸ್ತು ನೈವಂ ಶೇತೇ ದಿವಾನಿಶಂ ।
ನ ಭುಂಕ್ತೇ ವಿವಿಧಾನ್ ಭೋಗಾನ್ನ ವಸ್ತ್ರಾಣಾಂ ಪ್ರಸಾಧನಂ ॥ ೬ ॥

ಶಿಲಜಾ ದಾರುಜಾ ವಾಪಿ ಧಾತುಜಾ ವಾ ಮಹೀತಲೇ ।
ವಿಷ್ಣೋರ್ಯೋಗ್ಯಾಸ್ತು ಪ್ರತಿಮಾಃ ಸರ್ವಲಕ್ಷಣಲಕ್ಷಿತಾಃ ॥ ೭ ॥

ಏತ್ರೈರೇವ ತ್ರಯಾಣಾಂ ತು ದಯಿತಂ ಯತ್ಸುರಾರ್ಚಿತಂ ।
ಸ್ಥಾಪಿತೇ ಪ್ರೀತಿಮಭ್ಯೇತಿ ಇತಿ ಚಿಂತಾಪರೋಽಭವತ್ ॥ ೮ ॥

---

೪-೫. ಮಹಾಯಜ್ಞವು ಪ್ರಸಕ್ತವಾಗಿ ಪ್ರಾಸಾದವನ್ನು ನಿರ್ಮಾಣ ಮಾಡಿದ ಮೇಲೆ ಆ ಇಂದ್ರದ್ಯುಮ್ನನಿಗೆ ಸಕಲ ಲೋಕನಿಯಾಮಕನು, ಸೃಷ್ಟಿ ಸ್ಥಿತಿಸಂಹಾರಕರ್ತನೂ ಆದ ಪುರುಷೋತ್ತಮನು ದೇವೇಶನನ್ನು ಹೇಗೆ ನೋಡಿಯೇನು ಎಂಬುದಾಗಿ ಪ್ರತಿಮೆಗೋಸ್ಕರ ಹಗಲಿರಳೂ ಯೋಚನೆಯುಂಟಾಯಿತು.

೬. ಹಾಗೆ ಚಿಂತಾಪರನಾದ ನರೇಂದ್ರನು ಭೋಜನಮಾಡುತ್ತಿರಲಿಲ್ಲ. ನಾನಾವಿಧ ಭೋಗಗಳನ್ನನುಭವಿಸುತ್ತಿರಲಿಲ್ಲ. ಒಳ್ಳೆಯ ಬಟ್ಟೆಗಳನ್ನು ಉಡುತ್ತಿರಲಿಲ್ಲ. ಯಾವಾಗಲೂ ಆ ಚಿಂತೆಯಲ್ಲಿಯೇ ಮಗ್ನನಾಗಿ ನಿದ್ರೆಯನ್ನೂ ಮಾಡದೆ ಹಗಲಿರಳೂ ಹೀಗೆ ವರ್ತಿಸುತ್ತಿದ್ದನು.

೭-೮. ಆ ರಾಜನು ಈ ಭೂತಲದಲ್ಲಿ ಕಲ್ಲು, ಮರ, ಧಾತು ಇವುಗಳ ಪೈಕಿ ಯಾವುದರಿಂದ ಸಕಲ ಲಕ್ಷಣಯುಕ್ತವಾಗಿ ವಿಷ್ಣುವಿನ ಪ್ರತಿಮೆಯನ್ನು ಮಾಡಿ ಆರಾಧಿಸುವುದು ಯೋಗ್ಯವು? ಈ ಮೂರರಲ್ಲಿ ಯಾವುದು ಹರಿಗೆ ಪ್ರಿಯವಾಗಿ ದೇವತೆಗಳಿಂದ ಪೂಜಿತವಾದುದಾಗುವುದು? ಎಂತಹುದನ್ನು ಸ್ಥಾಪಿಸಿ ಪೂಜಿಸಿದರೆ ಭಗವಂತನು ಸಂತುಷ್ಟನಾಗುವನು? ಎಂಬುದಾಗಿ ಚಿಂತಾಪರನಾದನು.

ಪಂಚರಾತ್ರವಿಧಾನೇನ ಸಂಪೂಜ್ಯ ಪುರುಷೋತ್ತಮಂ ।
ಚಿಂತಾವಿಷ್ಟೋ ಮಹೀಪಾಲಃ ಸಂಸ್ತೋತುಮುಪಚಕ್ರಮೇ ॥ ೯ ॥

ಇಂದ್ರದ್ಯುಮ್ನ ಉವಾಚ

ವಾಸುದೇವ ನಮಸ್ತೇಽಸ್ತು ನಮಸ್ತೇ ಮೋಕ್ಷಕಾರಣ ।
ತ್ರಾಹಿ ಮಾಂ ಸರ್ವಲೋಕೇಶ ಜನ್ಮಸಂಸಾರಸಾಗರಾತ್ ॥ ೧೦ ॥

ನಿರ್ಮಲಾಂಕುಶಸಂಕಾಶ ನಮಸ್ತೇ ಪುರುಷೋತ್ತಮ ।
ಸಂಕರ್ಷಣ ನಮಸ್ತೇಽಸ್ತು ತ್ರಾಹಿ ಮಾಂ ಧರಣೀಧರ ॥ ೧೧ ॥

ನಮಸ್ತೇ ಹೇಮಗರ್ಭಾಯ ನಮಸ್ತೇ ಮಕರಧ್ವಜ ।
ರತಿಕಾಂತ ನಮಸ್ತುಭ್ಯಂ ತ್ರಾಹಿ ಮಾಂ ಶಂಬರಾಂತಕ ॥ ೧೨ ॥

ನಮಸ್ತೇ ಸೂರ್ಯಸಂಕಾಶ ನಮಸ್ತೇ ಭಕ್ತವತ್ಸಲ ।
ಅನಿರುದ್ಧ ನಮಸ್ತೇಽಸ್ತು ತ್ರಾಹಿ ಮಾಂ ವರದೋ ಭವ ॥ ೧೩ ॥

---

೯. ಹೀಗೆ ಚಿಂತಾವಿಷ್ಟನಾದ ದೊರೆಯು ಪಂಚರಾತ್ರೋಕ್ತವಿಧಾನಾನುಸಾರವಾಗಿ ಪುರುಷೋತ್ತಮನನ್ನು ಪೂಜಿಸಿ ಸ್ತೋತ್ರಮಾಡಲಾರಂಭಿಸಿದನು.

೧೦. ಇಂದ್ರದ್ಯುಮ್ನನು ಹೇಳಿದನು—ವಾಸುದೇವನೇ! ನಿನಗೆ ನಮಸ್ಕಾರ! ಮೋಕ್ಷದಾಯಕನೇ! ನಿನಗೆ ನಮಸ್ಕಾರ! ಸಕಲ ಜಗದೊಡೆಯನೇ! ಜನನವೆಂಬ ಸಂಸಾರಸಮುದ್ರದಿಂದ ನನ್ನನ್ನು ಪಾರುಮಾಡು!

೧೧. ನಿರ್ಮಲವಸ್ತ್ರದಂತೆ ಶುಭ್ರನಾದ ಪುರುಷೋತ್ತಮನೇ! ನಿನಗೆ ನಮಸ್ಕಾರ! ಸಂಕರ್ಷಣನೇ! ನಿನಗೆ ನಮಸ್ಕಾರ! ಭೂಧರನೇ! ನನ್ನನ್ನು ರಕ್ಷಿಸು!

೧೨. ಹಿರಣ್ಯಗರ್ಭನಾದ ನಿನಗೆ ನಮಸ್ಕಾರ! ಮಕರಧ್ವಜನೇ! ನಿನಗೆ ನಮಸ್ಕಾರ! ರತಿವಲ್ಲಭನೇ! ನಿನಗೆ ನಮಸ್ಕಾರ! ಶಂಬರ ಶತ್ರುವೇ! ನನ್ನನ್ನು ಕಾಪಾಡು!

೧೩. ಸೂರ್ಯನಂತೆ ಹೊಳೆಯುತ್ತಿರುವವನೇ! ನಿನಗೆ ನಮಸ್ಕಾರ! ಭಕ್ತವತ್ಸಲನೇ! ನಿನಗೆ ನಮಸ್ಕಾರ! ಅನಿರುದ್ಧಾ! ನಿನಗೆ ನಮಸ್ಕಾರ! ನನ್ನನ್ನು ಪಾಲಿಸು! ನನಗೆ ವರವನ್ನೂ ಕೊಡು!

ನಮಸ್ತೇ ವಿಬುಧಾವಾಸ ನಮಸ್ತೇ ವಿಬುಧಪ್ರಿಯ ।
ನಾರಾಯಣ ನಮಸ್ತೇಽಸ್ತು ತ್ರಾಹಿ ಮಾಂ ಶರಣಾಗತಂ ॥ ೧೪ ॥

ನಮಸ್ತೇ ಬಲಿನಾಂ ಶ್ರೇಷ್ಠ ನಮಸ್ತೇ ಲಾಂಗಲಾಯುಧ ।
ನಮಸ್ತೇ ವಿಬುಧಶ್ರೇಷ್ಠ ನಮಸ್ತೇ ಕಮಲೋದ್ಭವ ॥ ೧೫ ॥

ಚತುರ್ಮುಖ ಜಗದ್ಧಾತಸ್ತ್ರಾಹಿ ಮಾಂ ಪ್ರಪಿತಾಮಹ ।
ನಮಸ್ತೇ ನೀಲಮೇಘಾಭ ನಮಸ್ತೇ ತ್ರಿದಶಾರ್ಚಿತ ॥ ೧೬ ॥

ತ್ರಾಹಿ ವಿಷ್ಣೋ ಜಗನ್ನಾಥ ಮಗ್ನಂ ಮಾಂ ಭವಸಾಗರಾತ್ ।
ಪ್ರಲಯಾನಲಸಂಕಾಶ ನಮಸ್ತೇ ದಿತಿಜಾಂತಕ ॥ ೧೭ ॥

ನರಸಿಂಹ ಮಹಾವೀರ್ಯ ತ್ರಾಹಿ ಮಾಂ ದೀಪ್ತಲೋಚನ ।
ಯಥಾ ರಸಾತಲಾಚ್ಚೋರ್ವೀ ಜಲೇ ಮಗ್ನೋದ್ಧೃತಾ ಪುರಾ ॥ ೧೮ ॥

---

೧೪. ದೇವತೆಗಳಿಗೆ ಆವಾಸಸ್ಥಾನನಾದ ಸ್ವಾಮಿಯೇ ! ನಿನಗೆ ನಮಸ್ಕಾರ ! ದೇವಪ್ರಿಯನೇ ! ನಿನಗೆ ನಮಸ್ಕಾರ ! ನಾರಾಯಣಾ ! ನಿನಗೆ ನಮಸ್ಕಾರ ! ನಿನ್ನನ್ನೇ ಶರಣುಹೊಂದಿರುವೆನು ಪಾಲಿಸು !

೧೫. ಬಲವಂತರಲ್ಲಿ ಉತ್ತಮನೇ ! ನಿನಗೆ ನಮಸ್ಕಾರ ! ನೇಗಿಲನ್ನು ಆಯುಧವಾಗಿ ಹಿಡಿದಿರುವವನೇ ! ನಿನಗೆ ನಮಸ್ಕಾರ ! ದೇವಶ್ರೇಷ್ಠನೇ ! ನಿನಗೆ ನಮಸ್ಕಾರ ! ಕಮಲೋದ್ಭವಾ ! ನಿನಗೆ ನಮಸ್ಕಾರ !

೧೬. ಈ ಲೋಕಗಳನ್ನು ಸೃಷ್ಟಿಸಿದ ಚತುರ್ಮುಖಾಂತರ್ಗತನಾದ ಪ್ರಪಿತಾಮಹನೇ ! ನನ್ನನ್ನು ರಕ್ಷಿಸು ! ನೀಲಮೇಘದೋಪಾದಿಯಲ್ಲಿ ಹೊಳೆಯುತ್ತಿರುವ ಸ್ವಾಮಿಯೇ! ನಿನಗೆ ನಮಸ್ಕಾರ! ಸುರಾರ್ಚಿತನೇ! ನಿನಗೆ ನಮಸ್ಕಾರ!

೧೭. ಪ್ರಳಯಾಗ್ನಿಸದೃಶನು, ದೈತ್ಯಸಂಹಾರಕನು, ಜಗದೊಡೆಯನೂ ಆದ ವಿಷ್ಣುದೇವನೇ ! ನಿನಗೆ ನಮಸ್ಕಾರಮಾಡುವೆನು ! ಸಂಸಾರ ಸಮುದ್ರದಲ್ಲಿ ಮುಳುಗಿರುವ ನನ್ನನ್ನು ರಕ್ಷಿಸು !

೧೮ ೧೯. ಪ್ರಕಾಶಮಾನವಾದ ಕಣ್ಣುಗಳುಳ್ಳ, ಮಹಾಪರಾಕ್ರಮಿಯಾದ ನರಸಿಂಹನೇ ! ನನ್ನನ್ನು ಪಾಲಿಸು ! ಮಹಾವರಾಹದೇವನೇ !

ತಥಾ ಮಹಾವರಾಹ ತ್ವಂ ತ್ರಾಹಿ ಮಾಂ ದುಃಖಸಾಗರಾತ್ ।
ತವಾಂಗಮೂರ್ತಯಃ ಕೃಷ್ಣ ವರದಾಃ ಸಂಸ್ತುತಾ ಮಯಾ ॥ ೧೯ ॥

ತ್ವಂಚೇಮೇ ಬಲದೇವಾದ್ಯಾಃ ಪೃಥಗ್ರೂಪೇಣ ಸಂಸ್ಥಿತಾಃ ।
ಅಂಗಾನಿ ತವ ದೇವೇಶ ಗರುಡಾದ್ಯಾಸ್ತಥಾ ಪ್ರಭೋ ॥ ೨೦ ॥

ದಿವ್ಯಾಸ್ತ್ರಾಣ್ಯಾಯುಧಾನ್ಯೇವಂ ವಾಸವಾದ್ಯಾಸ್ತಥಾಚ್ಯುತ ।
ಯೇ ಚಾನ್ಯೇ ತವ ದೇವೇಶ ಭೇದಾಃ ಪ್ರೋಕ್ತಾ ಮನೀಷಿಭಿಃ ॥ ೨೧ ॥

ತೇಽಪಿ ಸರ್ವೇ ಜಗನ್ನಾಥ ಪ್ರಸನ್ನಾಯತಲೋಚನ ।
ಯೇ ಮಾರ್ಚಿತಾಃ ಸ್ತುತಾಃ ಸರ್ವೇ ತಥಾಯಂ ಯಂ ನಮಸ್ಕೃತಾಃ ॥೨೨॥

ಪ್ರಯಚ್ಛತ ವರಂ ಮಹ್ಯಂ ಧರ್ಮಕಾಮಾರ್ಥಮೋಕ್ಷದಂ ।
ಭೇದಾಸ್ತೇ ಕೀರ್ತಿತಾ ಯೇ ತು ಹರೇ ಸಂಕರ್ಷಣಾದಯಃ ॥ ೨೩ ॥

---

ಪೂರ್ವದಲ್ಲಿ ನೀರಿನಲ್ಲಿ ಮುಳುಗಿದ್ದ ಭೂಮಿಯನ್ನು ರಸಾತಳಲೋಕದಿಂದ ನೀನು ಎತ್ತಿ ಉದ್ಧರಿಸಿದಂತೆ ದುಃಖವೆಂಬ ಸಮುದ್ರದಲ್ಲಿ ಸಿಲುಕಿ ತೊಳಲುತ್ತಿರುವ ನನ್ನನ್ನು ಉದ್ಧರಿಸಿ ಕಾಪಾಡು! ಕೃಷ್ಣನೇ! ನಿನ್ನ ಪರಿವಾರವನ್ನು ಸ್ತೋತ್ರ ಮಾಡಿರುವೆನು. ಅವರು ನನಗೆ ವರವನ್ನು ಕೊಡುವವರಾಗಲಿ!

೨೦. ಕೃಷ್ಣ! ನೀನು, ಈ ಬಲದೇವಾದಿಗಳು ಪ್ರತ್ಯೇಕರೂಪದಿಂದ ಇರುವಿರಿ! ದೇವೇಶನೇ! ಗರುಡಾದಿಗಳು ನಿನಗೆ ಅಂಗಗಳಾಗಿರುವರು.

೨೧-೨೨. ಅಚ್ಯುತಾ! ಅಂತೆಯೇ ಇಂದ್ರಾದಿಗಳು ನಿನಗೆ ದಿವ್ಯಾಸ್ತ್ರಗಳು ಮತ್ತು ಆಯುಧಸ್ಥಾನೀಯರಾಗಿರುವರು. ದೇವೇಶನೇ! ಜ್ಞಾನಿಗಳಿಂದ ಉಕ್ತವಾಗಿರುವ ಯಾವ ನಿನ್ನ ವಿಭೂತಿ ಭೇದಗಳು ನನ್ನಿಂದ ಪೂಜಿಸಲ್ಪಟ್ಟು ಸ್ತುತಿಸಲ್ಪಟ್ಟು ನಮಸ್ಕೃತವಾಗಿವೆಯೋ ಅವರೆಲ್ಲರೂ ಮತ್ತು ಪ್ರಸಾದವನ್ನು ಬೀರುತ್ತಿರುವ ವಿಶಾಲನೇತ್ರಗಳುಳ್ಳ ಜಗನ್ನಾಥನಾದ ನೀನೂ ಸಹ ಧರ್ಮಾರ್ಥಕಾಮ ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳಿಗೆ ಸಾಧನವಾದ ವರವನ್ನು ನನಗೆ ಕೊಡಿರಿ!

೨೩-೨೪. ಹರಿಯೇ! ನಿನ್ನ ವಿಭೂತಿಗಳೆಂದು ಉಕ್ತವಾಗಿರುವ ಸಂಕ

ತವ ಪೂಜಾರ್ಥಸಂಸಿದ್ಧಾಸ್ತತೆಸ್ತ್ವಯಿ ಸಮಾಶ್ರಿತಾಃ |
ನ ಭೇದಸ್ತವ ದೇವೇಶ ವಿದ್ಯತೇ ಪರಮಾರ್ಥತಃ || ೨೪ ||

ವಿವಿಧಂ ತವ ಯದ್ರೂಪಂ ಯುಕ್ತಂ ತದವಿಚಾರತಃ |
ಅದ್ವೈತಂ ತ್ವಾಂ ಕಥಂ ದ್ವೈತಂ ವಕ್ತುಂ ಶಕ್ನೋತಿ ಮಾನವಃ || ೨೫ ||

ಏಕಸ್ತ್ವಂ ಹಿ ಹರೇ ವ್ಯಾಪೀ ಚಿತ್ಸ್ವಭಾವೋ ನಿರಂಜನಃ |
ಪರಮಂ ತವ ಯದ್ರೂಪಂ ಭಾವಾಭಾವವಿವರ್ಜಿತಂ || ೨೬ ||

ನಿರ್ಲೇಪಂ ನಿರ್ಮಲಂ ಸೂಕ್ಷ್ಮಂ ಕೂಟಸ್ಥಮಚಲಂ ಧ್ರುವಂ |
ಸರ್ವೋಪಾಧಿವಿನಿರ್ಮುಕ್ತಂ ಸತ್ತಾಮಾತ್ರಂ ವ್ಯವಸ್ಥಿತಂ || ೨೭ ||

ದೇವೋಪಿ ನ ವಿಜಾನಾತಿ ಕಥಂ ಜಾನಾಮ್ಯಹಂ ವಿಭೋ |
ಅಪರಂ ತವ ಯದ್ರೂಪಂ ಪೀತವಸ್ತ್ರಂ ಚತುರ್ಭುಜಂ || ೨೮ ||

---

ರ್ಣಾದಿಗಳು ಪೂಜಾಫಲ ಸಮೃದ್ಧಿಯನ್ನು ಹೊಂದಿರುವುದರಿಂದ ನಿನ್ನಲ್ಲಿಯೇ ಆಶ್ರಿತರಾಗಿರುವರು. ದೇವೇಶನೇ! ವಾಸ್ತವಿಕವಾಗಿ ನಿನ್ನ ರೂಪಗಳಿಗೆ ಭೇದವಿಲ್ಲ.

೨೫. ನಿನ್ನ ರೂಪವು ಭಿನ್ನವೆಂಬುದು ಅವಿಚಾರ ರಮಣೀಯವು. ನೀನು ಅದ್ವಿತೀಯನು. ನಿನಗೆ ಸಮಾನ ಅಥವಾ ಅಧಿಕನಾಗಿರುವವನಾರೂ ಇಲ್ಲ. ಆದಕಾರಣ ನಿನ್ನನ್ನು ದ್ವೈತನೆಂದು ಹೇಳಲು ಮನುಷ್ಯನು ಹೇಗೆ ಶಕ್ತನಾದಾನು ?

೨೬-೨೭. ಹರಿಯೇ! ನೀನು ಒಬ್ಬನೇ ಸರ್ವವ್ಯಾಪಕನು. ಚಿನ್ಮಯನು, ನಿರ್ಲೇಪನು. ನಿನ್ನ ಉತ್ತಮರೂಪವು ಉತ್ಪತ್ತಿ ನಾಶರಹಿತವು. ಕರ್ಮಲೇಪ ವಿಲ್ಲದುದು, ನಿರ್ಮಲ, ಸೂಕ್ಷ್ಮ, ನಿರ್ವಿಕಾರ, ಅಚಲ, ಶಾಶ್ವತ, ಸರ್ವೋಪಾಧಿ ವಿನಿರ್ಮುಕ್ತ, ಸದ್ರೂಪ ಎಂಬುದಾಗಿ ವ್ಯವಸ್ಥಿತವು.

೨೮-೩೦. ಪ್ರಭುವೇ! ದೇವತೆಗಳೂ ಸಹ ಅದನ್ನು ತಿಳಿಯಲಾರರು. ನಾನು ಹೇಗೆ ಅದರ ತತ್ವವನ್ನು ತಿಳಿಯಬಲ್ಲೆನು ? ಪೀತಾಂಬರ ಧರಿಸಿದುದು, ಚತುರ್ಭುಜಗಳುಳ್ಳುದು, ಕೈಗಳಲ್ಲಿ ಶಂಖ, ಚಕ್ರ, ಗದೆಗಳನ್ನು ಧರಿಸಿರುವುದು,

ಶಂಖಚಕ್ರಗದಾಪಾಣಿಂ ಮುಕುಟಾಂಗದಧಾರಿಣಂ ।
ಶ್ರೀವತ್ಸವಕ್ಷಃಸಂಯುಕ್ತಂ ವನಮಾಲಾವಿಭೂಷಿತಂ ॥ ೨೯ ॥

ತದರ್ಚಯಂತಿ ವಿಬುಧಾ ಯೇ ಚಾನ್ಯೇ ತ್ವತ್ಸಮಾಶ್ರಯಾಃ ।
ದೇವ ಸರ್ವಸುರಶ್ರೇಷ್ಠ ಭಕ್ತಾನಾಮಭಯಪ್ರದ ॥ ೩೦ ॥

ತ್ರಾಹಿ ಮಾಂ ಚಾರುಪದ್ಮಾಕ್ಷ ಮತ್ತಂ ವಿಷಯಸಾಗರೇ ।
ನಾನ್ಯಂ ಪಶ್ಯಾಮಿ ಲೋಕೇಶ ಯಸ್ಯಾಹಂ ಶರಣಂ ವ್ರಜೇ ॥ ೩೧ ॥

ತ್ವಾಮೃತೇ ಕಮಲಾಕಾಂತ ಪ್ರಸೀದ ಮಧುಸೂದನ ।
ಜರಾವ್ಯಾಧಿಶತೈರ್ಯುಕ್ತೋ ನಾನಾದುಃಖೈರ್ನಿಪೀಡಿತಃ ॥ ೩೨ ॥

ಹರ್ಷಶೋಕಾನ್ವಿತೋ ಮೂಢಃ ಕರ್ಮಪಾಶೈಃ ಸುಯಂತ್ರಿತಃ ।
ಪತಿತೋಽಹಂ ಮಹಾರೌದ್ರೇ ಘೋರೇ ಸಂಸಾರಸಾಗರೇ ॥ ೩೩ ॥

---

ಕಿರೀಟಾಭರಣಗಳನ್ನು ಧರಿಸಿರುವುದು, ಶ್ರೀವತ್ಸಾಂಕಿತ ವಕ್ಷಃಸ್ಥಲವುಳ್ಳುದು, ವನಮಾಲೆಯಿಂದಲಂಕೃತವೂ ಆದ ನಿನ್ನ ರೂಪವನ್ನು ದೇವತೆಗಳು ಮತ್ತು ನಿನ್ನ ಭಕ್ತರೂ ಸಹ ಪೂಜಿಸುತ್ತಾರೆ.

೩೦-೩೧. ಸಕಲ ದೇವಶ್ರೇಷ್ಠನು, ಭಕ್ತರಿಗೆ ಅಭಯದಾತನು, ಮನೋಹರ ಕಮಲದಂತೆ ನೇತ್ರವುಳ್ಳವನೂ ಆದ ದೇವನೇ! ವಿಷಯ ಸಮುದ್ರದಲ್ಲಿ ಮುಳುಗಿ ಮತ್ತನಾಗಿರುವ ನನ್ನನ್ನು ಕಾಪಾಡು! ಲೋಕೇಶನೇ! ನಿನ್ನ ಹೊರತು ಬೇರೆ ರಕ್ಷಕರಿಲ್ಲ. ಆದಕಾರಣ ನಿನ್ನನ್ನೇ ಶರಣುಹೊಂದಿರುವೆನು.

೩೨-೩೩. ಮಧುವೆಂಬ ದೈತ್ಯನನ್ನು ಸಂಹರಿಸಿದ ಲಕ್ಷ್ಮೀಪತಿಯೇ! ಪ್ರಸನ್ನನಾಗು! ನಾನು ನೂರಾರುರೋಗಗಳು, ಮುಪ್ಪು ನಾನಾವಿಧ ದುಃಖ ಇವುಗಳಿಂದ ಪೀಡಿತನಾಗಿ ಸಂತೋಷ ದುಃಖಗಳಿಂದ ಕೂಡಿ ಮೂಢನಾಗಿ ಕರ್ಮವೆಂಬ ಹಗ್ಗದಿಂದ ಚೆನ್ನಾಗಿ ಬಂಧಿಸಲ್ಪಟ್ಟು ಮಹಾಭಯಂಕರವಾದ ಘೋರ ಸಂಸಾರವೆಂಬ ಸಮುದ್ರದಲ್ಲಿ ಬಿದ್ದಿರುವೆನು.

ವಿಷಯೋದಕೆದುಷ್ಪೂರೇ ರಾಗದ್ವೇಷಸಮಾಕುಲೇ ।
ಇಂದ್ರಿಯಾವರ್ತಗಂಭೀರೇ ತೃಷ್ಣಾಶಂಕೋರ್ಮಿಸಂಕುಲೇ ॥ ೩೪ ॥

ನಿರಾಶ್ರಯೇ ನಿರಾಲಂಬೇ ನಿಃಸಾರೇऽತ್ಯಂತಚಂಚಲೇ ।
ಮಾಯಯಾ ಮೋಹಿತಸ್ತತ್ರ ಭ್ರಮಾಮಿ ಸುಚಿರಂ ಪ್ರಭೋ ॥ ೩೫ ॥

ನಾನಾಜಾತಿಸಹಸ್ರೇಷು ಜಾಯಮಾನಃ ಪುನಃ ಪುನಃ ।
ಮಯಾ ಜನ್ಮಾನ್ಯನೇಕಾನಿ ಸಹಸ್ರಾಣ್ಯಯುತಾನಿ ಚ ॥ ೩೬ ॥

ವಿವಿಧಾನ್ಯನುಭೂತಾನಿ ಸಂಸಾರೇಽಸ್ಮಿನ್ ಜನಾರ್ದನ ।
ವೇದಾಃ ಸಾಂಗಾ ಮಯಾಧೀತಾಃ ಶಾಸ್ತ್ರಾಣಿ ವಿವಿಧಾನಿ ಚ ॥ ೩೭ ॥

ಇತಿಹಾಸಪುರಾಣಾನಿ ತಥಾ ಶಿಲ್ಪಾನ್ಯನೇಕಶಃ ।
ಅಸಂತೋಷಾಶ್ಚ ಸಂತೋಷಾಃ ಸನ್ನೇಯಾಃ ಪಟವೋऽವ್ಯಯಾಃ ॥ ೩೮ ॥

---

೩೪-೩೫. ಸ್ವಾಮಿಯೇ! ವಿಷಯಗಳೆಂಬ ಉದಕದಿಂದ ತುಂಬಿರುವ, ರಾಗದ್ವೇಷಗಳೆಂಬ ತೆರೆಗಳುಳ್ಳ, ಇಂದ್ರಿಯಗಳೆಂಬ ಸುಳಿಗಳಿಂದ ಗಂಭೀರವಾದ, ಆಶೆ ಭಯಗಳೆಂಬ ಅಲೆಗಳಿಂದ ವ್ಯಾಪ್ತವಾದ, ಆಶ್ರಯವಿಲ್ಲದ, ಆಲಂಬನ ರಹಿತ ವಾದ, ಸಾರವಿಲ್ಲದ, ಅತ್ಯಂತ ಚಂಚಲಸಂಸಾರದಲ್ಲಿ ಸಿಲುಕಿ ಮಾಯೆಯಿಂದ ಮೋಹಿತನಾಗಿ ಬಹುಕಾಲದಿಂದ ತಿರುಗುತ್ತಿರುವೆನು.

೩೬-೩೮. ಜನಾರ್ದನನೇ! ಈ ಸಂಸಾರದಲ್ಲಿ ವಿಧವಿಧವಾದ ಸಾವಿರಾರು ಜಾತಿಗಳಲ್ಲಿ ಪುನಃ ಪುನಃ ಹುಟ್ಟುತ್ತಾ ಆಯಾಯಾ ಜನ್ಮದಲ್ಲಿ ಅನುಭವಿಸಬೇಕಾದ ವಿವಿಧ ದುಃಖಗಳನ್ನು ಅನುಭವಿಸಿರುವೆನು.

ಅಂಗಸಹಿತ ವೇದಗಳು, ವಿವಿಧ ಶಾಸ್ತ್ರಗಳು, ಇತಿಹಾಸಪುರಾಣಗಳು ಮತ್ತು ಅನೇಕ ವಿಧವಾದ ಶಿಲ್ಪವಿದ್ಯೆಗಳು ಇವುಗಳನ್ನೂ ಸಹ ನಾನು ಅಧ್ಯಯನ ಮಾಡಿದ್ದಾಯಿತು.

೩೮-೪೧. ಜಗನ್ನಾಥನೇ! ಈ ಸಂಸಾರದಲ್ಲಿ ಅಸಂತೋಷ, ಸಂತೋಷ ಸಾಮರ್ಥ್ಯ, ಅಸಾಮರ್ಥ್ಯ, ವೃದ್ಧಿ, ಹ್ರಾಸ ಇವುಗಳನ್ನೆಲ್ಲಾ ಅನುಭವಿಸಿರುವೆನು.

ಮಯಾ ಪ್ರಾಪ್ತಾ ಜಗನ್ನಾಥ ಕ್ಷಯವೃದ್ಧ್ಯುದಯೋ ರತಾಃ ।
ಭಾರ್ಯಾಮಿತ್ರಸ್ವಬಂಧೂನಾಂ ವಿಯೋಗಾಃ ಸಂಗಮಾಸ್ತಥಾ ॥ ೩೯ ॥

ಪಿತರೋ ವಿವಿಧಾ ದೃಷ್ಟಾ ಮಾತರಶ್ಚ ತಥಾ ಮಯಾ ।
ದುಃಖಾನಿ ಚಾನುಭೂತಾನಿ ಮಯಾ ಸೌಖ್ಯಾನ್ಯನೇಕಶಃ ॥ ೪೦ ॥

ಪ್ರಾಪ್ತಾಶ್ಚ ಬಾಂಧವಾ ಸ್ವಸೃಭ್ರಾತರೋ ಜ್ಞಾತಯಸ್ತಥಾ ।
ಮಯೋಷಿತಂ ತಥಾ ಸ್ತ್ರೀಣಾಂ ಕೋಷ್ಠೇ ವಿಣ್ಮೂತ್ರಪಿಚ್ಛಿಲೇ ॥ ೪೧ ॥

ಗರ್ಭವಾಸೇ ಮಹಾದುಃಖಮನುಭೂತಂ ತಥಾ ಪ್ರಭೋ ।
ದುಃಖಾನಿ ಯಾನ್ಯನೇಕಾನಿ ಬಾಲ್ಯೇ ಯೌವನಗರ್ವಿತೇ ॥ ೪೨ ॥

ವಾರ್ಧಕ್ಯೇ ಚ ಹೃಷೀಕೇಶ ತಾನಿ ಪ್ರಾಪ್ತಾನಿ ವೈ ಮಯಾ ।
ಮರಣೇ ಯಾನಿ ದುಃಖಾನಿ ಗುಪ್ತಮಾರ್ಗೇ ಯಮಾಲಯೇ ॥ ೪೩ ॥

---

ಹೆಂಡತಿ, ಸ್ನೇಹಿತ ಮತ್ತು ಬಂಧುಗಳ ವಿಯೋಗ ಸಂಗಮಗಳು ಮತ್ತು ನಾನಾವಿಧ ತಂದೆತಾಯಿಗಳನ್ನೂ ನೋಡಿರುವೆನು.

ಅನೇಕವಾಗಿ ದುಃಖ ಸುಖಗಳನ್ನು ಅನುಭವಿಸಿರುವೆನು. ಬಂಧುಗಳು, ಅಕ್ಕತಂಗಿಯರು, ಅಣ್ಣತಮ್ಮಂದಿರು, ಜ್ಞಾತಿಗಳೂ ಎಷ್ಟೋ ಆಗಿಹೋದರು.

೪೧-೪೨. ಮಲಮೂತ್ರ ಪೂರಿತವಾದ ಸ್ತ್ರೀಯರ ಗರ್ಭಕೋಶದಲ್ಲಿ ಎಷ್ಟೋಬಾರಿ ವಾಸಿಸಿರುವೆನು. ಸ್ವಾಮೀ! ಗರ್ಭವಾಸಕಾಲದಲ್ಲಿ ಮಹಾ ದುಃಖವನ್ನೂ ಅನುಭವಿಸಿರುವೆನು.

೪೨-೪೪. ಹೃಷೀಕೇಶನೇ! ಬಾಲ್ಯ, ಯೌವನ, ಮುಪ್ಪುಗಳಲ್ಲಿ ನಾನಾ ವಿಧ ದುಃಖಗಳು ಪ್ರಾಪ್ತವಾದುವು. ಮರಣಾನಂತರ ಗೋಪ್ಯಮಾರ್ಗದಲ್ಲಿ ಮತ್ತು ಯಾತನಾಪೂರಿತವಾದ ಯಮಾಲಯವೆನಿಸಿದ ನರಕದಲ್ಲಿ ಬಹುದುಃಖ ಗಳನ್ನೂ ಅನುಭವಿಸಿರುವೆನು.

ಮಯಾ ತಾನ್ಯನುಭೂತಾನಿ ನರಕೇ ಯಾತನಾಕುಲೇ ।
ಕ್ರಿಮಿಕೀಟದ್ರುಮಾಣಾಂ ಚ ಹಸ್ತ್ಯಶ್ವಮೃಗಪಕ್ಷಿಣಾಂ ॥ ೪೪ ॥

ಮಹಿಷಾಣಾಂ ಗವಾಂ ಚೈವ ತಥಾನ್ಯೇಷಾಂ ವನೌಕಸಾಂ ।
ದ್ವಿಜಾತೀನಾಂ ಚ ಸರ್ವೇಷಾಂ ಶೂದ್ರಾಣಾಂ ಚೈವ ಯೋನಿಷು ॥ ೪೫ ॥

ಧನಿನಾಂ ಕ್ಷತ್ರಿಯಾಣಾಂ ಚ ದರಿದ್ರಾಣಾಂ ತಪಸ್ವಿನಾಂ ।
ನೃಪಾಣಾಂ ನೃಪಭೃತ್ಯಾನಾಂ ತಥಾನ್ಯೇಷಾಂ ಚ ದೇಹಿನಾಂ ॥ ೪೬ ॥

ಗೃಹೇಷ್ವೇಷಾಂ ಸಮುತ್ಪನ್ನೋ ದೇವ ಚಾಹಂ ಪುನಃಪುನಃ ।
ಗತೋಽಸ್ಮಿ ದಾಸತಾಂ ನಾಥ ಭೃತ್ಯಾನಾಂ ಬಹುಶೋ ನೃಣಾಂ ॥ ೪೭ ॥

ದರಿದ್ರತ್ವಂ ಚೇಶ್ವರತ್ವಂ ಸ್ವಾಮಿತ್ವಂ ಚ ತಥಾ ಗತಃ ।
ಹತಂ ಮಯಾ ಹತಂ ಚಾನ್ಯೈರ್ಹತಂ ನೋ ಘಾತಿತಾಸ್ತಥಾ ॥ ೪೮ ॥

ದತ್ತಂ ಮಯಾನ್ಯೈರನ್ಯೇಭ್ಯೋ ಮಯಾ ದತ್ತಮನೇಕಶಃ ।
ಪಿತೃಮಾತೃಸುಹೃದ್ವರ್ಗಕಲತ್ರಾಣಾಂ ಕೃತೇನ ಚ ॥ ೪೯ ॥

---

೪೪-೪೭. ದೇವನೇ! ಕ್ರಿಮಿ, ಕೀಟ, ವೃಕ್ಷ, ಆನೆ, ಕುದುರೆ, ಮೃಗ, ಪಕ್ಷಿ, ಕೋಣ, ಗೋವು ಇತರ ವನಪ್ರಾಣಿಗಳು, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಧನಿಕ, ಬಡವ, ತಪಸ್ವಿ, ರಾಜರು, ಭೃತ್ಯರು ಇನ್ನೂ ಇತರ ಪ್ರಾಣಿಗಳಲ್ಲೆಲ್ಲಾ ಪುನಃ ಪುನಃ ಜನ್ಮ ಹೊಂದಿ ಬಹುಶಃ ಭೃತ್ಯಜನರ ದಾಸನಾಗಿದ್ದೆನು.

೪೮. ಬಡತನ, ಅಧಿಕಾರ, ಯಾಜಮಾನ್ಯ, ಇವುಗಳನ್ನು ಹೊಂದಿದೆನು. ನನ್ನಿಂದ ಮತ್ತು ಇತರರಿಂದಲೂ ಸಹ ನಾನು ಹಿಂಸಿಸಲ್ಪಟ್ಟೆನು. ಸಹ ನಾನೂ ಇತರರನ್ನು ಹಿಂಸಿಸಿರುವೆನು.

೪೯-೫೧. ಇತರರಿಂದ ದಾನತೆಗೆದುಕೊಂಡಿರುವೆನು. ನಾನೂ ಇತರರಿಗೆ ದಾನಮಾಡಿರುವೆನು. ತಂದೆ, ತಾಯಿ, ಸ್ನೇಹಿತ, ಹೆಂಡತಿ ಇವರುಗಳ ವ್ಯಾಪಾರದಿಂದ ನಾನು ಸಂತೋಷಪಟ್ಟಿರುವೆನು. ಕೆಲವು ಸಮಯಗಳಲ್ಲಿ ದೀನ

ಅಹಂ ಹೃಷ್ಟೋ ಸಕೃದ್ದೈನ್ಯಶ್ಚಾಶ್ರುಧೌತಾನನೋ ಗತಃ ।
ದೇವತಿರ್ಯಙ್ಮನುಷ್ಯೇಷು ಚರೇಷು ಸ್ಥಾವರೇಷು ಚ ॥ ೫೦ ॥

ನ ವಿದ್ಯತೇ ಚ ತತ್ಸ್ಥಾನಂ ಯತ್ರಾಹಂ ನ ಗತಃ ಪ್ರಭೋ ।
ಕದಾ ಮೇ ನರಕೇ ವಾಸಃ ಕದಾ ಸ್ವರ್ಗೇ ಜಗತ್ಪತೇ ॥ ೫೧ ॥

ಕದಾ ಮನುಷ್ಯಲೋಕೇಷು ಕದಾ ತಿರ್ಯಗ್ಗತೇಷು ಚ ।
ಜಲಯಂತ್ರೇ ತಥಾ ಚಕ್ರೇ ಕದಾವಟನಿಬಂಧನೇ ॥ ೫೨ ॥

ಪಾತಿತೋಧಸ್ತಥೋರ್ಧ್ವಂ ಚ ಕದಾ ಮಧ್ಯೇ ಸ್ಥಿತಸ್ತ್ವಹಂ ।
ತಥಾ ಚಾಹಂ ಸುರಶ್ರೇಷ್ಠ ಕರ್ಮವಲ್ಲೀಂ ಸಮಾಶ್ರಿತಃ ॥ ೫೩ ॥

ಏವಂ ಸಂಸಾರಚಕ್ರೇಽಸ್ಮಿನ್ರೌರವೇ ಲೋಮಹರ್ಷಣೇ ।
ಭ್ರಮಾಮಿ ಸುಚಿರಂ ಕಾಲಂ ನಾಂತಂ ಪಶ್ಯಾಮಿ ಕರ್ಹಿಚಿತ್ ॥ ೫೪ ॥

---

ಭಾವದಿಂದ ಬಳಲಿರುವೆನು ಮತ್ತೆ ಕೆಲವುವೇಳೆ ಕಣ್ಣೀರನ್ನು ಸುರಿಸಿ ಅತ್ತಿರುವೆನು. ದೇವತೆ, ತಿರ್ಯಗ್ಜಂತು, ಮನುಷ್ಯ ಮತ್ತು ಚರಸ್ಥಿರ ಪ್ರಾಣಿಗಳಲ್ಲಿ ನಾನು ಜನ್ಮವೆತ್ತದಿರುವ ಸ್ಥಳವಿಲ್ಲ.

ಜಗದೊಡೆಯನೇ ! ನನಗೆ ಯಾವಾಗ ಎಷ್ಟುಕಾಲ ನರಕದಲ್ಲಿ ವಾಸವಾಗುವುದು ? ಎಷ್ಟುಕಾಲ ಸ್ವರ್ಗವಾಗುವುದೋ ತಿಳಿಯಲಾರೆನು.

೫೨-೫೩. ಮನುಷ್ಯ, ತಿರ್ಯಕ್ಪ್ರಾಣಿ, ಜಲಚರಜಂತು, ಸ್ಥಾವರ ಇವುಗಳಾಗಿ ನಾನು ಎಷ್ಟುಬಾರಿ ಹುಟ್ಟುವೆನು ? ಈ ಜನ್ಮಗಳನ್ನು ಎಷ್ಟುಕಾಲ ಅನುಭವಿಸಬೇಕು ?

ಸುರಶ್ರೇಷ್ಠನೇ ! ನನಗೆ ಅಧೋಲೋಕ, ಊರ್ಧ್ವಲೋಕ, ಮಧ್ಯಲೋಕಗಳಲ್ಲಿ ಯಾವಾಗ ಜನ್ಮವು ಲಭಿಸುವುದು ? ಹೇಗೂ ಕರ್ಮಬಂಧವನ್ನಾಶ್ರಯಿಸಿರುವೆನು.

೫೪. ಈರೀತಿಯಾಗಿ ಸಂಸಾರಚಕ್ರದಲ್ಲಿ ತಿರುಗುತ್ತಾ ರೌರವ, ರೋಮಹರ್ಷಣ ಮುಂತಾದ ನರಕ ಸ್ಥಾನಗಳಲ್ಲಿ ಬಹುಕಾಲದಿಂದ ತಿರುಗುತ್ತಿರುವೆನು. ಇದಕ್ಕೆ ಕೊನೆಯಾವಾಗಲೋ ಕಾಣೆನು.

ನ ಜಾನೇ ಕಿಂ ಕರೋಮ್ಯೇಷ ಹರೇ ವ್ಯಾಕುಲಿತೇಂದ್ರಿಯಃ ।
ಶೋಕತೃಷ್ಣಾತಿಭೂತಶ್ಚ ಕಾಂದಿಶೀಕೋ ವಿಚೇತನಃ ॥ ೫೫ ॥

ಇದಾನೀಂ ತ್ವಾಮಹಂ ದೇವ ವಿಕಲಃ ಶರಣಂ ಗತಃ ।
ತ್ರಾಹಿ ಮಾಂ ದುಃಖಿತಂ ಕೃಷ್ಣ ಮಗ್ನಂ ಸಂಸಾರಸಾಗರೇ ॥ ೫೬ ॥

ಕೃಪಾಂ ಕುರು ಜಗನ್ನಾಥ ಭಕ್ತೋಽಹಂ ಯದಿ ಮನ್ಯಸೇ ।
ತ್ವಾಮೃತೇ ನಾಸ್ತಿ ಮೇ ಬಂಧುರ್ಯೋಽಸೌ ಚಿಂತಾಂ ಕರಿಷ್ಯತಿ ॥ ೫೭ ॥

ದೇವ ತ್ವಾಂ ನಾಥಮಾಸಾದ್ಯ ನ ಭಯಂ ಮೇಽಸ್ತಿ ಕುತ್ರಚಿತ್ ।
ಜೀವಿತೇ ಮರಣೇ ಚೈವ ಯೋಗಕ್ಷೇಮೇ ತಥಾ ಪ್ರಭೋ ॥ ೫೮ ॥

ಯೇ ತು ತ್ವಾಂ ವಿಧಿವದ್ದೇವ ನಾರ್ಚಯಂತಿ ನರಾಧಮಾಃ ।
ಸುಗತಿಸ್ತು ಕಥಂ ತೇಷಾಂ ಭವೇತ್ಸಂಸಾರಬಂಧನಾತ್ ॥ ೫೯ ॥

---

೫೫. ಹರಿಯೇ! ಈ ಪ್ರಕಾರ ಮನೋವ್ಯಾಕುಲತೆಯನ್ನು ಹೊಂದಿರುವೆನು. ಏನುಮಾಡಬೇಕೆಂಬುದನ್ನರಿಯೆನು. ದುಃಖ ಮತ್ತು ಆಶೆಗಳಿಂದ ಅಭಿಭೂತನಾಗಿ ದಿಕ್ಕೆಟ್ಟು ನಿಶ್ಚೇತನನಾಗಿರುವೆನು.

೫೬. ದೇವ! ಕಳಾರಹಿತನಾಗಿರುವ ನಾನು ಈಗ ನಿನ್ನನ್ನು ಶರಣು ಹೊಂದಿರುವೆನು. ಕೃಷ್ಣ! ಸಂಸಾರವೆಂಬ ಸಾಗರದಲ್ಲಿ ಮುಳುಗಿ ದುಃಖಿಸುತ್ತಿರುವ ನನ್ನನ್ನು ಕಾಪಾಡು!

೫೭. ಜಗನ್ನಾಥನೇ! ನನ್ನನ್ನು ಭಕ್ತನೆಂದು ಸ್ವೀಕರಿಸುವುದಾದರೆ ನನ್ನಲ್ಲಿ ದಯೆಮಾಡು! ಹೀಗೆ ಚಿಂತಿಸುತ್ತಿರುವ ನನಗೆ ನಿನ್ನಹೊರತು ಬೇರೆ ಬಂಧುಗಳಿಲ್ಲ.

೫೮. ದೇವ! ಸ್ವಾಮಿಯಾದ ನಿನ್ನಲ್ಲಿ ಶರಣು ಹೊಂದಿದಮೇಲೆ ಬದುಕು, ಸಾವು, ಯೋಗಕ್ಷೇಮ ಮುಂತಾದ ಯಾವ ವಿಷಯದಲ್ಲಿಯೂ ನನಗೆ ಭಯವಿಲ್ಲ.

೫೯. ದೇವ! ನಿನ್ನನ್ನು ವಿಧ್ಯುಕ್ತರೀತಿಯಿಂದ ಪೂಜಿಸದಿರುವ ನರಾಧಮರಿಗೆ ಸಂಸಾರಬಂಧನದಿಂದ ಬಿಡುಗಡೆಯಾಗಿ ಸದ್ಗತಿಯು ಹೇಗಾದೀತು?

ಕಿಂ ತೇಷಾಂ ಕುಲಶೀಲೇನ ವಿದ್ಯಯಾ ಜೀವಿತೇನ ಚ ।
ಯೇಷಾಂ ನ ಜಾಯತೇ ಭಕ್ತಿರ್ಜಗದ್ಧಾತರಿ ಕೇಶವೇ ॥ ೬೦ ॥

ಪ್ರಕೃತಿಂ ತ್ವಾಸುರೀಂ ಪ್ರಾಪ್ಯ ಯೇ ತ್ವಾಂ ನಿಂದಂತಿ ಮೋಹಿತಾಃ ।
ಪತಂತಿ ನರಕೇ ಘೋರೇ ಜಾಯಮಾನಾಃ ಪುನಃ ಪುನಃ ॥ ೬೧ ॥

ನ ತೇಷಾಂ ನಿಷ್ಕೃತಿಸ್ತಸ್ಮಾದ್ವಿದ್ಯತೇ ನರಕಾರ್ಣವಾತ್ ।
ಯೇ ದೂಷಯಂತಿ ದುರ್ವೃತ್ತಾಸ್ತ್ವೇ ದೇವ ಪುರುಷಾಧಮಾಃ ॥ ೬೨ ॥

ಯತ್ರ ಯತ್ರ ಭವೇಜ್ಜನ್ಮ ಮಮ ಕರ್ಮನಿಬಂಧನಾತ್ ।
ತತ್ರ ತತ್ರ ಹರೇ ಭಕ್ತಿಸ್ತ್ವಯಿ ಸ್ಯಾದಕ್ಷತಾ ಸದಾ ॥ ೬೩ ॥

ಆರಾಧ್ಯ ತ್ವಾಂ ಪರಂ ದೈತ್ಯಾ ನರಾಶ್ಚಾನ್ಯೇಽಪಿ ಸಂಗತಾಃ ।
ಅವಾಪುಃ ಪರಮಾಂ ಸಿದ್ಧಿಂ ಕಸ್ತ್ವಾಂ ದೇವ ನ ಪೂಜಯೇತ್ ॥ ೬೪ ॥

---

೬೦. ಜಗತ್ಸೃಷ್ಟಿಕರ್ತನಾದ ಕೇಶವನಲ್ಲಿ ಭಕ್ತಿಯಿಲ್ಲದಿರುವವರ ಕುಲ, ನಡತೆ, ವಿದ್ಯೆ, ಬದುಕು ಮುಂತಾದುವೆಲ್ಲವೂ ನಿಷ್ಫಲವು.

೬೧. ದೇವ! ಅಸುರಸ್ವಭಾವವನ್ನು ಹೊಂದಿ ನಿನ್ನನ್ನು ನಿಂದಿಸುವ, ಮೋಹಿತರಾದ ಜನರು ಪುನಃ ಪುನಃ ಹುಟ್ಟುತ್ತಾ ಘೋರನರಕದಲ್ಲಿ ಬೀಳುವರು.

೬೨. ಅಂತಹ ನಿಂದಕರಿಗೆ ನರಕವೆಂಬ ಸಮುದ್ರದಿಂದ ಬಿಡುಗಡೆಯಿಲ್ಲ. ಅಲ್ಲಿಯೇ ಬಿದ್ದು ಒದ್ದಾಡುತ್ತಿರುವರು. ದೇವ! ನಿನ್ನನ್ನು ದೂಷಿಸುವವರು ನರಾಧಮರು.

೬೩ ಹರಿಯೇ! ಕರ್ಮಾನುಸಾರವಾಗಿ ನನಗೆ ಎಲ್ಲಿ ಜನ್ಮ ಬಂದರೂ ಸರ್ವದಾ ನಿನ್ನಲ್ಲಿ ಅವಿರತವಾದ ಭಕ್ತಿಯಿರುವಂತೆ ಅನುಗ್ರಹಿಸು!

೬೪. ದೇವ! ಉತ್ತಮನಾದ ನಿನ್ನನ್ನು ದೈತ್ಯರು, ಮನುಷ್ಯರು, ಯೋಗಿಗಳಾದ ಇತರರೂ ಸಹ ಆರಾಧಿಸಿ ಉತ್ತಮಸಿದ್ಧಿಯನ್ನು ಪಡೆದಿರುವರು. ಯಾವನುತಾನೇ ನಿನ್ನನ್ನು ಪೂಜಿಸಲಾರನು?

ನ ಶಕ್ನುವಂತಿ ಬ್ರಹ್ಮಾದ್ಯಾಃ ಸ್ತೋತುಂ ತ್ವಾಂ ಪ್ರಕೃತೇಃ ಪರಂ ।
ತಥಾ ಚಾಜ್ಞಾನಭಾವೇನ ಸಂಸ್ತುತೋಽಸಿ ಮಯಾ ಪ್ರಭೋ ॥ ೬೫ ॥

ತತ್ ಕ್ಷಮಸ್ವಾಪರಾಧಂ ಮೇ ಯದಿ ತೇಽಸ್ತಿ ದಯಾಮಯಿ ।
ಕೃತಾಪರಾಧೇಽಪಿ ಹರೇ ಕ್ಷಮಾಂ ಕುರ್ವಂತಿ ಸಾಧವಃ ॥ ೬೬ ॥

ತಸ್ಮಾತ್ಪ್ರಸೀದ ದೇವೇಶ ಭಕ್ತ್ಯಾ ಸ್ನೇಹಂ ಸಮಾಶ್ರಿತಃ ।
ಸ್ತುತೋಽಸಿ ಯನ್ಮಯಾ ದೇವ ಭಕ್ತಿಭಾವೇನ ಚೇತಸಾ ॥ ೬೭ ॥

ಸಾಂಗಂ ಭವತು ತತ್ಸರ್ವಂ ವಾಸುದೇವ ನಮೋಽಸ್ತು ತೇ ॥ ೬೮ ॥

ಇತಿ ಶ್ರೀನಾರದೀಯಮಹಾಪುರಾಣೋತ್ತರಭಾಗೇ ಮೋಹಿನೀ
ವಸುಸಂವಾದೇ ಪುರುಷೋತ್ತಮಮಾಹಾತ್ಮ್ಯೇ
ತ್ರಿಪಂಚಾಶತ್ತಮೋಽಧ್ಯಾಯಃ

---

೬೫. ಪ್ರಭುವೇ ! ಬ್ರಹ್ಮಾದಿದೇವತೆಗಳೂ ಸಹ ಪ್ರಕೃತಿಯನ್ನೂ ಅತಿಕ್ರಮಿಸಿರುವ ನಿನ್ನನ್ನು ಸ್ತೋತ್ರಮಾಡುವುದಕ್ಕೆ ಶಕ್ತರಲ್ಲ. ಹಾಗಿದ್ದರೂ ಅಜ್ಞನಾದ ನನ್ನಲ್ಲಿ ಅನುಗ್ರಹಮಾಡಿ ಸ್ತೋತ್ರಮಾಡಿಸಿಕೊಂಡಿರುವೆ.

೬೬. ಹರಿಯೇ ! ನಿನಗೆ ನನ್ನಲ್ಲಿ ದಯೆಯಿದ್ದರೆ ನನ್ನ ಈ ಅಪರಾಧವನ್ನು ಕ್ಷಮಿಸು ! ಸಾಧುಗಳು ಅಜ್ಞರು ಮಾಡುವ ತಪ್ಪನ್ನು ಕ್ಷಮಿಸಿ ದಯೆಮಾಡುವರು.

೬೭. ದೇವೇಶ ! ಪ್ರಸನ್ನನಾಗು! ಭಕ್ತಿಯಿಂದ ಸ್ನೇಹಮಾಡಿರುವೆನು. ದೇವ ! ಭಕ್ತಿಭಾವಯುತವಾದ ಮನಸ್ಸಿನಿಂದ ನಾನು ಸ್ತೋತ್ರಮಾಡಿರುವೆನು.

೬೮. ವಾಸುದೇವ ! ಆ ಸ್ತುತಿಯೆಲ್ಲವೂ ಸಾಂಗವಾಗಲಿ! ನಿನಗೆ ನಮಸ್ಕಾರಮಾಡುವೆನು!

ಇಂತು ಶ್ರೀನಾರದೀಯಪುರಾಣೋತ್ತರಭಾಗದಲ್ಲಿ ವಸುಮೋಹಿನೀ ಸಂವಾದ
ದೊಳು ಪುರುಷೋತ್ತಮ ಮಾಹಾತ್ಮ್ಯೆಯೆಂಬ ಐವತ್ತಮೂರನೆಯ
ಅಧ್ಯಾಯವು ಮುಗಿದುದು.

# ಚತುಃಪಂಚಾಶತ್ತಮೋಽಧ್ಯಾಯಃ

---

ವಸುರುವಾಚ

ಇತ್ಥಂ ಸ್ತುತಸ್ತದಾ ತೇನ ಪ್ರಸನ್ನೋ ಗರುಡಧ್ವಜಃ ।
ದದೌ ತಸ್ಮೈ ತು ಸುಭಗೇ ಸಕಲಂ ಮನಸೇಪ್ಸಿತಂ ॥ ೧ ॥

ಯಃ ಸಂಪೂಜ್ಯ ಜಗನ್ನಾಥಂ ಪ್ರತ್ಯಹಂ ಸ್ತೌತಿ ಮಾನವಃ ।
ಸ್ತೋತ್ರೇಣಾನೇನ ಮತಿಮಾನ್ಸಮೋಕ್ಷಂ ಲಭತೇ ಧ್ರುವಂ ॥ ೨ ॥

ತ್ರಿಸಂಧ್ಯಂ ಯೋ ಜಪೇದ್ವಿದ್ವಾನಿಮಂ ಸ್ತೋತ್ರವರಂ ಶುಚಿಃ ।
ಧರ್ಮಂ ಚಾರ್ಥಂ ಚ ಕಾಮಂ ಚ ಮೋಕ್ಷಂ ಚ ಲಭತೇ ನರಃ ॥ ೩ ॥

---

ಐವತ್ತುನಾಲ್ಕನೆಯ ಅಧ್ಯಾಯ.

೧. ವಸುವು ಹೇಳಿದನು:—ಸುಂದರೀ ! ಈರೀತಿಯಾಗಿ ಇಂದ್ರದ್ಯುಮ್ನ ರಾಜನು ಮಾಡಿದ ಸ್ತೋತ್ರದಿಂದ ಗರುಡಧ್ವಜನು ಪ್ರಸನ್ನನಾಗಿ ಅವನಿಗೆ ಮನೋಭೀಷ್ಟವೆಲ್ಲವನ್ನೂ ಕೊಟ್ಟನು.

೨. ಪ್ರತಿದಿನವೂ ಜಗನ್ನಾಥನನ್ನು ಪೂಜಿಸಿ ಈ ಸ್ತೋತ್ರಪಠನೆಮಾಡುವ ಜ್ಞಾನಿಯಾದ ಮಾನವನು ಈ ಸ್ತೋತ್ರಪಾಠದಿಂದ ಖಂಡಿತವಾಗಿಯೂ ಮೋಕ್ಷವನ್ನು ಪಡೆಯುವನು.

೩. ಯಾವ ವಿದ್ವಾಂಸನು ಪರಿಶುದ್ಧನಾಗಿ ಉತ್ತಮವಾದ ಈ ಸ್ತೋತ್ರವನ್ನು ಮೂರು ಸಂಧ್ಯಾಕಾಲಗಳಲ್ಲಿಯೂ ಜಪಿಸುವನೋ ಅಂತಹ ಮನುಷ್ಯನು ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನು ಪಡೆಯುವನು.

ಯಃ ಪಠೇಚ್ಛೃಣುಯಾದ್ವಾಪಿ ಶ್ರಾವಯೇದ್ವಾ ಸಮಾಹಿತಃ ।
ಸ ಲೋಕಂ ಶಾಶ್ವತಂ ವಿಷ್ಣೋರ್ಯಾತಿ ನಿರ್ಧೂತಕಲ್ಮಷಃ ॥ ೪ ॥

ಧನ್ಯಂ ಪಾಪಹರಂ ಚೇದಂ ಭುಕ್ತಿಮುಕ್ತಿಪ್ರದಂ ಶಿವಂ ।
ಗುಹ್ಯಂ ಸುದುರ್ಲಭಂ ಪುಣ್ಯಂ ನ ದೇಯಂ ಯಸ್ಯ ಕಸ್ಯಚಿತ್ ॥ ೫ ॥

ನ ನಾಸ್ತಿಕಾಯ ಮೂರ್ಖಾಯ ನ ಕೃತಘ್ನಾಯ ಮಾನಿನೇ ।
ನ ದುಷ್ಟಮತಯೇ ದದ್ಯಾನ್ನಾಭಕ್ತಾಯ ಕದಾಚನ ॥ ೬ ॥

ದಾತವ್ಯಂ ಭಕ್ತಿಯುಕ್ತಾಯ ಗುಣಶೀಲಾನ್ವಿತಾಯ ಚ ।
ವಿಷ್ಣುಭಕ್ತಾಯ ಶಾಂತಾಯ ಶ್ರದ್ಧಾತುಷ್ಟಾಯ ಶೀಲಿನೇ ॥ ೭ ॥

---

೪. ಈ ಸ್ತೋತ್ರವನ್ನು ಸಮಾಧಾನಚಿತ್ತನಾಗಿ ಶ್ರವಣ, ಪಠನ ಮತ್ತು ಉಪದೇಶ ಮಾಡುವವನು ತನ್ನ ಪಾಪಗಳನ್ನು ಪರಿಹರಿಸಿಕೊಂಡು ಶಾಶ್ವತವಾದ ವಿಷ್ಣುಲೋಕಕ್ಕೆ ಹೋಗುವನು.

೫. ಧನ್ಯವು, ಪಾಪಪರಿಹಾರಕವು, ಭೋಗಮೋಕ್ಷಪ್ರದವು, ಮಂಗಳ ಕರವು, ಗೋಪ್ಯವು, ಅತ್ಯಂತ ದುರ್ಲಭವು, ಪುಣ್ಯಕರವೂ ಆಗಿರುವ ಈ ಸ್ತೋತ್ರ ವನ್ನು ಗುಣಶೀಲಾದಿಗಳನ್ನರಿಯದೆ ಯಾವನಿಗೂ ಉಪದೇಶಿಸಬಾರದು.

೬. ಯಾವ ಸಂದರ್ಭದಲ್ಲಿಯೂ ಈ ಸ್ತೋತ್ರವನ್ನು ನಾಸ್ತಿಕನು, ಮೂರ್ಖನು, ಕೃತಘ್ನನು, ಅಹಂಕಾರಿಯು, ಕೆಟ್ಟಬುದ್ಧಿಯುಳ್ಳವನು, ಭಕ್ತನಲ್ಲ ದವನೂ ಆದ ಮನುಷ್ಯರಿಗೆ ಉಪದೇಶಿಸಬಾರದು.

೭. ಭಕ್ತಿಯುಕ್ತನು, ಗುಣಶೀಲವುಳ್ಳವನು, ವಿಷ್ಣುಭಕ್ತನು, ಶಮಾದಿ ಸಂಪನ್ನನು, ಶ್ರದ್ಧೆ ತುಷ್ಟಿಗಳುಳ್ಳವನು, ಸತ್ಸ್ವಭಾವೋಪೇತನೂ ಆಗಿರುವವನಿಗೆ ಈ ಸ್ತೋತ್ರವನ್ನು ಉಪದೇಶಿಸಬೇಕು.

ಇದಂ ಸಮಸ್ತಾಘವಿನಾಶಕಾರಣಂ
ಕಾರುಣ್ಯಸಂಜ್ಞಂ ಸುಖಮೋಕ್ಷದಂ ಚ ।
ಅಶೇಷವಾಂಛಾಫಲದಂ ವರಿಷ್ಠಂ
ಸ್ತೋತ್ರಂ ಮಯೋಕ್ತಂ ಪುರುಷೋತ್ತಮಸ್ಯ ॥ ೮ ॥

ಯೇ ತಂ ಸುಸೂಕ್ಷ್ಮಂ ವಿಮಲಂ ವಿಶಾಲಂ
ಧ್ಯಾಯಂತಿ ನಿತ್ಯಂ ಪುರುಷಂ ಪುರಾಣಂ ।
ತೇ ಮುಕ್ತಿಭಾಜಃ ಪ್ರವಿಶಂತಿ ವಿಷ್ಣುಂ
ಮಂತ್ರೈರ್ಯಥಾಜ್ಯಂ ಹುತಮಧ್ವರಾಗ್ನೌ ॥ ೯ ॥

ಏಕಃ ಸ ದೇವೋ ಭವದುಃಖಹಂತಾ
ಪರಃ ಪರೇಷಾಂ ನ ತತೋಽಸ್ತಿ ಚಾನ್ಯಃ ।
ಸ್ರಷ್ಟಾ ಸ ಪಾತಾ ಸಕಲಾಂತಕರ್ತಾ
ವಿಷ್ಣುಃ ಸಮಸ್ತಾಖಿಲಸಾರಭೂತಃ ॥ ೧೦ ॥

---

೮. ಇಂತಹ ಸಮಸ್ತಪಾಪನಾಶಕವು, ಕಾರುಣ್ಯನಾಮಕವು, ಸುಖಮೋಕ್ಷದಾಯಕವು, ಸಕಲೇಷ್ಟಾರ್ಥಪ್ರದವು, ಸರ್ವೋತ್ತಮವೂ ಆದ ಪುರುಷೋತ್ತಮಸ್ತೋತ್ರವನ್ನು ನಾನು ನಿನಗೆ ಉಪದೇಶಿಸಿರುವೆನು.

೯. ಅತ್ಯಂದ ಸೂಕ್ಷ್ಮನು, ನಿರ್ಮಲನು, ವಿಶಾಲಹೃದಯನು, ನಿತ್ಯನೂ ಆದ ಆ ಪುರಾಣ ಪುರುಷೋತ್ತಮನನ್ನು ಧ್ಯಾನಿಸುವವರು, ಮಂತ್ರಗಳಿಂದ ಯಜ್ಞಕುಂಡದಲ್ಲಿ ಹೋಮಮಾಡಿದ ಘೃತದಂತೆ ಮುಕ್ತಿಭಾಗಿಗಳಾಗಿ ವಿಷ್ಣುವನ್ನು ಹೊಂದುವರು.

೧೦. ಆ ಪುರುಷೋತ್ತಮದೇವನೊಬ್ಬನೇ ಸಂಸಾರದುಃಖವನ್ನು ಪರಿಹರಿಸುವವನು. ಉತ್ತಮದೇವತೆಗಳಿಂತಲೂ ಉತ್ತಮನು. ಅವನಿಗಿಂತಲೂ ಉತ್ತಮನು ಬೇರಾರೂ ಇಲ್ಲ. ಆ ವಿಷ್ಣುವೇ ಸೃಷ್ಟಿ, ರಕ್ಷಣೆ ಸಂಹಾರಗಳಿಗೆ ಕರ್ತನು, ಸರ್ವತ್ರಸಮನು, ಸಕಲಸಾರಭೂತನು.

ಕಿಂ ವಿದ್ಯಯಾ ಕಿಂ ಸುಗುಣೈಶ್ಚ ತೇಷಾಂ
ಯಜ್ಞೈಶ್ಚ ದಾನೈಶ್ಚ ತಪೋಭಿರುಗ್ರೈಃ ।
ಯೇಷಾಂ ತು ಭಕ್ತಿರ್ಭವತೀಹ ಕೃಷ್ಣೇ
ಜಗದ್ಗುರೌ ಮೋಕ್ಷಸುಖಪ್ರದೇ ಚ ॥ ೧೧ ॥

ಲೋಕೇ ಸ ಧನ್ಯಃ ಸ ಶುಚಿಃ ಸ ವಿದ್ವಾನ್
ಸ ಏವ ವಕ್ತಾ ಸ ಚ ಧರ್ಮಶೀಲಃ ।
ಜ್ಞಾತಾ ಸ ದಾತಾ ಸ ಚ ಸತ್ಯವಕ್ತಾ
ಯಸ್ಯಾಸ್ತಿ ಭಕ್ತಿಃ ಪುರುಷೋತ್ತಮಾಖ್ಯೇ ॥ ೧೨ ॥

ಸ್ತುತ್ವೈವಂ ಬ್ರಹ್ಮತನಯೋ ಪ್ರಣಮ್ಯ ಚ ಸನಾತನಂ ।
ವಾಸುದೇವಂ ಜಗನ್ನಾಥಂ ಸರ್ವಕಾಮಫಲಪ್ರದಂ ॥ ೧೩ ॥

---

೧೧. ಜಗದ್ಗುರುವು, ಮೋಕ್ಷಸುಖಪ್ರದನೂ ಆದ ಈ ಕೃಷ್ಣನಲ್ಲಿ ಪಕ್ವ ಭಕ್ತಿಯುಂಟಾದಮೇಲೆ ವಿದ್ಯೆ, ಸುಗುಣ, ಯಜ್ಞ, ದಾನ, ಉಗ್ರತಪಸ್ಸು ಇವುಗಳಿಂದೇನುಫಲ ? ಎಂದರೆ ಹರಿಭಕ್ತಿಯೇ ಮುಖ್ಯಸಾಧನವು; ವಿದ್ಯೆ ಮುಂತಾದ ಎಲ್ಲಾಸಾಧನಗಳಿಂದಲೂ ಅಂತಹ ಭಕ್ತಿಯನ್ನು ಸಂಪಾದಿಸಿ ಅದರ ಮೂಲಕ ಪರಮಶ್ರೇಯಸ್ಸನ್ನು ಪಡೆಯಬೇಕೆಂದು ತಾತ್ಪರ್ಯ.

೧೨. ಈ ಲೋಕದಲ್ಲಿ ಪುರುಷೋತ್ತಮನಾಮಕನಾದ ವಿಷ್ಣುವಿನಲ್ಲಿ ಧೃಢಭಕ್ತಿಯನ್ನಿಟ್ಟಿರುವವನೇ ಧನ್ಯನು, ಅವನೇ ಪರಿಶುದ್ಧನು, ಅವನೇ ಜ್ಞಾನಿಯು, ಧರ್ಮಶೀಲನು, ಜ್ಞಾತೃವು, ದಾತನು ಮತ್ತು ಸತ್ಯವಂತನೂ ಆಗುವನು.

೧೩-೧೪. ಬ್ರಹ್ಮಕುಮಾರಿಯೇ! ಈ ರೀತಿಯಾಗಿ ಇಷ್ಟಫಲಗಳನ್ನೆಲ್ಲಾ ಕೊಡುವ ಜಗದೊಡೆಯನಾದ ವಾಸುದೇವನನ್ನು ಸ್ತೋತ್ರಮಾಡಿ ಆ ಸನಾತನ ದೇವನಿಗೆ ನಮಸ್ಕಾರಮಾಡಿ ಚಿಂತಾಕ್ರಾಂತನಾದ ಭೂಪತಿಯು ನೆಲದಮೇಲೆ

ಚಿಂತಾವಿಷ್ಟೋ ಮಹೀಪಾಲಃ ಕುಶಾನಾಸ್ತೀರ್ಯ ಭೂತಲೇ ।
ವಸ್ತ್ರಂ ಚ ತನ್ಮನಾ ಭೂತ್ವಾ ಸುಷ್ವಾಪ ಧರಣೀತಲೇ ॥ ೧೪ ॥

ಕಥಂ ಪ್ರತ್ಯಕ್ಷಮಭ್ಯೇತಿ ದೇವದೇವೋ ಜನಾರ್ದನಃ ।
ಮಮ ಚಿಂತಾಹರೋ ದೇವಃ ಕದಾಸಾವಿತಿ ಚಿಂತಯನ್ ॥ ೧೫ ॥

ಸುಪ್ತಸ್ಯ ತಸ್ಯ ನೃಪತೇರ್ವಾಸುದೇವೋ ಜಗದ್ಗುರುಃ ।
ಆತ್ಮಾನಂ ದರ್ಶಯಾಮಾಸ ಸ್ವಪ್ನೇ ತಸ್ಮೈ ಸ ಚಕ್ರಧೃಕ್ ॥ ೧೬ ॥

ಸ ದದರ್ಶ ಚ ತಂ ಸ್ವಪ್ನೇ ದೇವದೇವಂ ಜಗತ್ಪತಿಂ ।
ಶಂಖಚಕ್ರಧರಂ ಶಾಂತಂ ಗದಾಪದ್ಮಾಗ್ರ್ಯಪಾಣಿನಂ ॥ ೧೭ ॥

ಶಾರ್ಙ್ಗಬಾಣಾಸಿಯುಕ್ತಂ ಚ ಜ್ವಲತ್ತೇಜೋಗ್ರಮಂಡಲಂ ।
ಯುಗಾಂತಾದಿತ್ಯವರ್ಣಾಭಂ ನೀಲವೈಡೂರ್ಯಸನ್ನಿಭಂ ॥ ೧೮ ॥

---

ದರ್ಭೆಗಳನ್ನೂ ಅದರಮೇಲೆ ವಸ್ತ್ರವನ್ನೂ ಹಾಸಿ ಮನದಲ್ಲಿ ಆ ವಾಸುದೇವನನ್ನೇ ನೆನೆಯುತ್ತಾ ಅದರಮೇಲೆ ಮಲಗಿದನು.

೧೫. ನನ್ನ ಚಿಂತೆಯನ್ನು ಪರಿಹರಿಸುವ ದೇವೋತ್ತಮನಾದ ಈ ಜನಾರ್ದನದೇವನು ಯಾವಾಗ ಪ್ರತ್ಯಕ್ಷನಾಗುವನು ? ಎಂಬುದಾಗಿ ಚಿಂತಿಸುತ್ತಿದ್ದನು.

೧೬. ಹೀಗೆ ಚಿಂತಿಸುತ್ತಾ ಮಲಗಿದ ಆ ದೊರೆಗೆ ಚಕ್ರಾಯುಧ ಧಾರಿಯೂ, ಜಗದ್ಗುರುವೂ ಆದ ವಾಸುದೇವನು ಸ್ವಪ್ನದಲ್ಲಿ ತನ್ನ ರೂಪವನ್ನು ತೋರಿಸಿದನು.

೧೭-೧೯. ದೇವದೇವನು, ಜಗದೊಡೆಯನು, ಶಂಖಚಕ್ರಗಳನ್ನು ಧರಿಸಿರುವವನು, ಶಾಂತಿಸಂಪನ್ನನು ಮುಂದಿನಕೈಗಳಲ್ಲಿ ಗದಾಪದ್ಮಗಳನ್ನು ಧರಿಸಿರುವವನು, ಧನುಸ್ಸು, ಬಾಣ, ಕತ್ತಿಗಳಿಂದ ಯುಕ್ತನು, ಜಾಜ್ವಲ್ಯಮಾನವಾದ ಉಗ್ರತೇಜೋಮಂಡಲರೂಪಿಯು, ಪ್ರಳಯಕಾಲದ ಸೂರ್ಯನಂತೆ ಹೊಳೆಯುತ್ತಿರುವವನು, ನೀಲವೈಡೂರ್ಯಸದೃಶನು, ಗರುಡನಮೇಲೆ ಕುಳಿತಿರುವವನು,

ಸುಪರ್ಣಸ್ಯೃಷ್ಠಮಾಸೀನಂ ಷೋಡಶಾರ್ಧಭುಜಂ ವಿಭುಂ ।
ಸ ವೈ ಸನಾತನೋ ದೇವ ಉವಾಚ ನೃಪತಿಂ ಪ್ರತಿ ।
ಯಥಾ ಮಾಂ ಪ್ರಾಪ್ಸ್ಯಸೇ ಭೂಪ ತದುಪಾಯಂ ಬ್ರವೀಮಿ ತೇ ॥ ೧೯ ॥

ಗತಾಯಾಮದ್ಯ ಶರ್ವರ್ಯಾಂ ನಿರ್ಮಲೇ ಭಾಸ್ಕರೋದಯೇ ।
ಸಾಗರಸ್ಥಜಲಸ್ನಾತೇ ನಾನಾದ್ರುಮವಿಭೂಷಿತೇ ॥ ೨೦ ॥

ಜಲಂ ತದ್ವೈವ ವೇಲಾಯಾಂ ದೃಶ್ಯತೇ ಯತ್ರ ವೈ ಮಹತ್ ।
ಲವಣಸ್ಯೋದಧೇ ರಾಜಂಸ್ತರಂಗೈಃ ಸಮಭಿಪ್ಲುತಂ ॥ ೨೧ ॥

ಕುಲಾಲಂಬೀ ಮಹಾವೃಕ್ಷಃ ಸ್ಥಿತಃ ಸ್ಥಲಜಲೇಷು ಚ ।
ವೇಲಾಭಿರ್ಹನ್ಯಮಾನಶ್ಚ ನ ಚಾಸೌ ಕಂಪತೇ ಧ್ರುವಃ ॥ ೨೨ ॥

ಹಸ್ತೇನ ಪರಶುಮಾದಾಯ ಊರ್ಮೇರಂತಸ್ತತೋ ವ್ರಜ ।
ಏಕಾಕೀ ವಿಹರನ್ರಾಜನ್ಯಂ ತ್ವಂ ಪಶ್ಯಸಿ ಪಾದಪಂ ॥ ೨೩ ॥

---

ಅಷ್ಟಭುಜಗಳುಳ್ಳವನೂ ಆದ ಆ ಸ್ವಾಮಿಯನ್ನು ಭೂಪಾಲನು ಸ್ವಪ್ನದಲ್ಲಿ ನೋಡಿದನು.

೧೯. ಆ ಸನಾತನದೇವನು ದೊರೆಯನ್ನು ಕುರಿತು ರಾಜನೇ! ನನ್ನನ್ನು ಹೊಂದುವ ಉಪಾಯವನ್ನು ನಿನಗೆ ಹೇಳುವೆನು ಎಂಬುದಾಗಿ ನುಡಿದನು.

೨೦-೨೨. ದೊರೆಯೇ! ಈ ರಾತ್ರಿಯು ಕಳೆದಮೇಲೆ ಸೂರ್ಯನು ಸಮುದ್ರೋದಕದಲ್ಲಿ ಸ್ನಾನಮಾಡಿ ಪರಿಶುದ್ಧನಾಗಿ ನಾನಾವೃಕ್ಷಗಳಿಂದಲಂಕೃತವಾಗಿ ಉದಯಿಸುವಾಗ ಲವಣಸಮುದ್ರತೀರದಲ್ಲಿ ಅಲೆಗಳಿಂದ ಅಲ್ಲೋಲಕಲ್ಲೋಲವಾದ ನೀರು ಮಹತ್ತಾಗಿ ಕಾಣುವುದು.

ಅಲ್ಲಿ ಸ್ಥಲಜಲಗಳಲ್ಲಿ ಬೇರೂರಿರುವ ಮಹಾವೃಕ್ಷವಿರುವುದು. ಅದು ಅಲೆಗಳ ಹೊಡೆತಕ್ಕೆ ಸಿಕ್ಕಿದಾಗ್ಯೂ ಸ್ಥಿರವಾಗಿಯೇ ಇರುವುದು. ಅಲ್ಲಾಡುವುದಿಲ್ಲ.

೨೩. ದೊರೆಯೇ! ಕೈಯಲ್ಲಿ ಕೊಡಲಿಯನ್ನು ತೆಗೆದುಕೊಂಡು ಏಕಾಕಿಯಾಗಿ ವಿಹರಿಸುತ್ತಾ ಅಲೆಗಳಮಧ್ಯದಲ್ಲಿ ಹೋಗು. ಅಲ್ಲಿ ನೀನು ಒಂದು ವೃಕ್ಷವನ್ನು ಕಾಣುವೆ.

ಇದಂ ಚಿಹ್ನಂ ಸಮಾಲೋಕ್ಯ ಚ್ಛೇದಯ ತ್ವಮಶಂಕಿತಃ ।
ಪಾತ್ಯಮಾನಂ ತು ತಂ ವೃಕ್ಷಂ ಪ್ರಾಂಶುಮದ್ಭುತದರ್ಶನಂ ॥ ೨೪ ॥

ದೃಷ್ಟ್ವಾ ತೇನೈವ ಸಂಚಿಂತ್ಯ ತದಾ ಭೂಪಾಲ ದರ್ಶನಂ ।
ಕುರು ತತ್ಪ್ರತಿಮಾಂ ದಿವ್ಯಾಂ ಜಹಿ ಚಿಂತಾಂ ವಿಮೋಹಿನೀಂ ॥ ೨೫ ॥

ಏವಮುಕ್ತ್ವಾ ಮಹಾಭಾಗೋ ಜಗಾಮಾದರ್ಶನಂ ಹರಿಃ ।
ಸ ಚಾಪಿ ಸ್ವಪ್ನಮಾಲಕ್ಷ್ಯ ಪರಂ ವಿಸ್ಮಯಮಾಗತಃ ॥ ೨೬ ॥

ತಾಂ ನಿಶಾಂ ಸಮುದ್ವೀಕ್ಷ್ಯ ಸತತಸ್ತದ್ಗತಮಾನಸಃ ।
ವ್ಯಾಹರನ್ ವೈಷ್ಣವಾನ್ ಮಂತ್ರಾನ್ ಸೂಕ್ತಂ ಚೈವ ತದಾತ್ಮಕಂ ॥ ೨೭ ॥

ಪ್ರಭಾತಾಯಾಂ ಪದಾತಿಶ್ಚ ನ ಗಜೋ ನ ಚ ಸಾರಥಿಃ ।
ಏಕಾಕೀ ಸ ಮಹಾವೇಲಾಂ ಪ್ರವಿವೇಶ ಮಹೀಪತಿಃ ॥ ೨೮ ॥

---

೨೪-೨೬. ನಾನು ಹೇಳಿರುವ ಈ ಗುರುತನ್ನು ನೋಡಿ ನೀನು ಭಯಪಡದೆ ಆ ವೃಕ್ಷವನ್ನು ಕತ್ತರಿಸು. ನೋಡುವುದಕ್ಕೇ ಆಶ್ಚರ್ಯವಾದ, ಬೀಳುತ್ತಿರುವ ಎತ್ತರವಾದ ಆ ವೃಕ್ಷವನ್ನು ನೋಡುತ್ತಿರುವಾಗಲೇ ನಿನಗೆ ಅದ್ಭುತ ದರ್ಶನವಾಗುವುದು.

ಅದರಿಂದ ದಿವ್ಯಪ್ರತಿಮೆಯನ್ನು ನಿರ್ಮಾಣಮಾಡು. ಮೋಹಕವಾದ ಚಿಂತೆಯನ್ನು ಬಿಡು. ಹೀಗೆ ಹೇಳಿ ಪೂಜ್ಯನಾದ ಹರಿಯು ಅದೃಶ್ಯನಾದನು. ಆ ದೊರೆಯೂ ಸ್ವಪ್ನವನ್ನು ನೆನೆಸಿಕೊಂಡು ಅತ್ಯಂತ ವಿಸ್ಮಯವನ್ನು ಹೊಂದಿದನು.

೨೭. ದೊರೆಯು ಆ ರಾತ್ರಿಯನ್ನೇ ನಿರೀಕ್ಷಿಸುತ್ತಾ ಯಾವಾಗಲೂ ಹರಿಯನ್ನೇ ಮನದಲ್ಲಿ ನೆನೆಯುವವನಾಗಿ ವೈಷ್ಣವಮಂತ್ರಗಳನ್ನು ಜಪಿಸುತ್ತಾ ವಿಷ್ಣು ಸೂಕ್ತಗಳನ್ನು ಬಾಯಿಂದಹೇಳುತ್ತಾ ರಾತ್ರಿಯನ್ನು ಕಳೆದನು.

೨೮. ಬೆಳಗಾಗುತ್ತಿರುವಾಗಲೇ ಭೂಪಾಲನು ಏಕಾಕಿಯಾಗಿ ಗಜ, ಸಾರಥಿ ಮುಂತಾದ ಪರಿವಾರವಿಲ್ಲದೆ ಕಾಲ್ನಡಗೆಯಿಂದಲೇ ಸಮುದ್ರದ ದಡವನ್ನು ಪ್ರವೇಶಿಸಿದನು.

ತಂ ದದರ್ಶ ಮಹಾವೃಕ್ಷಂ ತೇಜಸ್ವಂತಂ ಮಹಾದ್ರುಮಂ |
ಮಹಾಂತಿಕಂ ಮಹಾರೋಹಂ ಪುಣ್ಯಂ ವಿಫಲಮೇವ ಚ || ೨೯ ||

ಮಹೋತ್ಸವಂ ಮಹಾಕಾಯಂ ಪ್ರಸುಪ್ತಂ ಚ ಜಲಾಂತಿಕೇ |
ಸಾಂದ್ರಮಾಂಜಿಷ್ಠವರ್ಣಾಭಂ ನಾಮಜಾತಿವಿವರ್ಜಿತಂ || ೩೦ ||

ತರಶಾಧಸ್ತಥಾ ವಿಷ್ಣೋರ್ದ್ರುಮಂ ದೃಷ್ಟ್ವಾ ಮುದಾನ್ವಿತಃ |
ಪರ್ಶುನಾ ಶಾತಯಾಮಾಸ ಸಿತೇನ ಚ ದೃಢೇನ ಚ || ೩೧ ||

ದ್ವೈಧೀಭೂತಾ ಮತಿಸ್ತತ್ರ ಬಭೂವೇಂದ್ರಸಖಸ್ಯ ಚ |
ನಿರೀಕ್ಷಮಾಣೇ ಕಾಷ್ಠೇ ತು ಬಭೂವಾದ್ಭುತದರ್ಶನಂ || ೩೨ ||

ವಿಶ್ವಕರ್ಮಾ ಚ ವಿಷ್ಣುಶ್ಚ ವಿಪ್ರರೂಪಧರಾವುಭೌ |
ಆಜಗ್ಮತುರ್ಮಹಾತ್ಮಾನೌ ತಥಾ ತುಲ್ಯಾಗ್ರಜನ್ಮನೌ || ೩೩ ||

---

೨೯-೩೧. ಅಲ್ಲಿ ದೊರೆಯು ಪ್ರಕಾಶಮಾನವಾದ ಶಾಖೋಪಶಾಖೆಗಳಿಂದ ದೊಡ್ಡದಾಗಿರುವ, ಎತ್ತರವಾಗಿ ಬೆಳೆದಿರುವ, ಪುಣ್ಯಕರವಾದ, ಹಣ್ಣುಗಳಿಲ್ಲದ, ನೇತ್ರಾನಂದಕರವಾದ ದಪ್ಪನಾಗಿರುವ, ನೀರಿನಸಮೀಪದಲ್ಲಿ ನಿದ್ರಿಸುವಂತಿರುವ, ನಿಬಿಡವಾಗಿ ಕೆಂಪುಬಣ್ಣದಿಂದ ಹೊಳೆಯುತ್ತಿರುವ, ನಾಮಜಾತಿಗಳಿಲ್ಲದ ವಿಷ್ಣುವೃಕ್ಷವನ್ನು ಹಾಗೆಯೇ ಅದರ ಕೆಳಭಾಗವನ್ನೂ ಸಹ ನೋಡಿ ಸಂತೋಷಪಟ್ಟು, ದೃಢವಾಗಿರುವ, ಮೊನೆಯಾದ ಕೊಡಲಿಯಿಂದ ಅದನ್ನು ಕತ್ತರಿಸಿದನು.

೩೨. ಅಲ್ಲಿ ಇಂದ್ರದ್ಯುಮ್ನನ ಬುದ್ಧಿಯು ಭಿನ್ನವಾಯಿತು. ಅವನು ಮರವನ್ನೆಲ್ಲ ನೋಡುತ್ತಿದ್ದನು. ಆಗ ಅವನಿಗೆ ಅದ್ಭುತವಾದ ದೃಶ್ಯವು ಕಂಡಬಂದಿತು.

೩೩-೩೬. ಆಗ ವಿಶ್ವಕರ್ಮ ಮತ್ತು ವಿಷ್ಣು ಇವರಿಬ್ಬರೂ ಬ್ರಾಹ್ಮಣವೇಷವನ್ನು ಧರಿಸಿ ಮಹಾತ್ಮರು, ಸಮಾನವಯಸ್ಕರು, ಒಳ್ಳೆಯತೇಜಸ್ಸುಗಳಿಂದ ಪ್ರಕಾಶಮಾನರು, ದಿವ್ಯಗಂಧಮಾಲ್ಯಗಳನ್ನು ಧರಿಸಿದವರೂ ಆಗಿ ಇಂದ್ರದ್ಯುಮ್ನರಾಜನ ಬಳಿಗೆಬಂದು "ಮಹಾರಾಜ! ನೀನು ಇಲ್ಲಿ ಏನುಮಾಡುತ್ತಿರುವೆ?

ಜ್ವಲಮಾನೌ ಸುತೇಜೋಭಿರ್ದಿವ್ಯಸ್ರಗ್ಗಂಧಲೇಪನೌ |
ಅಥ ತೌ ತಂ ಸಮಾಸಾದ್ಯ ನೃಪಮಿಂದ್ರಸಖಂ ತದಾ ॥ ೩೪ ॥

ತಾವಬ್ರೂತಾಂ ಮಹಾರಾಜ ತ್ವಂ ಕಿಮತ್ರ ಕರಿಷ್ಯಸಿ |
ಕಿಮಯಂ ತೇ ಮಹಾಬಾಹೋ ಪಾತಿತಶ್ಚ ವನಸ್ಪತಿಃ ॥ ೩೫ ॥

ಅಸಹಾಯೋ ಮಹಾದುರ್ಗೇ ನಿರ್ಜನೇ ಗಹನೇ ವನೇ |
ಮಹಾಸಿಂಧುತಟೇ ಚೈವ ಪಾತಿತೋ ಪ್ಯೈ ಮಹಾದ್ರುಮಃ ॥ ೩೬ ॥

ತಯೋಃ ಶ್ರುತ್ವಾ ವಚಃ ಸುಭ್ರು ಸ ತು ರಾಜಾ ಮುದಾನ್ವಿತಃ |
ಬಭಾಷೇ ವಚನಾನ್ಯಾಭ್ಯಾಂ ಮೃದೂನಿ ಮಧುರಾಣಿ ಚ ॥ ೩೭ ॥

ದೃಷ್ಟ್ವಾ ತೌ ಬ್ರಾಹ್ಮಣೌ ತತ್ರ ಚಂದ್ರಸೂರ್ಯಾವಿವಾಗತೌ |
ನಮಸ್ಕೃತ್ಯ ಜಗನ್ನಾಥಾವವಾಙ್ಮುಖಮವಸ್ಥಿತಃ ॥ ೩೮ ॥

ದೇವದೇವಮನಾದ್ಯಂತಮಪ್ರಮೇಯಂ ಜಗತಃ ಪತಿಂ |
ಆರಾಧನಾಯ ಪ್ರತಿಮಾಂ ಕರೋಮೀತಿ ಮತಿರ್ಮಮ ॥ ೩೯ ॥

---

ಮಹಾಪರಾಕ್ರಮಿಯೇ! ಈ ವೃಕ್ಷವನ್ನು ಅಸಹಾಯನಾದ ನೀನು ಕತ್ತರಿಸಿದೆಯೊ ಏನು? ದುರ್ಗಮವಾದ, ಜನವಿಲ್ಲದ, ಗಹನವಾದ ಕಾಡಿನಲ್ಲಿ ಮಹಾಸಮುದ್ರತೀರದಲ್ಲಿನ ಮಹಾವೃಕ್ಷವು ಕತ್ತರಿಸಲ್ಪಟ್ಟಿದೆ'' ಎಂದು ದೊರೆಯನ್ನು ಕೇಳಿದರು.

೩೭. ಸುಂದರೀ! ಅವರಿಬ್ಬರ ಈ ಮಾತನ್ನು ಕೇಳಿ ರಾಜನು ಸಂತೋಷಪಟ್ಟು ಮಧುರವಾದ ಮೃದುನುಡಿಗಳನ್ನು ಅವರಿಗೆ ಹೇಳಿದನು.

೩೮-೪೦. ಇಂದ್ರದ್ಯುಮ್ನನು ಚಂದ್ರಸೂರ್ಯರಂತೆ ಅಲ್ಲಿ ಪ್ರಾಪ್ತರಾದ ಆ ಬ್ರಾಹ್ಮಣರಿಬ್ಬರನ್ನೂ ನೋಡಿ ಜಗನ್ನಾಥರಾದ ಅವರಿಗೆ ನಮಸ್ಕಾರಮಾಡಿ ಮುಖವನ್ನು ಕೆಳಕ್ಕೆಬಗ್ಗಿಸಿಕೊಂಡು " ದೇವದೇವನು, ಆದ್ಯಂತರಹಿತನು, ಅಪ್ರಮೇಯನು, ಜಗತ್ಪತಿಯೂ ಆದ ಹರಿಯನ್ನು ಆರಾಧಿಸುವುದಕ್ಕಾಗಿ ಪ್ರತಿಮೆಯನ್ನು ಮಾಡಬೇಕೆಂದು ನನ್ನ ಮನೋಗತವು. ಉತ್ತಮನೂ, ಮಹಾತ್ಮನೂ,

ಅಹಂ ಸ ದೇವದೇವೇನ ಪರಮೇಣ ಮಹಾತ್ಮನಾ ।
ಸ್ವಪ್ನಾಂತೇ ಚ ಸಮುದ್ದಿಷ್ಟೋ ಭವದ್ಭ್ಯಾಂ ಶ್ರಾವಿತೋ ಮಯಾ ॥ ೪೦ ॥

ಯಜ್ಞಸ್ತದ್ವಚನಂ ಶ್ರುತ್ವಾ ದೇವೇಂದ್ರಪ್ರತಿಮಸ್ಯ ಚ ।
ಪ್ರಹಸ್ಯ ತಸ್ಮೈ ವಿಶ್ವೇಶಸ್ತುಷ್ಟೋ ವಚನಮಬ್ರವೀತ್ ॥ ೪೧ ॥

ಸಾಧು ಸಾಧು ಮಹೀಪಾಲ ಯದೇತನ್ಮನ ಉತ್ತಮಂ ।
ಸಂಸಾರಸಾಗರೇ ಘೋರೇ ಕದಲೀದಲಸನ್ನಿಭೇ ॥ ೪೨ ॥

ನಿಸ್ಸಾರೇ ದುಃಖಬಹುಲೇ ಕಾಮಕ್ರೋಧಸಮಾಕುಲೇ ।
ಇಂದ್ರಿಯಾವರ್ತಕಲಿಲೇ ದುಸ್ತರೇ ಲೋಮಹರ್ಷಣೇ ॥ ೪೩ ॥

ನಾನಾವ್ಯಾಧಿಶತಾವರ್ತೇ ಚಲಬುದ್ಬುದಸನ್ನಿಭೇ ।
ಯತಸ್ತೇ ಮತಿರುತ್ಪನ್ನಾ ವಿಷ್ಣೋರಾರಾಧನಾಯ ವೈ ॥ ೪೪ ॥

ಧನ್ಯಸ್ತ್ವಂ ನೃಪಶಾರ್ದೂಲ ಗುಣೈಃ ಸರ್ವೈರಲಂಕೃತಃ ।
ಸಪ್ರಜಾ ಧರಣೀ ಧನ್ಯಾ ಸಶೈಲವನಪತ್ತನಾ ॥ ೪೫ ॥

---

ಆದ ದೇವದೇವನು ನೀವು ಹೀಗೆ ಕೇಳಬಿರೆಂದು ಸ್ವಪ್ನದಲ್ಲಿ ನನಗೆ ಅಪ್ಪಣೆ ಮಾಡಿರುವನು ” ಎಂದು ಹೇಳಿದನು.

೪೧. ಯಜ್ಞನಾಮಕನಾದ ಹರಿಯು ದೇವೇಂದ್ರನಂತಿರುವ ಆ ರಾಜನ ಮಾತನ್ನು ಕೇಳಿ ಸಂತುಷ್ಟನಾಗಿ ನಕ್ಕು ಅವನಿಗೆ ಈರೀತಿ ಹೇಳಿದನು.

೪೨–೪೬. ಭೂಪಾಲ ! ಒಳ್ಳೆಯದು, ಒಳ್ಳೆಯದು ! ಇದು ಉತ್ತಮವಾದ ಮನೋಗತವು ! ಭಯಂಕರವು, ಬಾಳೆಯ ಎಲೆಗೆ ಸಮಾನವು, ನಿಸ್ಸಾರವು, ಬಹುದುಃಖಗಳಿಂದ ಕೂಡಿರುವುದು, ಕಾಮಕ್ರೋಧವ್ಯಾಪ್ತವು, ಇಂದ್ರಿಯಗಳೆಂಬ ಸುಳಿಗಳಿಂದ ಆವರಿಸಿರುವುದು, ದಾಟಲಶಕ್ಯವು, ನೂರಾರುರೋಗಗಳಿಂದ ಕೂಡಿರುವುದು, ಚಲಿಸುತ್ತಿರುವ ನೀರುಗುಳ್ಳೆಗಳಿಗೆ ಸಮಾನವಾದುದೂ ಆಗಿರುವ ಈ ಘೋರಸಂಸಾರದಲ್ಲಿ ಸಿಲುಕಿ ಬಳಲುತ್ತಿರುವ ನಿನಗೆ ವಿಷ್ಣ್ವಾರಾಧನೆ ಮಾಡಬೇಕೆಂಬ ಬುದ್ಧಿಯುಂಟಾಗಿರುವಕಾರಣ ನೀನೇ ಧನ್ಯನು !

ಸಪುರಗ್ರಾಮನಗರಾ ಚತುರ್ವರ್ಣೈರಲಂಕೃತಾ ।
ಯತ್ರ ತ್ವಂ ನೃಪಶಾರ್ದೂಲ ಪ್ರಜಾಪಾಲಯಿತಾ ಪ್ರಭುಃ ॥ ೪೬ ॥

ಏಹ್ಯೇಹಿ ತ್ವಂ ಮಹಾಭಾಗ ದ್ರುಮೇಽಸ್ಮಿನ್ ಸುಖಶೀತಲೇ ।
ಆವಾಭ್ಯಾಂ ಸಹ ತಿಷ್ಠ ತ್ವಂ ಕಥಾಭಿರ್ಧರ್ಮಸಂಶ್ರಿತಃ ॥ ೪೭ ॥

ಅಯಂ ತವ ಸಹಾಯಾರ್ಥಮಾಗತಃ ಶಿಲ್ಪಿನಾಂ ವರಃ ।
ವಿಶ್ವಕರ್ಮಸಮಃ ಸಾಕ್ಷಾನ್ನಿಪುಣಃ ಸರ್ವಕರ್ಮಸು ॥ ೪೮ ॥

ಮಯೋದ್ದಿಷ್ಟಾಂ ತು ಪ್ರತಿಮಾಂ ಕರೋತ್ಯೇಷ ತಟಂ ತ್ಯಜ ।
ಶ್ರುತ್ವೈವಂ ವಚನಂ ತಸ್ಯ ತದಾ ರಾಜಾ ದ್ವಿಜನ್ಮನಃ ॥ ೪೯ ॥

ಸಾಗರಸ್ಯ ತಟಂ ತ್ಯಕ್ತ್ವಾ ಗತ್ವಾ ತಸ್ಯ ಸಮೀಪತಃ ।
ತಸ್ಥೌ ಸ ನೃಪತಿಶ್ರೇಷ್ಠೋ ವೃಕ್ಷಛಾಯಾಂ ಸುಶೀತಲಾಂ ॥ ೫೦ ॥

---

ನೃಪಶ್ರೇಷ್ಠಾ ! ನೀನು ಸಕಲಗುಣಭೂಷಿತನು, ನೀನು ದೊರೆಯಾಗಿ ಪ್ರಜೆಗಳನ್ನು ಪಾಲಿಸುತ್ತಿರುವ ದೇಶವು, ನಿನ್ನ ಪ್ರಜೆಗಳು, ಭೂಮಿ, ಪರ್ವತ, ವನ, ಪಟ್ಟಣ, ಗ್ರಾಮ, ನಗರ, ಅಲ್ಲಿರುವ ಚತುರ್ವರ್ಣದವರು ಎಲ್ಲರೂ ಧನ್ಯರು.

೪೭-೪೯. ಧನ್ಯನೇ! ಬಾ! ಈ ಶೀತಲವಾದ ವೃಕ್ಷಛಾಯೆಯಲ್ಲಿ ನಾವಿಬ್ಬರೂ ಕುಳಿತುಕೊಳ್ಳೋಣ! ನೀನು ಕಥೆಗಳಿಂದ ಧರ್ಮವನ್ನು ಆಶ್ರಯಿಸಿರುವೆ.

ಇವನು ಶಿಲ್ಪಿಶ್ರೇಷ್ಠನು, ವಿಶ್ವಕರ್ಮನಿಗೆ ಸಮಾನನು, ಸಕಲಕರ್ಮಗಳಲ್ಲಿಯೂ ನಿಪುಣನು, ನಿನ್ನ ಸಹಾಯಕ್ಕಾಗಿ ಬಂದಿರುವನು. ಇವನು ನಾನು ಹೇಳಿರುವ ಪ್ರತಿಮೆಯನ್ನು ಮಾಡಿಕೊಡುವನು. ದಡವನ್ನು ಬಿಟ್ಟು ಇಲ್ಲಿಗೆ ಬಾ ಎಂದು ಹೇಳಿದನು.

೪೯-೫೦. ಬ್ರಾಹ್ಮಣರೂಪಿಯಾದ ಆ ಹರಿಯ ಮಾತನ್ನು ಕೇಳಿ ಆಗ ರಾಜನು ಸಮುದ್ರತೀರವನ್ನು ಬಿಟ್ಟು ಅವನ ಸಮೀಪಕ್ಕೆ ಹೋಗಿ ತಣ್ಣಗಿರುವ ಮರದ ನೆರಳಿನಲ್ಲಿ ಕುಳಿತನು

ತತಸ್ತಸ್ಮೈ ಸ ವಿಶ್ವಾತ್ಮಾ ತಥಾಕಾರಾಂ ತಥಾಕೃತಿಂ ।
ಶಿಲ್ಪಿಮುಖ್ಯಾಯ ವಿಧಿಜೇ ಕುರುಷ್ವೇತ್ಯಭ್ಯಭಾಷತ ॥ ೫೧ ॥

ಕೃಷ್ಣರೂಪಂ ಪರಂ ಶಾಂತಂ ಪದ್ಮಪತ್ರಾಯತೇಕ್ಷಣಂ ।
ಶ್ರೀವತ್ಸಕೌಸ್ತುಭಧರಂ ಶಂಖಚಕ್ರಗದಾಧರಂ ॥ ೫೨ ॥

ಗೌರಂ ಗೋಕ್ಷೀರವರ್ಣಾಭಂ ದ್ವಿತೀಯಂ ಸ್ವಸ್ತಿಕಾಂಕಿತಂ ।
ಲಾಂಗಲಾಸ್ತ್ರಧರಂ ದೇವಮನಂತಾಖ್ಯಂ ಮಹಾಬಲಂ ॥ ೫೩ ॥

ದೇವದಾನವಗಂಧರ್ವಯಕ್ಷವಿದ್ಯಾಧರೋರಗೈಃ ।
ನ ವಿಜ್ಞಾತೋ ಹಿ ತಸ್ಯಾಂತಸ್ತೇನಾನಂತ ಇತಿ ಸ್ಮೃತಃ ॥ ೫೪ ॥

---

೫೧. ತರುವಾಯ ಆ ವಿಶ್ವಾತ್ಮನು ಶಿಲ್ಪಿಶ್ರೇಷ್ಠನಾದ ಆ ವಿಶ್ವಕರ್ಮನಿಗೆ ಆಯಾಯಾ ಆಕಾರಗಳುಳ್ಳ ಪ್ರತಿಮೆಯನ್ನು ಮಾಡಬೇಕೆಂದು ಹೇಳಿದನು.

೫೨. ಹೇಗೆಂದರೆ :—ಶಾಂತಿಭಾವೋಪೇತವು, ಕಮಲಪತ್ರದಂತೆ ವಿಶಾಲವಾದ ಕಣ್ಣುಗಳುಳ್ಳುದು, ಶ್ರೀವತ್ಸ ಮತ್ತು ಕೌಸ್ತುಭಮಣಿಗಳನ್ನು ಧರಿಸಿರುವುದು, ಶಂಖಚಕ್ರಗದೆಗಳನ್ನು ಧರಿಸಿರುವುದೂ ಆಗಿರುವ ಉತ್ತಮವಾದ ಕೃಷ್ಣವಿಗ್ರಹವು ಒಂದು.

೫೩. ಗೌರವರ್ಣೋಪೇತವು, ಹಸುವಿನಹಾಲಿನಂತೆ ಹೊಳೆಯುತ್ತಿರುವುದು, ಸ್ವಸ್ತಿಕಾಚಿಹ್ನೆಯಿಂದ ಗುರ್ತಿಸಿರುವುದು, ನೇಗಿಲೆಂಬ ಅಸ್ತ್ರವನ್ನು ಧರಿಸಿರುವುದು, ಅನಂತನಾಮಕನೂ, ಮಹಾಬಲಿಷ್ಠನೂ ಆದ ಬಲರಾಮನ ವಿಗ್ರಹವು ಎರಡನೆಯದು.

೫೪. ದೇವತೆಗಳು, ದಾನವರು, ಗಂಧರ್ವರು, ಯಕ್ಷರು, ವಿದ್ಯಾಧರ, ಉರಗ ಇವರಾರೂ ಬಲದೇವನದ ಅಂತವನ್ನು ತಿಳಿಯಲಾರದಾದಕಾರಣ ಅವನಿಗೆ ಅನಂತ ಎಂದು ಹೆಸರು ಬಂದಿದೆ,

ಭಗಿನೀಂ ವಾಸುದೇವಸ್ಯ ರುಕ್ಮವರ್ಣಾಂ ಸುಶೋಭನಾಂ |
ತೃತೀಯಾಂ ವೈ ಸುಭದ್ರಾಂ ಚ ಸರ್ವಲಕ್ಷಣಲಕ್ಷಿತಾಂ || ೫೫ ||

ಶ್ರುತ್ವೈತದ್ವಚನಂ ತಸ್ಯ ವಿಶ್ವಕರ್ಮಾ ಸುಕರ್ಮಕೃತ್ |
ತತ್ಕ್ಷಣಾತ್ಕಾರಯಾಮಾಸ ಪ್ರತಿಮಾಃ ಶುಭಲಕ್ಷಣಾಃ || ೫೬ ||

ಕುಂಡಲಾಭ್ಯಾಂ ವಿಚಿತ್ರಾಭ್ಯಾಂ ಕರ್ಣಾಭ್ಯಾಂ ಸುವಿರಾಜಿತಾಃ |
ಚಕ್ರಲಾಂಗಲವಿನ್ಯಾಸಹಸ್ತಾಭ್ಯಾಂ ಭಾನುಸಂಮತಾಃ || ೫೭ ||

ಪ್ರಥಮಂ ಶುಕ್ಲವರ್ಣಾಭಂ ಶಾರದೇಂದುಸಮಪ್ರಭಂ |
ಸುರಕ್ತಾಕ್ಷಂ ಮಹಾಕಾಯಂ ಫಣಾವಿಕಟಮಸ್ತಕಂ || ೫೮ ||

ನೀಲಾಂಬರಧರಂ ಚೋಗ್ರಂ ಬಲಮುದ್ಧತಕುಂಡಲಂ |
ಮಹಾಹಲಧರಂ ದಿವ್ಯಂ ಮಹಾಮುಸಲಧಾರಿಣಂ || ೫೯ ||

---

೫೫. ಸುವರ್ಣವರ್ಣದಂತೆ ಹೊಳೆಯುತ್ತಿರುವ ಅತ್ಯಂತ ಮಂಗಳಕರವಾದ, ಸಕಲ ಲಕ್ಷಣಗಳಿಂದ ಕೂಡಿದ, ಕೃಷ್ಣನ ಭಗಿನಿಯಾದ ಸುಭದ್ರೆಯ ವಿಗ್ರಹವು ಮೂರನೆಯದು. ಈ ರೀತಿ ಮೂರು ವಿಗ್ರಹಗಳನ್ನು ಮಾಡಬೇಕೆಂದು ಹೇಳಿದನು.

೫೬. ವಿಶ್ವಾತ್ಮನಾದ ಬ್ರಾಹ್ಮಣನ ಈ ಮಾತನ್ನು ಕೇಳಿ ಚಿತ್ರಶಿಲ್ಪ ಕುಶಲನಾದ ವಿಶ್ವಕರ್ಮನು ತಕ್ಷಣದಲ್ಲಿ ಶುಭಲಕ್ಷಣಗಳಿಂದ ಕೂಡಿದ ಮೂರು ಪ್ರತಿಮೆಗಳನ್ನೂ ನಿರ್ಮಾಣಮಾಡಿದನು.

೫೭. ಆ ಪ್ರತಿಮೆಗಳು ವಿಚಿತ್ರಕುಂಡಲಗಳನ್ನು ಧರಿಸಿರುವ ಕಿವಿಗಳಿಂದ ಹೊಳೆಯುತ್ತಿದ್ದುವು. ಮತ್ತು ಚಕ್ರನೇಗಿಲುಗಳನ್ನು ಹಿಡಿದಿರುವ ಕೈಗಳಿಂದ ಸೂರ್ಯನಂತೆ ವಿರಾಜಿಸುತ್ತಿದ್ದುವು.

೫೮-೬೩. ಹೇಗೆಂದರೆ :—ಶರತ್ಕಾಲದ ಚಂದ್ರನಂತೆ ಶುಕ್ಲವರ್ಣದಿಂದ ವಿರಾಜಿಸುತ್ತಿರುವ, ಅತ್ಯಂತರಾಗವನ್ನು ಬೀರುತ್ತಿರುವ ನೇತ್ರವುಳ್ಳ, ದೊಡ್ಡ ಶರೀರವುಳ್ಳ, ಸರ್ಪದ ಹೆಡೆಯಂತೆ ವಿಶಾಲವಾದ ಶಿರಸ್ಸುಳ್ಳ ನೀಲ[illegible]

ದ್ವಿತೀಯಂ ಪುಂಡರೀಕಾಕ್ಷಂ ನೀಲಜೀಮೂತಸನ್ನಿಭಂ ।
ಅತಸೀಪುಷ್ಪಸಂಕಾಶಂ ಪದ್ಮಪತ್ರಾಯತೇಕ್ಷಣಂ ॥ ೬೦ ॥

ಶ್ರೀವತ್ಸವಕ್ಷಸಂ ಭ್ರಾಜತ್ಪೀತವಾಸಸಮುಚ್ಯುತಂ ।
ಚಕ್ರಶಂಬುಕರಂ ದಿವ್ಯಂ ಸರ್ವಪಾಪಹರಂ ಹರಿಂ ॥ ೬೧ ॥

ತೃತೀಯಾಂ ಸ್ವರ್ಣವರ್ಣಾಭಾಂ ಪದ್ಮಪತ್ರಾಯತೇಕ್ಷಣಾಂ ।
ವಿಚಿತ್ರವಸ್ತ್ರಸಂಛನ್ನಾಂ ಹಾರಕೇಯೂರಭೂಷಿತಾಂ ॥ ೬೨ ॥

ವಿಚಿತ್ರಾಭರಣೋಪೇತಾಂ ರತ್ನಮಾಲಾವಲಂಬಿತಾಂ ।
ಪೀನೋನ್ನತಕುಚಾಂ ರಮ್ಯಾಂ ವಿಶ್ವಕರ್ಮಾ ವಿನಿರ್ಮಮೇ ॥ ೬೩ ॥

---

ಪ್ರಕಾಶಮಾನವಾದ, ಅಗಸೆಯಹೂವಿನಂತಿರುವ, ಕಮಲಪತ್ರದಂತೆ ವಿಶಾಲವಾದ ಕಣ್ಣುಗಳುಳ್ಳ, ವಕ್ಷಃಸ್ಥಳದಲ್ಲಿ ಶ್ರೀವತ್ಸಾಂಕಿತವುಳ್ಳ, ಪ್ರಕಾಶಮಾನವಾದ ಪೀತಾಂಬರವನ್ನುಟ್ಟಿರುವ, ಕರದಲ್ಲಿ ಚಕ್ರ ಶಂಖಗಳನ್ನು ಹಿಡಿದಿರುವ, ದಿವ್ಯವಾದ ಸಕಲ ಪಾಪಗಳನ್ನೂ ನಾಶಮಾಡುವ, ಹರಿಯ ಪ್ರತಿಮೆಯೇ ಮೊದಲನೆಯದು.

ನೀಲವಸ್ತ್ರವನ್ನುಟ್ಟಿರುವುದು, ಉಗ್ರವು, ಅದ್ಭುತಕುಂಡಲವುಳ್ಳದು, ದೊಡ್ಡನೇಗಿಲು, ಮಹಾಮುಸಲ (ಒನಕೆ) ಗಳನ್ನು ಧರಿಸಿರುವುದು, ಪದ್ಮದಂತೆ ಕಣ್ಣುಗಳುಳ್ಳದೂ ಆಗಿರುವ ಬಲರಾಮನ ಪ್ರತಿಮೆಯು ಎರಡನೆಯದು.

ಸುವರ್ಣವರ್ಣದಂತೆ ಹೊಳೆಯುತ್ತಿರುವುದು, ಪದ್ಮಪತ್ರದಂತೆ ವಿಸ್ತಾರವಾದ ಕಣ್ಣುಗಳುಳ್ಳ, ವಿಚಿತ್ರ ವಸ್ತ್ರಗಳನ್ನು ಹೊದ್ದುಕೊಂಡಿರುವ, ಹಾರ, ಕೇಯೂರಗಳಿಂದಲಂಕೃತವಾದ, ವಿವಿಧಾಭರಣಯುಕ್ತವಾದ, ಕೊರಳಿನಲ್ಲಿ ಜೋಲುತ್ತಿರುವ ರತ್ನಖಚಿತಮಾಲೆಗಳುಳ್ಳ, ಪುಷ್ಟವಾದ ಉನ್ನತಸ್ತನಗಳುಳ್ಳ, ಮನೋಹರವಾದ ಸುಭದ್ರಾದೇವಿಯ ಪ್ರತಿಮೆಯು ಮೂರನೆಯದು. ಈರೀತಿಯಾಗಿ ಅದ್ಭುತವಾದ ಮೂರುಪ್ರತಿಮೆಗಳನ್ನು ವಿಶ್ವಕರ್ಮನು ನಿರ್ಮಾಣ ಮಾಡಿದನು.

ಸ ತು ರಾಜಾಪ್ಯದ್ಭುತಂ ದೃಷ್ಟ್ವಾ ಕ್ಷಣೇನೈಕೇನ ನಿರ್ಮಿತಾಃ ।
ದಿವ್ಯವಸ್ತ್ರಯುಗಾಚ್ಛನ್ನಾ ಹಾರರತ್ನೈರಲಂಕೃತಾಃ ॥ ೬೪ ॥

ಸರ್ವಲಕ್ಷಣಸಂಪನ್ನಾಃ ಪ್ರತಿಮಾಸ್ಸುಮನೋಹರಾಃ ।
ವಿಸ್ಮಯಂ ಪರಮಂ ಗತ್ವಾ ಇದಂ ವಚನಮಬ್ರವೀತ್ ॥ ೬೫ ॥

ಕಿಂ ದೇವೌ ಸಮನುಪ್ರಾಪ್ತೌ ದ್ವಿಜರೂಪಧರಾವುಭೌ ।
ದ್ವಾವಪ್ಯದ್ಭುತಕರ್ಮಾಣೌ ದೇವವೃತ್ತೌ ತ್ವಮಾನುಷೌ ॥ ೬೬ ॥

ದೇವೌ ವಾ ಮಾನುಷೌ ವಾಪಿ ಯಕ್ಷವಿದ್ಯಾಧರೌ ವರೌ ।
ವಿಷ್ಣುಬ್ರಹ್ಮಹೃಷೀಕೇಶೌ ವಸುಧಾಂ ಕಿಂ ತು ವಾಶ್ವಿನೌ ॥ ೬೭ ॥

ನ ವೇದ್ಮಿ ಸತ್ಯವದ್ಭಾವೌ ಮಾಯಾರೂಪೇಣ ಸಂಸ್ಥಿತೌ ।
ಯುವಾಂ ಗತೋಽಸ್ಮಿ ಶರಣಮಾತ್ಮಾನಂ ವದ ತಂ ಮಮ ॥ ೬೮ ॥

---

೬೪-೬೫. ಆ ಇಂದ್ರದ್ಯುಮ್ನರಾಜನಾದರೋ ಕ್ಷಣಮಾತ್ರದಲ್ಲಿ ನಿರ್ಮಾಣ ಮಾಡಿದ ಮನೋಹರ ವಸ್ತ್ರದ್ವಯದಿಂದ ಆಚ್ಛಾದಿತವಾದ, ಹಾರರತ್ನಗಳಿಂದಲಂಕೃತವಾದ, ಸಕಲ ಲಕ್ಷಣಸಂಪನ್ನವಾದ, ಅತ್ಯಂತಮನೋಹರವಾದ ಆ ಪ್ರತಿಮೆಗಳನ್ನು ನೋಡಿ ಅದ್ಭುತದರ್ಶನದಿಂದ ಅತ್ಯಂತ ವಿಸ್ಮಯವನ್ನು ಹೊಂದಿ ಹೀಗೆ ನುಡಿದನು.

೬೬-೬೮. ದ್ವಿಜರೇ! ಬ್ರಾಹ್ಮಣವೇಷಧಾರಿಗಳಾಗಿ ಬಂದಿರುವ ನೀವಿಬ್ಬರೂ ಆಶ್ಚರ್ಯಕರ ವ್ಯಾಪಾರವನ್ನು ಮಾಡುತ್ತಿರುವಿರಿ. ಇದು ದೇವತೆಗಳ ಕೆಲಸವೇ ಹೊರತು ಮನುಷ್ಯರ ಕೃತಿಯಲ್ಲ

ನೀವು ದೇವತೆಗಳೇ? ಅಥವಾ ಮನುಷ್ಯರೇ? ಉತ್ತಮರಾದ ಯಕ್ಷವಿದ್ಯಾಧರರೇ? ಇಂದ್ರಿಯೇಶರಾದ ವಿಷ್ಣುಬ್ರಹ್ಮರೇ? ಅಶ್ವಿನೀದೇವತೆಗಳೇ? ಭೂಮಿಗೆ ಬಂದಿರುವ ನೀವು ಯಾರು? ನಿಮ್ಮ ನಿಜರೂಪವಾವುದು? ನಾನು ತಿಳಿಯಲಾರೆನು. ಮಾಯಾರೂಪದಿಂದಿರುವಿರಿ. ಹೇಗಾದರೂ ಆಗಲಿ ಪೂಜ್ಯರಾದ ನಿಮ್ಮನ್ನು ಶರಣುಹೊಂದಿರುವೆನು. ದಯೆಮಾಡಿ ನಿಮ್ಮ ನಿಜಸ್ವರೂಪವನ್ನು ತಿಳಿಸಿರಿ ಎಂದು ರಾಜನು ಬ್ರಾಹ್ಮಣರನ್ನು ಪ್ರಾರ್ಥಿಸಿದನು.

ದ್ವಿಜ ಉವಾಚ

ನಾಹಂ ದೇವೋ ನ ಯಕ್ಷೋ ವಾ ನ ದೈತ್ಯೋ ನ ಚ ದೇವರಾಟ್ ।
ನ ಬ್ರಹ್ಮಾ ನ ಚ ರುದ್ರೋಽಹಂ ವಿದ್ಧಿ ಮಾಂ ಪುರುಷೋತ್ತಮಮ್ ॥ ೭೯ ॥

ಆರ್ತಿಘ್ನಂ ಸರ್ವಲೋಕಾನಾಮನಂತಬಲಪೌರುಷಂ ।
ಅರ್ಚನೀಯೋ ಹಿ ಭೂತಾನಾಮಂತೋ ಯಸ್ಯ ನವಿದ್ಯತೇ ॥ ೮೦ ॥

ಯೋ ವ್ರತೇ ಸರ್ವಶಾಸ್ತ್ರೇಷು ವೇದಾಂತೇಷು ನಿಗದ್ಯತೇ ।
ಯದುಕ್ತಂ ಧ್ಯಾನಗಮ್ಯಂ ಚ ವಾಸುದೇವೇತಿ ಯೋಗಿಭಿಃ ॥ ೮೧ ॥

ಅಯಮೇವ ಸ್ವಯಂ ಬ್ರಹ್ಮಾ ಅಹಂ ವಿಷ್ಣುಃ ಶಿವೋ ಹ್ಯಹಂ ।
ಇಂದ್ರೋಽಹಂ ದೇವರಾಜಶ್ಚ ಜಗತ್ಸಂಯಮನೋ ಯಮಃ ॥ ೮೨ ॥

ಪೃಥಿವ್ಯಾದೀನಿ ಭೂತಾನಿ ತ್ರೇತಾಗ್ನಿರ್ಹುತಭುಗ್ಯಥಾ ।
ವರುಣೋಽಪಾಂಪತಿಶ್ಚಾಹಂ ಧರಿತ್ರೀ ಚ ಮಹೀಧರಾಃ ॥ ೮೩ ॥

---

೭೯. ರಾಜನೇ! ನಾನು ದೇವನಲ್ಲ! ಯಕ್ಷನಲ್ಲ! ಇಂದ್ರನಲ್ಲ! ಬ್ರಹ್ಮನಲ್ಲ! ರುದ್ರನಲ್ಲ! ನನ್ನನ್ನು ಪುರುಷೋತ್ತಮನೆಂದು ತಿಳಿ.

೮೦-೮೧. ನಾನು ಸಕಲಲೋಕಗಳಿಗೂ ಮನೋವ್ಯಥೆಯನ್ನು ಪರಿಹರಿಸತಕ್ಕವನು. ಅಪರಿಮಿತಬಲಪರಾಕ್ರಮವುಳ್ಳವನು. ಪ್ರಾಣಿಗಳಿಗೆಲ್ಲಾ ಪೂಜ್ಯನು. ನನಗೆ ಅಂತ್ಯವಿಲ್ಲ. ನಾನೇ ವ್ರತಗಳಲ್ಲೆಲ್ಲಾ ಪೂಜಿಸಲ್ಪಡುವವನು. ಸಕಲ ಶಾಸ್ತ್ರ ಮತ್ತು ವೇದಾಂತಗಳಲ್ಲಿ ಪ್ರತಿಪಾದ್ಯನು. ನಾನೇ ಯೋಗಿಗಳ ಧ್ಯಾನಗಮ್ಯನಾಗಿ ವಾಸುದೇವನೆನಿಸಿರುವೆನು.

೮೨-೮೪. ರಾಜನೇ! ಬ್ರಹ್ಮ, ವಿಷ್ಣು, ಶಿವ, ಇಂದ್ರ, ದೇವರಾಜ, ಜಗಚ್ಛಿಕ್ಷಕನಾದ ಯಮ, ಪೃಥಿವ್ಯಾದಿಭೂತಗಳು, ಹೋಮಮಾಡಿದ ವಸ್ತುವನ್ನು ಭೋಗಿಸುವ ತ್ರೇತಾಗ್ನಿ, ಜಲಪತಿಯಾದ ವರುಣ, ಧರಿತ್ರೀ, ಮಹೀಧರ, ಸ್ಥಿರಚರಾತ್ಮಕ ಸಕಲವಸ್ತುಗಳು ಇವೆಲ್ಲವೂ ನಾನೇ ಎಂದರೆ ಎಲ್ಲಾ ವಸ್ತು

ಯತ್ಕಿಂಚಿದ್ಯನ್ಮಯಂ ಲೋಕೇ ಜಗತ್‌ಸ್ಥಾವರಜಂಗಮಂ ।
ವಿಶ್ವರೂಪಂ ಚ ಮಾಂ ವಿದ್ಧಿ ಮತ್ತೋಽನ್ಯನ್ನಾಸ್ತಿ ಕಿಂಚನ ॥ ೭೪ ॥

ಪ್ರೀತೋಽಹಂ ತೇ ನೃಪಶ್ರೇಷ್ಠ ವರಂ ವರಯ ಸುವ್ರತ ।
ಯದಿಷ್ಟಂ ತತ್ ಪ್ರಯಚ್ಛಾಮಿ ಹೃದಿ ಯತ್ತೇ ವ್ಯವಸ್ಥಿತಂ ॥ ೭೫ ॥

ಮದ್ದರ್ಶನಮಪುಣ್ಯಾನಾಂ ಸ್ವಪ್ನಾಂತೇಽಪಿ ನ ಜಾಯತೇ ।
ತ್ವಂ ಪುನರ್ದೃಢಭಕ್ತಿತ್ವಾತ್ಪ್ರತ್ಯಕ್ಷಂ ದೃಷ್ಟವಾನಸಿ ॥ ೭೬ ॥

ಶ್ರುತ್ವೈವಂ ವಾಸುದೇವಸ್ಯ ವಚನಂ ತಸ್ಯ ಮೋಹಿನಿ ।
ರೋಮಾಂಚಿತತನುರ್ಭೂತ್ವಾ ಇದಂ ಸ್ತೋತ್ರಂ ಜಗೌ ನೃಪಃ ॥ ೭೭ ॥

---

ಗಳಲ್ಲಿಯೂ ನಾನೇ ಅಂತರ್ಗತನಾಗಿರುವೆನು. ನನ್ನನ್ನು ಬಿಟ್ಟು ಸ್ವತಂತ್ರವಾಗಿರುವುದಾವುದೂ ಇಲ್ಲವೆಂದು ಭಾವ. ನನ್ನನ್ನು ವಿಶ್ವರೂಪನೆಂದು ತಿಳಿ ನನ್ನಹೊರತು ಬೇರಾವುದೂ ಸ್ವತಂತ್ರವಾದುದಿಲ್ಲ.

೭೫. ನೃಪಶ್ರೇಷ್ಠನೇ! ನೀನು ಸಮೀಚೀನವ್ರತವನ್ನು ಮಾಡಿರುವೆಯಾಗಿ ನಿನ್ನ ವಿಷಯದಲ್ಲಿ ಪ್ರಸನ್ನನಾಗಿರುವೆನು. ನಿನಗೆ ಬೇಕಾದುದನ್ನು ಕೊಡುವೆನು. ನಿನ್ನ ಮನಸ್ಸಿನಲ್ಲಿ ಏನಿದೆ? ವರವನ್ನು ಕೇಳು.

೭೬. ಪುಣ್ಯವಂತರಲ್ಲದವರಿಗೆ ಸ್ವಪ್ನದಲ್ಲಿಯೂ ನನ್ನ ದರ್ಶನವಾಗುವುದಿಲ್ಲ. ನೀನು ದೃಢವಾದ ಭಕ್ತಿಯುಳ್ಳವನಾದುದರಿಂದ ನನ್ನನ್ನು ಪ್ರತ್ಯಕ್ಷವಾಗಿ ನೋಡಿರುವೆ ಎಂದು ದ್ವಿಜನು ರಾಜನಿಗೆ ಹೇಳಿದನು.

೭೭. ಮೋಹಿನೀ! ವಾಸುದೇವನು ಹೇಳಿದ ಈ ಮಾತನ್ನು ಕೇಳಿ ರಾಜನು ರೋಮಾಂಚಿತಗಾತ್ರನಾಗಿ ಹೀಗೆ ಸ್ತೋತ್ರಮಾಡಿದನು.

ರಾಜೋವಾಚ

ಶ್ರಿಯಃ ಕಾಂತ ನಮಸ್ತೇಽಸ್ತು ಶ್ರೀಪತೇ ಪೀತವಾಸಸೇ ।
ಶ್ರೀಶ ಶ್ರೀದ ಶ್ರೀನಿವಾಸ ನಮಸ್ತೇ ಶ್ರೀನಿಕೇತನ ॥ ೭೮ ॥

ಆದ್ಯಂ ಪುರುಷಮೀಶಾನಂ ಸರ್ವೇಶಂ ಸರ್ವತೋಮುಖಂ ।
ನಿಷ್ಕಲಂ ಪರಮಂ ದೇವಂ ಪ್ರಣತೋಽಸ್ಮಿ ಸನಾತನಂ ॥ ೭೯ ॥

ಶಬ್ದಾತೀತಂ ಗುಣಾತೀತಂ ಭಾವಾಭಾವವಿವರ್ಜಿತಂ ।
ನಿರ್ಲೇಪಂ ನಿರ್ಗುಣಂ ಸೂಕ್ಷ್ಮಂ ಸರ್ವಜ್ಞಂ ಸರ್ವಭಾವನಂ ॥ ೮೦ ॥

ಶಂಖಚಕ್ರಧರಂ ದೇವಂ ಗದಾಮುಸಲಧಾರಿಣಂ ।
ನಮಸ್ಯೇ ವರದಂ ದೇವಂ ನೀಲೋತ್ಪಲದಲಚ್ಛವಿಂ ॥ ೮೧ ॥

ನಾಗಪರ್ಯಂಕಶಯನಂ ಕ್ಷೀರೋದಾರ್ಣವವಾಸಿನಂ ।
ನಮಸ್ಯೇಽಹಂ ಹೃಷೀಕೇಶಂ ಸರ್ವಪಾಪಹರಂ ಹರಿಂ ॥ ೮೨ ॥

---

೭೮. ರಾಜನು ಹೇಳಿದನು: —ಶ್ರೀನಾಥ! ನಿನಗೆ ನಮಸ್ಕಾರ! ಲಕ್ಷ್ಮೀಪತಿಯು, ಪೀತಾಂಬರಧಾರಿಯು, ಐಶ್ವರ್ಯದಾತನು, ಸಂಪನ್ನಿಲಯಾಮುಕನು, ಸಂಪನ್ನಿಧಿಯೂ ಆದ ಶ್ರೀನಿವಾಸ! ನಿನಗೆ ನಮಸ್ಕಾರ!

೭೯. ಜಗದಾದಿಕಾರಣನು, ಪೂರ್ಣನು, ಈಶ್ವರನು, ಸರ್ವೇಶನು, ವ್ಯಾಪಕನು, ನಿಷ್ಕಲನು, ಸನಾತನನೂ ಆದ ಪರಮದೇವನನ್ನು ನಮಸ್ಕರಿಸುವೆನು!

೮೦-೮೧. ಸಂಪೂರ್ಣವಾಗಿ ಶಬ್ದಗೋಚರನಾಗದಿರುವವನು, ಪ್ರಾಕೃತ ಗುಣಗಳಿಲ್ಲದವನು, ಉತ್ಪತ್ತಿನಾಶರಹಿತನು, ಕರ್ಮಲೇಪವಿಧುರನು, ಸೂಕ್ಷ್ಮನು, ಸರ್ವಜ್ಞನು, ಸರ್ವೋತ್ಪಾದಕನು, ಶಂಖಚಕ್ರಧಾರಿಯು, ಗದೆ, ಮುಸಲಗಳನ್ನು ಹಿಡಿದಿರುವವನು, ವರಪ್ರದನು, ಕನ್ನೈದಿಲೆಯ ದಳದಂತೆ ಕಾಂತಿಯುಳ್ಳವನೂ ಆದ ದೇವನನ್ನು ನಮಸ್ಕರಿಸುವೆನು!

೮೨. ಶೇಷ ಪರ್ಯಂಕದಲ್ಲಿ ಶಯನಮಾಡಿರುವವನು, ಕ್ಷೀರಸಾಗರವಾಸಿಯು, ಇಂದ್ರಿಯೇಶನು, ಸಕಲ ಪಾಪಪರಿಹಾರಕನೂ ಆಗಿರುವ ಹರಿಯನ್ನು ನಾನು ನಮಸ್ಕರಿಸುವೆನು!

ಪುನಸ್ತ್ವಾಂ ದೇವದೇವೇಶ ನಮಸ್ಯೇ ವರದಂ ವಿಭುಂ ।
ಸರ್ವಲೋಕೇಶ್ವರಂ ವಿಷ್ಣುಂ ಮೋಕ್ಷಕಾರಣಮವ್ಯಯಂ ॥ ೮೩ ॥

ಏವಂ ಸ್ತುತ್ವಾ ತು ತಂ ದೇವಂ ಪ್ರಣಿಪತ್ಯ ಕೃತಾಂಜಲಿಃ ।
ಉವಾಚ ಪ್ರಣತೋ ಭೂತ್ವಾ ನಿಪತ್ಯ ವಸುಧಾತಲೇ ॥ ೮೪ ॥

ಪ್ರೀತೋಽಸಿ ಯದಿ ಮೇ ನಾಥ ವೃಣೋಮಿ ವರಮುತ್ತಮಂ ।
ದೇವಾಃ ಸುರಾಃ ಸಗಂಧರ್ವಾ ಯಕ್ಷರಕ್ಷೋಮಹೋರಗಾಃ ॥ ೮೫ ॥

ಸಿದ್ಧವಿದ್ಯಾಧರಾಃ ಸಾಧ್ಯಾಃ ಕಿನ್ನರಾ ಗುಹ್ಯಕಾಸ್ತಥಾ ।
ಋಷಯೋ ಯೇ ಮಹಾಭಾಗಾ ನಾನಾಶಾಸ್ತ್ರವಿಶಾರದಾಃ ॥ ೮೬ ॥

ಪ್ರವ್ರಜ್ಯಾಯೋಗಯುಕ್ತಾಶ್ಚ ವೇದತತ್ವಾನುಚಿಂತಕಾಃ ।
ಮೋಕ್ಷಮಾರ್ಗವಿದೋ ಯೇಽನ್ಯೇ ಧ್ಯಾಯಂತಿ ಪರಮಂ ಪದಂ ॥ ೮೭ ॥

---

೮೩. ದೇವ ದೇವೇಶ! ವರಪ್ರದನು, ವ್ಯಾಪ್ತನು, ಸರ್ವಲೋಕೇಶ್ವರನು, ಮೋಕ್ಷಕಾರಣನು, ನಾಶರಹಿತನೂ ಆದ ನಿನಗೆ ಪುನಃ ನಮಸ್ಕಾರ ಮಾಡುವೆನು!

೮೪. ಎಂಬುದಾಗಿ ಆ ದೇವನನ್ನು ಸ್ತೋತ್ರಮಾಡಿ ಕೈಮುಗಿದು ನಮಸ್ಕರಿಸಿ ನೆಲದಮೇಲೆ ಬಿದ್ದು ಈರೀತಿ ವಿಜ್ಞಾಪಿಸಿಕೊಂಡನು.

೮೫-೮೮. ನಾಥಾ! ನೀನು ನನಗೆ ಪ್ರಸನ್ನನಾಗಿದ್ದರೆ ಉತ್ತಮವಾದ ಈ ವರವನ್ನು ಕೇಳುವೆನು :—ದೇವತೆಗಳು, ಗಂಧರ್ವರು, ಯಕ್ಷ, ರಾಕ್ಷಸ, ಮಹೋರಗ, ಸಿದ್ಧ, ವಿದ್ಯಾಧರ, ಸಾಧ್ಯ, ಕಿನ್ನರ, ಗುಹ್ಯಕ, ನಾನಾಶಾಸ್ತ್ರವಿಶಾರದರೂ ಧನ್ಯರೂ ಆದ ಋಷಿಗಳು, ಸನ್ಯಾಸಿಗಳು, ಯೋಗಿಗಳು, ವೇದತತ್ವಾನುಸಂಧಾನಮಾಡುವವರು, ಮೋಕ್ಷಮಾರ್ಗವೇತ್ತೃಗಳು, ಇನ್ನೂ ಇತರರೂ ಸಹ ಯಾವ ಉತ್ತಮಪದವನ್ನು ಧ್ಯಾನಿಸುವರೋ, ನಿರ್ಮಲನು, ಲೌಕಿಕಗುಣರಹಿತನು, ಶಾಂತಿಸಂಪನ್ನನೂ ಆಗಿರುವ ಯಾರನ್ನು ಜ್ಞಾನಿಗಳು ನೋಡುವರೋ ಅಂತಹ

ನಿರ್ಮಲಂ ನಿರ್ಗುಣಂ ಶಾಂತಂ ಯೇ ಪಶ್ಯಂತಿ ಮುನೀಷಿಣಃ |
ತತ್ಪದಂ ಗಂತುಮಿಚ್ಛಾಮಿ ಪ್ರಸಾದಾತ್ತೇ ಸುದುರ್ಲಭಂ || ೮೮ ||

ಶ್ರೀಭಗವಾನುವಾಚ

ಸರ್ವಂ ಭವತು ಭದ್ರಂ ತೇ ಯಥೇಷ್ಟಂ ಸರ್ವಮಾಪ್ನುಹಿ |
ಭವಿಷ್ಯಾಮಿ ಯಥಾ ಕಾಮಂ ಮತ್ಪ್ರಸಾದಾನ್ನ ಸಂಶಯಃ || ೮೯ ||

ದಶವರ್ಷಸಹಸ್ರಾಣಿ ತಥಾ ನವಶತಾನಿ ಚ |
ಅವಿಚ್ಛಿನ್ನಂ ಮಹಾರಾಜ್ಯಂ ಕುರು ತ್ವಂ ನೃಪಸತ್ತಮ || ೯೦ ||

ಪ್ರಶಸ್ಯ ಪರಮಂ ದಿವ್ಯಂ ದುರ್ಲಭಂ ಯತ್ಸುರಾಸುರೈಃ |
ಪೂರ್ಣಂ ಮನೋರಥಂ ಶಾಂತಂ ಗುಹ್ಯಮವ್ಯಕ್ತಮವ್ಯಯಂ || ೯೧ ||

ಪರಾತ್ಪರತರಂ ಸೂಕ್ಷ್ಮಂ ನಿರ್ಲೇಪಂ ನಿರ್ಗುಣಂ ಧ್ರುವಂ |
ಚಿಂತಾಶೋಕವಿನಿರ್ಮುಕ್ತಂ ಕ್ರಿಯಾಕಾರಣವರ್ಜಿತಂ || ೯೨ ||

---

ಅತ್ಯಂತ ದುರ್ಲಭವಾದ ಸ್ಥಾನವನ್ನು ನಿನ್ನ ಅನುಗ್ರಹದಿಂದ ಹೊಂದಬೇಕೆಂದು ಬಯಸುವೆನು ಎಂದು ವರವನ್ನು ಪ್ರಾರ್ಥಿಸುವೆನು.

೮೯. ಶ್ರೀ ಭಗವಂತನು ಹೇಳಿದನು :—ದೊರೆಯೇ ! ನಿನಗೆ ಸರ್ವವಿಧ ಮಂಗಳವೂ ಆಗಲಿ ! ನೀನು ಅಪೇಕ್ಷಿಸಿರುವುದೆಲ್ಲವೂ ಸಿದ್ಧಿಸುವುದು. ನನ್ನ ಅನುಗ್ರಹದಿಂದ ನಿನ್ನ ಇಷ್ಟ ಸಿದ್ಧಿಯಾಗುವುದು. ಸಂದೇಹಪಡಬೇಡ.

೯೦. ರಾಜಶೇಖರನೇ ! ನೀನು ಹತ್ತುಸಾವಿರದೊಂಭೈನೂರು ವರ್ಷಗಳು ಅವಿಚ್ಛಿನ್ನವಾಗಿ ರಾಜ್ಯಭಾರಮಾಡು.

೯೧-೯೩. ಬಳಿಕ ಉತ್ತಮವು, ಮನೋಹರವು, ಸುರಾಸುರರಿಗೂ ದುರ್ಲಭವು, ಪರಿಪೂರ್ಣವು, ಅಭೀಪ್ಸಿತವು, ಶಾಂತಿಯುಕ್ತವು, ಗೋಪ್ಯವು, ಅವ್ಯಕ್ತವು, ನಾಶರಹಿತವು, ಉತ್ತಮೋತ್ತಮವು, ಸೂಕ್ಷ್ಮವು, ಕರ್ಮಲೇಪರಹಿತವು, ನಿರ್ಗುಣವು, ಸ್ಥಿರವು, ಚಿಂತಾಶೋಕಗಳಿಲ್ಲದುದು, ಕ್ರಿಯಾಕಾರಣರಹಿತವೂ ಆದ

ತದಹಂ ದರ್ಶಯಿಷ್ಯಾಮಿ ವಿಜ್ಞೇಯಾಖ್ಯಂ ಪರಂ ಪದಂ ।
ಸಂಪ್ರಾಪ್ಯ ಪರಮಾನಂದಂ ಪ್ರಾಪ್ಸ್ಯಸೇ ಪರಮಾಂ ಗತಿಂ ॥ ೯೩ ॥

ಕೀರ್ತಿಶ್ಚ ತವ ರಾಜೇಂದ್ರ ಭವತ್ವತ್ರ ಮಹೀತಲೇ ।
ಯಾವದ್ಧರಾ ನಭೋ ಯಾವದ್ಯಾವಚ್ಚಂದ್ರಾರ್ಕತಾರಕಾಃ ॥ ೯೪ ॥

ಯಾವತ್ಸಮುದ್ರಾಃ ಸಪ್ತೈವ ಯಾವನ್ಮೇರ್ವಾದಿಪರ್ವತಾಃ ।
ತಿಷ್ಠಂತಿ ದಿವಿದೇವಾಶ್ಚ ಯಾವತ್ಸರ್ವತ್ರ ಚಾವ್ಯಯಾಃ ॥ ೯೫ ॥

ಇಂದ್ರದ್ಯುಮ್ನಸರೋನಾಮ ತೀರ್ಥಂ ಯಜ್ಞಾಂಗಸಂಭವಂ ।
ಯತ್ರ ಸ್ನಾತ್ವಾ ಸಕೃಲ್ಲೋಕಃ ಶಕ್ರಲೋಕಮವಾಪ್ಸ್ಯತಿ ॥ ೯೬ ॥

ಪಾತಯಿಷ್ಯತಿ ಯಃ ಪಿಂಡಂ ತಟೇಽಸ್ಮಿನ್ನಂಬುಧೇಃ ಶುಭೇ ।
ಕುಲೈಕವಿಂಶತಿಂ ಧೃತ್ವಾ ಶಕ್ರಲೋಕಂ ಗಮಿಷ್ಯತಿ ॥ ೯೭ ॥

---

ವಿಜ್ಞೇಯವೆಂಬ ಉತ್ತಮಪದವನ್ನು ನಾನು ನಿನಗೆ ತೋರಿಸುವೆನು- ನೀನು ಅದನ್ನುಹೊಂದಿ ಪರಮಾನಂದರೂಪವಾದ ಉತ್ತಮಗತಿಯನ್ನು ಪಡೆಯುವೆ.

೯೪-೯೫. ರಾಜೇಂದ್ರನೇ! ಈ ಭೂಮಂಡಲದಲ್ಲಿ ಭೂಮಿ, ಆಕಾಶ, ಚಂದ್ರ, ಸೂರ್ಯ, ನಕ್ಷತ್ರ, ಏಳು ಸಮುದ್ರಗಳು, ಮೇರ್ವಾದಿ ಪರ್ವತಗಳು ಮತ್ತು ಅಂತರಿಕ್ಷದಲ್ಲಿ ಅವ್ಯಯರಾದ ದೇವತೆಗಳೂ ಸಹ ಇರುವವರೆಗೂ ನಿನ್ನ ಕೀರ್ತಿಯು ಬೆಳಗಲಿ.

೯೬. ಇಂದ್ರದ್ಯುಮ್ನ ಸರೋವರವೆಂಬ ತೀರ್ಥವು ಯಜ್ಞನಾಮಕ ಹರಿಯ ಅಂಗಗಳಿಂದ ಹುಟ್ಟಿದುದು. ಇದರಲ್ಲಿ ಒಂದಾವರ್ತಿ ಸ್ನಾನಮಾಡುವುದರಿಂದ ಜನರು ಇಂದ್ರಲೋಕವನ್ನು ಹೊಂದುವರು.

೯೭. ಈ ಸಮುದ್ರತೀರದಲ್ಲಿ ಪಿಂಡಪ್ರದಾನಮಾಡಿದವನು ಇಪ್ಪತ್ತೊಂದು ಕುಲಗಳಸಹಿತವಾಗಿ ಇಂದ್ರಲೋಕಕ್ಕೆ ಹೋಗುವನು.

ಪೂಜ್ಯಮಾನೋಽಪ್ಸರೋಭಿಶ್ಚ ಗಂಧರ್ವೈರ್ಗೀತನಿಸ್ಸ್ವನೈಃ ।
ವಿಮಾನೇನ ಚರೇತ್ತತ್ರ ಯಾವದಿಂದ್ರಾಶ್ಚತುರ್ದಶ ॥ ೯೮ ॥

ಸರಸೋ ದಕ್ಷಿಣೇ ಭಾಗೇ ನೈರ್ಋತ್ಯಾಂ ತು ಸಮಾಶ್ರಿತೇ ।
ನ್ಯಗ್ರೋಧೋಽಸ್ತಿ ದ್ರುಮಸ್ತತ್ರ ತತ್ಸಮೀಪೇ ತು ಮಂಡಪಃ ॥ ೯೯ ॥

ಕೇತಕೀವನಸಂಛನ್ನೋ ನಾನಾಪಾದಪಸಂಕುಲಃ ।
ಅಷಾಢಸ್ಯ ಸಿತೇ ಪಕ್ಷೇ ಪಂಚಮ್ಯಾಂ ಪಿತೃದೈವತೇ ॥ ೧೦೦ ॥

ಋಕ್ಷೇ ನೇಷ್ಯಂತಿ ನಸ್ತತ್ರ ನೀತ್ವಾ ಸಪ್ತದಿನಾನಿ ವೈ ।
ಮಂಡಪೇ ಸ್ಥಾಪಯಿಷ್ಯಂತಿ ಸುವೇಶ್ಮನಿ ಸುಶೋಭನೈಃ ॥ ೧೦೧ ॥

ಕ್ರೀಡಾವಿಶೇಷಬಹುಲೈರ್ನೃತ್ಯಗೀತಮನೋಹರೈಃ ।
ಚಾಮರೈಃ ಸ್ವರ್ಣದಂಡೈಶ್ಚ ವ್ಯಜನೈ ರತ್ನಭೂಷಣೈಃ ॥ ೧೦೨ ॥

---

೯೮. ಅಲ್ಲಿ ಅವನು ಹದಿನಾಲ್ಕು ಇಂದ್ರರ ಆಧಿಪತ್ಯಕಾಲದವರೆಗೂ ಅಪ್ಸರಸ್ತ್ರೀಯರು, ಗಾನಮಾಡುತ್ತಿರುವ ಗಂಧರ್ವರು ಇವರುಗಳಿಂದ ಸತ್ಕರಿಸಿಕೊಳ್ಳಲ್ಪಡುತ್ತಾ ವಿಮಾನದಲ್ಲಿ ಸಂಚರಿಸುತ್ತಿರುವನು.

೯೯-೧೦೦. ಆ ಸರೋವರದ ದಕ್ಷಿಣದಿಗ್ಭಾಗದಲ್ಲಿ ನೈಋತ್ಯಮೂಲೆಯಲ್ಲಿ ಆಲದಮರವಿದೆ. ಅದರ ಸಮೀಪದಲ್ಲಿ ಕೇದಿಗೇಗಿಡಗಳ ಸಮೂಹದಿಂದ ಆಚ್ಛಾದಿತವಾದ ನಾನಾವಿಧವೃಕ್ಷಗಳಿಂದ ವ್ಯಾಪ್ತವಾದ ಮಂಟಪವೊಂದಿದೆ.

೧೦೦-೧೦೧. ಆಷಾಢ ಶುಕ್ಲಪಕ್ಷ ಪಂಚಮಿಯದಿನ ಪಿತೃದೇವತಾಕವಾದನಕ್ಷತ್ರದಲ್ಲಿ ನಮ್ಮನ್ನು ಆ ಮಂಟಪಕ್ಕೆ ಕರೆದುಕೊಂಡುಹೋಗಿ ಮಂಗಳದ್ರವ್ಯಗಳಿಂದ ಯುಕ್ತವಾದ ಶುಭಸ್ಥಾನದಲ್ಲಿ ಏಳುದಿನಗಳು ಸ್ಥಾಪಿಸಿರುತ್ತಾರೆ.

೧೦೨-೧೦೩. ಆಗ ಉತ್ತಮಸ್ತ್ರೀಯರು, ಬಹು ಕ್ರೀಡಾವಿಶೇಷ, ಮನೋಹರ ನರ್ತನ, ಗಾನ ಚಾಮರ, ಸ್ವರ್ಣದಂಡ ಮತ್ತು ರತ್ನಖಚಿತ ಬೀಸಣಿಗೆಗಳಿಂದ ನಮ್ಮನ್ನು ಉಪಚರಿಸುವರು.

ವ್ಯಂಜಯಂತ್ಯಸ್ತದಾಸ್ಮಭ್ಯಂ ಸ್ಥಾಸ್ಯಂತಿ ಪರಮಾಂಗನಾಃ ।
ಬ್ರಹ್ಮಚಾರೀ ಯತಿಶ್ಚೈವ ಸ್ನಾತಕಾಶ್ಚ ದ್ವಿಜೋತ್ತಮಾಃ ॥ ೧೦೩ ॥

ವಾನಪ್ರಸ್ಥಾ ಗೃಹಸ್ಥಾಶ್ಚ ಸಿದ್ಧಾಶ್ಚಾನ್ಯೇ ಚ ವೈ ದ್ವಿಜಾಃ ।
ನಾನಾವರ್ಣಪದೈಃ ಸ್ತೋತ್ರೈರ್ಋಗ್ಯಜುಃಸಾಮನಿಃಸ್ವನೈಃ ॥ ೧೦೪ ॥

ಕರಿಷ್ಯಂತಿ ಸ್ತುತಿಂ ರಾಜನ್ರಾಮಕೇಶವಯೋಃ ಪುನಃ ।
ತತಃ ಸ್ತುತ್ವಾ ಚ ದೃಷ್ಟ್ವಾ ಚ ಸಂಪ್ರಣಮ್ಯ ಚ ಭಕ್ತಿತಃ ॥ ೧೦೫ ॥

ನರೋ ವರ್ಷಾಯುತಂ ದಿವ್ಯಂ ಶ್ರೀಮದ್ಧರಿಪುರೇ ವಸೇತ್ ।
ಪೂಜ್ಯಮಾನೋಽಪ್ಸರೋಭಿಶ್ಚ ಗಂಧರ್ವೈರ್ಗೀತನಿಃಸ್ವನೈಃ ॥ ೧೦೬ ॥
ಹರೇರನುಚರಸ್ತತ್ರ ಕ್ರೀಡತೇ ಕೇಶವೇನ ವೈ ॥ ೧೦೭ ॥

ವಿಮಾನೇನಾರ್ಕವರ್ಣೇನ ರತ್ನಹಾರೇಣ ರಾಜತೇ ।
ಸರ್ವೇ ಕಾಮಾ ಮಹಾಭಾಗೇ ತಿಷ್ಠಂತಿ ಭವನೋತ್ತಮೇ ॥ ೧೦೮ ॥

---

೧೦೩-೧೦೫. ಬ್ರಹ್ಮಚಾರಿ, ಸಂನ್ಯಾಸಿ, ಸ್ನಾತಕ, ವಾನಪ್ರಸ್ಥ, ಗೃಹಸ್ಥ ಮುಂತಾದ ದ್ವಿಜೋತ್ತಮರು ಇತರ ಸಿದ್ಧದ್ವಿಜರೂ ಸಹ ನಾನಾವರ್ಣಪದಗಳುಳ್ಳ ಸ್ತೋತ್ರಗಳಿಂದಲೂ, ಋಗ್ಯಜುಸ್ಸಾಮಧ್ವನಿಗಳಿಂದಲೂ, ಬಲರಾಮಕೃಷ್ಣರ ಸ್ತೋತ್ರಮಾಡುವರು.

೧೦೫-೧೦೬ ಆಗ ಸಮ್ಯಕ್ ದರ್ಶನಮಾಡಿ ಸ್ತುತಿಸಿ ಭಕ್ತಿಯಿಂದ ನಮಸ್ಕಾರಮಾಡಿದರೆ ಆ ಮನುಷ್ಯನು ದೇವಮಾನದ ಹತ್ತು ಸಾವಿರ ವರ್ಷಗಳು ಶ್ರೀಮದ್ಧರಿಪುರದಲ್ಲಿ ಅಪ್ಸರಸ್ತ್ರೀಯರು ಮತ್ತು ಗಾನಮಾಡುತ್ತಿರುವ ಗಂಧರ್ವರು ಇವರಿಂದ ಸತ್ಕರಿಸಲ್ಪಡುತ್ತಾ ಸುಖವಾಗಿ ವಾಸಿಸುವನು.

೧೦೭-೧೦೮. ಅಲ್ಲಿ ಹರಿಯ ಅನುಚರನಾಗಿ ಕೇಶವನೊಡನೆ ಕ್ರೀಡಿಸುತ್ತಿರುವನು. ವಿಮಾನ ಮತ್ತು ಸೂರ್ಯನಂತೆ ಹೊಳೆಯುತ್ತಿರುವ ರತ್ನಹಾರಗಳಿಂದ ವಿರಾಜಿಸುವನು. ಪೂಜ್ಯವಾದ ಆ ಉತ್ತಮ ಹರಿಮಂದಿರದಲ್ಲಿ ಸಕಲೇಷ್ಟಗಳೂ ಸಿದ್ಧವಾಗಿರುವುವು.

ತಪಃಕ್ಷಯಾದಿಹಾಗತ್ಯ ಮನುಷ್ಯೋ ಬ್ರಾಹ್ಮಣೋ ಭವೇತ್ ।
ಕೋಟೀ ಧನಪತಿಃ ಶ್ರೀಮಾಂಶ್ಚತುರ್ವೇದೋ ಭವೇದ್ಧ್ರುವಂ ॥ ೧೦೯ ॥

ಏವಂ ತಸ್ಮೈ ವರಂ ದತ್ವಾ ಕೃತ್ವಾ ಚ ಸಮಯಂ ಹರಿಃ ।
ಜಗಾಮಾದರ್ಶನಂ ಭದ್ರೇ ಸಹಿತೋ ವಿಶ್ವಕರ್ಮಣಾ ॥ ೧೧೦ ॥

ಸ ತು ರಾಜಾ ತದಾ ಹೃಷ್ಟೋ ರೋಮಾಂಚಿತತನೂರುಹಃ ।
ಕೃತಕೃತ್ಯಮಿವಾತ್ಮಾನಂ ಮೇನೇ ಸಂದರ್ಶನಾದ್ಧರೇಃ ॥ ೧೧೧ ॥

ತತಃ ಕೃಷ್ಣಂ ಚ ರಾಮಂ ಚ ಸುಭದ್ರಾಂ ಚ ವರಪ್ರದಾಂ ।
ರಥೈರ್ವಿಮಾನಸಂಕಾಶೈರ್ಮಣಿಕಾಂಚನಚಿತ್ರಿತೈಃ ॥ ೧೧೨ ॥

ಸಂವಾಹ್ಯ ತಾಸ್ತತೋ ರಾಜಾ ಜಯಮಂಗಲನಿಸ್ಸ್ವನೈಃ ।
ಆನಯಾಮಾಸ ಮತಿಮಾನ್ ಸಾಮಾತ್ಯಃ ಸಪುರೋಹಿತಃ ॥ ೧೧೩ ॥

---

೧೦೯. ಮನುಷ್ಯನು ತಪಸ್ಸು ಕ್ಷೀಣವಾದಮೇಲೆ ಇಲ್ಲಿ ಬ್ರಾಹ್ಮಣನಾಗಿ ಹುಟ್ಟುವನು. ಅವನು ಕೋಟ್ಯಧೀಶನಾದ ಶ್ರೀಮಂತನಾಗಿ ಚತುರ್ವೇದ ಪಾರಂಗತನಾಗುವನು.

೧೧೦. ಶೋಭನೇ ! ಹರಿಯು ಈ ರೀತಿಯಾಗಿ ಆ ಇಂದ್ರದ್ಯುಮ್ನ ರಾಜನಿಗೆ ವರಕೊಟ್ಟು ಸಂಕೇತಮಾಡಿ ವಿಶ್ವಕರ್ಮನಸಹಿತವಾಗಿ ಅದೃಶ್ಯನಾದನು.

೧೧೧. ಆಗ ರಾಜನಾದರೋ ಸಂತೋಷದಿಂದ ರೋಮಾಂಚಗಾತ್ರನಾಗಿ ಹರಿಯ ಸಂದರ್ಶನದಿಂದ ತನ್ನನ್ನು ಕೃತಾರ್ಥನಾದಂತೆ ಭಾವಿಸಿದನು.

೧೧೨-೧೧೩. ಬಳಿಕ ರಾಜನು ಅಮಾತ್ಯ ಪುರೋಹಿತನಸಹಿತವಾಗಿ ಕೃಷ್ಣ, ರಾಮ ಮತ್ತು ವರಪ್ರದ ಸುಭದ್ರಾದೇವಿ ಇವರ ಪ್ರತಿಮೆಗಳನ್ನು ಮಣಿ, ಸುವರ್ಣಗಳಿಂದಲಂಕೃತವಾದ ವಿಮಾನದಂತಿರುವ ರಥಗಳಲ್ಲಿ ಕೂಡಿಸಿ ಜಯ ಮಂಗಳಧ್ವನಿಗಳಿಂದ ತೆಗೆದುಕೊಂಡು ಬಂದನು.

ನಾನಾವಾದಿತ್ರನಿರ್ಘೋಷೈರ್ನಾನಾವೇದಸ್ವನೈಃ ಶುಭೈಃ ।
ಸಂಸ್ಥಾಪ್ಯ ಚ ಶುಭೇ ದೇಶೇ ಪವಿತ್ರೇ ಸುಮನೋಹರೇ ॥ ೧೧೪ ॥

ತತಃ ಶುಭೇ ತಿಥೌ ಸ್ವರ್ಕ್ಷೇ ಕಾಲೇ ಚ ಶುಭಲಕ್ಷಣೇ ।
ಪ್ರತಿಷ್ಠಾಂ ಕಾರಯಾಮಾಸ ಸುಮುಹೂರ್ತೇ ದ್ವಿಜೈಸ್ಸಹ ॥ ೧೧೫ ॥

ಯಥೋಕ್ತೇನ ವಿಧಾನೇನ ವಿಧಿದೃಷ್ಟೇನ ಕರ್ಮಣಾ ।
ಆಚಾರ್ಯಾನುಮತೇನೈವ ಸರ್ವಂ ಕೃತ್ವಾ ಮಹೀಪತಿಃ ॥ ೧೧೬ ॥

ಆಚಾರ್ಯಾಯ ತದಾ ದತ್ವಾ ದಕ್ಷಿಣಾಂ ವಿಧಿವತ್ಪ್ರಭುಃ ।
ಋತ್ವಿಗ್ಭ್ಯಃ ಸ ವಿಧಾನೇನ ತಥಾನ್ಯೇಭ್ಯೋ ಧನಂ ದದೌ ॥ ೧೧೭ ॥

ಕೃತ್ವಾ ಪ್ರತಿಷ್ಠಾಂ ವಿಧಿವತ್ಪ್ರಾಸಾದೇ ಭವನೋತ್ತಮೇ ।
ಸ್ಥಾಪಯಾಮಾಸ ತಾಃ ಸರ್ವಾಃ ವಿಶ್ವಕರ್ಮವಿನಿರ್ಮಿತಾಃ ॥ ೧೧೮ ॥

---

೧೧೪. ಅನಂತರ ಅಲ್ಲಿ ಪವಿತ್ರವು, ಮನೋಹರವೂ ಆದ ಶುಭಸ್ಥಾನದಲ್ಲಿ ಮಂಗಕರವಾದ ನಾನಾವಾದ್ಯಧ್ವನಿ ಮತ್ತು ನಾನಾವೇದಘೋಷಗಳನ್ನು ಮಾಡುತ್ತಾ ಸ್ಥಾಪಿಸಿದನು.

೧೧೫-೧೧೬. ತರುವಾಯ ರಾಜನು ಶುಭತಿಥಿ ನಕ್ಷತ್ರಗಳಲ್ಲಿ, ಶುಭಸಮಯದಲ್ಲಿ, ಉತ್ತಮಮುಹೂರ್ತದಲ್ಲಿ ಆ ಪ್ರತಿಮೆಗಳನ್ನು ಆಚಾರ್ಯರ ಅನುಮತಿ ಪಡೆದು ವಿಹಿತಕರ್ಮಗಳನ್ನೆಲ್ಲಾ ಮಾಡಿ, ವಿಧಾನೋಕ್ತಪ್ರಕಾರವಾಗಿ ಬ್ರಾಹ್ಮಣರಿಂದ ಪ್ರತಿಷ್ಠೆಮಾಡಿಸಿದನು.

೧೧೭. ಆಗ ದೊರೆಯು ಆಚಾರ್ಯರಿಗೆ ವಿದ್ಯುಕ್ತ ದಕ್ಷಿಣೆಯನ್ನು ಕೊಟ್ಟು ಋತ್ವಿಕ್ಕುಗಳಿಗೂ, ಇತರರಿಗೂ ಸಹ ವಿಹಿತರೀತಿಯಲ್ಲಿ ಧನದಾನ ಮಾಡಿದನು.

೧೧೮. ಉತ್ತಮಭವನವಾದ ಪ್ರಾಸಾದದಲ್ಲಿ ಹೀಗೆ ವಿಧಿವತ್ತಾಗಿ ಪ್ರತಿಷ್ಠೆಮಾಡಿಸಿ ವಿಶ್ವಕರ್ಮನಿರ್ಮಿತವಾದ ಆ ಪ್ರತಿಮೆಗಳೆಲ್ಲವನ್ನೂ ಸ್ಥಾಪಿಸಿದನು,

ತತಃ ಸಂಪೂಜ್ಯ ವಿಧಿನಾ ನಾನಾಪುಷ್ಪೈಃ ಸುಗಂಧಿಭಿಃ ।
ಸುವರ್ಣಮಣಿಮುಕ್ತಾದ್ಯೈರ್ನಾನಾವಸ್ತ್ರೈಃ ಸುಶೋಭನೈಃ ॥ ೧೧೯ ॥

ದದೌ ದ್ವಿಜೇಭ್ಯೋ ವಿಷಯಾನ್ಸ್ವರಾಹರ್ಾಣ್ಯಂಬರಾಣಿ ಚ ।
ಏವಂ ಬಹುವಿಧಾನ್ದತ್ವಾ ರಾಜ್ಯಂ ಕೃತ್ವಾ ಯಥೋಚಿತಂ ॥ ೧೨೦ ॥

ಇಷ್ಟ್ವಾ ಚ ವಿವಿಧೈರ್ಯಜ್ಞೈರ್ದತ್ವಾ ದಾನಾನ್ಯನೇಕಶಃ ।
ಕೃತಕೃತ್ಯಸ್ತತೋ ರಾಜಾ ತ್ಯಕ್ತಸರ್ವಪರಿಗ್ರಹಃ ॥ ೧೨೧ ॥
ಜಗಾಮ ಪರಮಂ ಸ್ಥಾನಂ ತದ್ವಿಷ್ಣೋಃ ಪರಮಂ ಪದಂ ॥ ೧೨೨ ॥

ಇತಿ ಶ್ರೀನಾರದೀಯಮಹಾಪುರಾಣೋತ್ತರಭಾಗೇ ಮೋಹಿನೀ
ವಸುಸಂವಾದೇ ಶ್ರೀಪುರುಷೋತ್ತಮಮಾಹಾತ್ಮ್ಯೇ
ಚತುಷ್ಪಂಚಾಶತ್ತಮೋಽಧ್ಯಾಯಃ

---

೧೧೯-೧೨೧. ಅನಂತರ ನಾನಾವಿಧ ಸುಗಂಧಪುಷ್ಪ, ಸುವರ್ಣ, ಮಣಿ, ಮುತ್ತು, ಒಳ್ಳೆಯವಸ್ತ್ರ ಇವುಗಳಿಂದ ಕೃಷ್ಣಾದಿಗಳನ್ನು ವಿಧಿವತ್ತಾಗಿ ಪೂಜಿಸಿ ದ್ವಿಜರಿಗೆ ಗಂಧಾದಿಗಳನ್ನೂ ವಸ್ತ್ರಗಳನ್ನೂ ಸಹ ದಾನಮಾಡಿದನು.

ಹೀಗೆ ರಾಜನು ಬಹುವಿಧವಾಗಿ ದಾನಮಾಡಿ ಉಚಿತರೀತಿಯಿಂದ ರಾಜ್ಯ ಪರಿಪಾಲನೆಮಾಡುತ್ತ ನಾನಾವಿಧಯಜ್ಞಗಳನ್ನು ಮಾಡಿ, ಅನೇಕದಾನಗಳನ್ನು ಕೊಟ್ಟು, ಕರ್ತವ್ಯವನ್ನೆಲ್ಲಾ ಮುಗಿಸಿಕೊಂಡು ಪರಿಗ್ರಹವನ್ನು ತ್ಯಜಿಸಿ ಉತ್ತಮವಾದ ವಿಷ್ಣುವಿನ ಪರಮಪದವನ್ನು ಹೊಂದಿದನು.

ಇಂತು ಶ್ರೀನಾರದೀಯಪುರಾಣೋತ್ತರಭಾಗದಲ್ಲಿ ಮೋಹಿನೀ ವಸುಸಂವಾದದಲ್ಲಿ
ಶ್ರೀಪುರುಷೋತ್ತಮ ಮಾಹಾತ್ಮ್ಯಯೆಂಬ ಐವತ್ತುನಾಲ್ಕನೆಯ
ಅಧ್ಯಾಯವು ಮುಗಿದುದು.

---

## ಪಂಚಪಂಚಾಶತ್ತಮೋऽಧ್ಯಾಯಃ

---

### ಮೋಹಿನ್ಯುವಾಚ

ಕಸ್ಮಿನ್ಕಾಲೇ ದ್ವಿಜಶ್ರೇಷ್ಠ ಗಂತವ್ಯಃ ಪುರುಷೋತ್ತಮಃ ।
ವಿಧಿನಾ ಕೇನ ಕರ್ತವ್ಯಾ ಪಂಚತೀರ್ಥ್ಯಪಿ ಮಾನದ ॥ ೧ ॥

ಏಕೈಕಸ್ಯ ಚ ತೀರ್ಥಸ್ಯ ಸ್ನಾನೇ ದಾನೇ ಚ ಯತ್ಫಲಂ ।
ದೇವತಾಪ್ರೇಕ್ಷಣೇ ಚೈವ ಬ್ರೂಹಿ ಸರ್ವಂ ಪೃಥಕ್ಪೃಥಕ್ ॥ ೨ ॥

### ವಸುರುವಾಚ

ನಿರಾಹಾರಃ ಕುರುಕ್ಷೇತ್ರೇ ಪಾದೇನೈಕೇನ ಯಸ್ತಪೇತ್ ।
ಜಿತೇಂದ್ರಿಯೋ ಜಿತಕ್ರೋಧಃ ಸಪ್ತಸಂವತ್ಸರಾಯುತಂ ॥ ೩ ॥

---

### ಐವತ್ತೈದನೆಯ ಅಧ್ಯಾಯ

೧. ಮೋಹಿನಿಯು ನುಡಿದಳು :—ಜ್ಞಾನದಾತನಾದ ದ್ವಿಜವರ್ಯನೇ! ಪುರುಷೋತ್ತಮಕ್ಷೇತ್ರದ ಯಾತ್ರೆ ಮಾಡುವಕಾಲವಾವುದು? ಅಲ್ಲಿ ಯಾವವಿಧಾನದಿಂದ ಪಂಚತೀರ್ಥ ವಿಧಿಯನ್ನಾಚರಿಸಬೇಕು?

೨. ಒಂದೊಂದು ತೀರ್ಥದಲ್ಲಿಯೂ ಸ್ನಾನದಾನಾದಿಗಳನ್ನು ಮಾಡುವುದರಿಂದ ಯಾವಯಾವ ಫಲವು ಬರುತ್ತದೆ? ದೇವತಾದರ್ಶನದಿಂದ ಯಾವ ಫಲವು ಬರುವುದು? ಎಲ್ಲವನ್ನೂ ಪ್ರತ್ಯೇಕವಾಗಿ ವಿವರಿಸಿ ಹೇಳು.

೩-೪. ವಸುವು ಹೇಳಿದನು :—ಕುರುಕ್ಷೇತ್ರದಲ್ಲಿ ಆಹಾರವನ್ನು ಬಿಟ್ಟು, ಕ್ರೋಧವನ್ನು ತ್ಯಜಿಸಿ ಜಿತೇಂದ್ರಿಯನಾಗಿ ಎಪ್ಪತ್ತುಸಾವಿರ ವರ್ಷ ಒಂದೇ

ದೃಷ್ಟ್ವಾ ಸಕೃಜ್ಜ್ಯೇಷ್ಠಶುಕ್ಲದ್ವಾದಶ್ಯಾಂ ಪುರುಷೋತ್ತಮಂ |
ಕೃತೋಪವಾಸಃ ಪ್ರಾಪ್ನೋತಿ ತತೋಽಧಿಕತರಂ ಫಲಂ || ೪ ||

ತಸ್ಮಾಜ್ಜ್ಯೇಷ್ಠೇ ತು ಸುಭಗೇ ಪ್ರಯತ್ನೇನ ಸುಸಂಯತೈಃ |
ಸ್ವರ್ಗಲೋಕೇಪ್ಸುಭಿರ್ಮರ್ತ್ಯೈರ್ದ್ರಷ್ಟವ್ಯಃ ಪುರುಷೋತ್ತಮಃ || ೫ ||

ಪಂಚತೀರ್ಥೀಂ ಚ ವಿಧಿವತ್ ಕೃತ್ವಾ ಜ್ಯೇಷ್ಠೇ ನರೋತ್ತಮಃ |
ದ್ವಾದಶ್ಯಾಂ ಶುಕ್ಲಪಕ್ಷಸ್ಯ ಪಶ್ಯೇತ್ತಂ ಪುರುಷೋತ್ತಮಂ || ೬ ||

ಯೇ ಪಶ್ಯಂತ್ಯವ್ಯಯಂ ದೇವಂ ದ್ವಾದಶ್ಯಾಂ ಪುರುಷೋತ್ತಮಂ |
ತೇ ವಿಷ್ಣುಲೋಕಮಾಸಾದ್ಯ ನ ಚ್ಯವಂತೇ ಕದಾಚನ || ೭ ||

---

ಕಾಲಿನಲ್ಲಿ ನಿಂತು, ತಪಸ್ಸುಮಾಡಿದರೆ ಬರುವ ಫಲಕ್ಕಿಂತಲೂ ಹೆಚ್ಚು ಫಲವು ಒಂದಾವರ್ತಿ ಉಪವಾಸದಿಂದ ಜ್ಯೇಷ್ಠಶುಕ್ಲ ದ್ವಾದಶಿಯ ದಿವಸದಲ್ಲಿ ಪುರುಷೋತ್ತಮದರ್ಶನ ಮಾಡುವಮಾತ್ರದಿಂದ ಬರವುದು.

೫. ಆದಕಾರಣ ಸುಂದರಿಯೇ! ಸ್ವರ್ಗಲೋಕವನ್ನು ಬಯಸುವ ಮನುಷ್ಯರು ಜ್ಯೇಷ್ಠಮಾಸದಲ್ಲಿ ಜಿತೇಂದ್ರಿಯರಾಗಿ ಭಕ್ತಿಯಿಂದ ಪುರುಷೋತ್ತಮ ದರ್ಶನಮಾಡಬೇಕು.

೬. ಮನುಷ್ಯೋತ್ತಮನು ಜ್ಯೇಷ್ಠಶುಕ್ಲ ದ್ವಾದಶಿಯದಿನದಲ್ಲಿಯೇ ಪಂಚತೀರ್ಥ ವಿಧಾನವನ್ನಾಚರಿಸಿ ಆ ಪುರುಷೋತ್ತಮದೇವನನ್ನು ದರ್ಶನ ಮಾಡಬೇಕು.

೭. ಜ್ಯೇಷ್ಠಶುದ್ಧ ದ್ವಾದಶಿಯ ದಿನದಲ್ಲಿ ನಾಶರಹಿತನಾದ ಪುರುಷೋತ್ತಮ ದೇವನನ್ನು ದರ್ಶನಮಾಡುವವರು ವಿಷ್ಣುಲೋಕವನ್ನು ಹೊಂದುವರು. ಅವರು ಯಾವಾಗಲೂ ಅದನ್ನು ಬಿಟ್ಟುಬರುವುದಿಲ್ಲ.

ತಸ್ಮಾಜ್ಜ್ಯೇಷ್ಠೇ ಪ್ರಯತ್ನೇನ ಗಂತವ್ಯಂ ವಿಧಿನಂದಿನಿ ।
ಕೃತ್ವಾ ಸಮ್ಯಕ್ಪಂಚತೀರ್ಥೀಂ ದ್ರಷ್ಟವ್ಯಃ ಪುರುಷೋತ್ತಮಃ ॥ ೮ ॥

ಸುದೂರಸ್ಥೋಽಪಿ ಪ್ರೀತಾತ್ಮಾ ಕೀರ್ತಯೇತ್ಪುರುಷೋತ್ತಮಂ ।
ಅಹನ್ಯಹನಿ ಶುದ್ಧಾತ್ಮಾ ಸೋಽಪಿ ವಿಷ್ಣುಪುರಂ ವ್ರಜೇತ್ ॥ ೯ ॥

ಯಾತ್ರಾಂ ಕರೋತಿ ಕೃಷ್ಣಸ್ಯ ಶ್ರದ್ಧಯಾ ಯಃ ಸಮಾಹಿತಃ ।
ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕಂ ವ್ರಜೇನ್ನರಃ ॥ ೧೦ ॥

ಚಕ್ರಂ ದೃಷ್ಟ್ವಾ ಹರೇರ್ದೂರಾತ್ಪ್ರಾಸಾದೋಪರಿ ಸಂಸ್ಥಿತಂ ।
ಸಹಸಾ ಮುಚ್ಯತೇ ಪಾಪಾನ್ನರೋ ಭಕ್ತ್ಯಾ ಪ್ರಣಮ್ಯ ತಂ ॥ ೧೧ ॥

---

೮. ಬ್ರಹ್ಮಪುತ್ರಿಯೇ! ಆದಕಾರಣ ಜ್ಯೇಷ್ಠಮಾಸದಲ್ಲಿ ಪ್ರಯತ್ನಪೂರ್ವಕವಾಗಿ ಪುರುಷೋತ್ತಮಕ್ಷೇತ್ರಕ್ಕೆ ಹೋಗಿ ವಿಧಿವತ್ತಾಗಿ ಪಂಚತೀರ್ಥ ವಿಧಿಯನ್ನಾಚರಿಸಿ ಪುರುಷೋತ್ತಮನ ಸಂದರ್ಶನಮಾಡಬೇಕು.

೯. ಅತ್ಯಂತ ದೂರದಲ್ಲಿರುವವನಾದರೂ ಸಹ ಪ್ರಶಾಂತಚಿತ್ತದಿಂದ ಪ್ರತಿದಿನವೂ ಪುರುಷೋತ್ತಮ ಸಂಕೀರ್ತನೆ ಮಾಡುವವನು ಪರಿಶುದ್ಧನಾಗಿ ವಿಷ್ಣುಪುರಕ್ಕೆ ಹೋಗುವನು.

೧೦. ಇಂತಹ ಕೃಷ್ಣಕ್ಷೇತ್ರದ ಯಾತ್ರೆಯನ್ನು ಶ್ರದ್ಧೆಯಿಂದ ಸಮಾಧಾನಚಿತ್ತನಾಗಿ ಮಾಡುವ ಮನುಷ್ಯನು ಸಕಲಪಾಪಗಳನ್ನು ಪರಿಹರಿಸಿಕೊಂಡು ವಿಷ್ಣುಲೋಕಕ್ಕೆ ಹೋಗುವನು.

೧೧. ಪ್ರಾಸಾದದ ಮೇಲ್ಭಾಗದಲ್ಲಿರುವ ಹರಿಚಕ್ರವನ್ನು ದೂರದಿಂದಲೇ ನೋಡಿ ಭಕ್ತಿಯಿಂದ ಹರಿಯನ್ನು ನಮಸ್ಕರಿಸುವುದರಿಂದ ತಕ್ಷಣದಲಿಯೇ ಮನುಷ್ಯನು ಪಾಪಮುಕ್ತನಾಗುವನು.

ಪಂಚತೀರ್ಥೀವಿಧಿಂ ವಕ್ಷ್ಯೇ ಶೃಣು ಮೋಹಿನಿ ಸಾಂಪ್ರತಂ ।
ಯಸ್ಯಾಂ ಕೃತಾಯಾಂ ಮನುಜೋ ಮಾಧವಸ್ಯ ಪ್ರಿಯೋ ಭವೇತ್ ॥೧೨॥

ಮಾರ್ಕಂಡೇಯಹ್ರದಂ ಗತ್ವಾ ಸ್ನಾತ್ವಾ ಚೋದಙ್ಮುಖಃ ಶುಚಿಃ ।
ನಿಮಜ್ಜೇತ್ತತ್ರ ತ್ರೀನ್ವಾರಾನಿಮಂ ಮಂತ್ರಮುದೀರಯೇತ್ ॥ ೧೩ ॥

ಸಂಸಾರಸಾಗರೇ ಮಗ್ನಂ ಪಾಪಗ್ರಸ್ತಮಚೇತನಂ ।
ತ್ರಾಹಿ ಮಾಂ ಭಗನೇತ್ರಘ್ನ ತ್ರಿಪುರಾರೇ ನಮೋಽಸ್ತು ತೇ ॥ ೧೪ ॥

ನಮಃ ಶಿವಾಯ ಶಾಂತಾಯ ಸರ್ವಪಾಪಹರಾಯ ಚ ।
ಸ್ನಾನಂ ಕರೋಮಿ ದೇವೇಶ ಮಮ ನಶ್ಯತು ಪಾತಕಂ ॥ ೧೫ ॥

---

೧೨. ಮೋಹಿನೀ! ಈಗ ಪಂಚತೀರ್ಥ ವಿಧಾನವನ್ನು ಹೇಳುವೆನು ಕೇಳು. ಇದನ್ನಾಚರಿಸಿದರೆ ಮನುಷ್ಯನು ಮಾಧವನ ಅನುಗ್ರಹಕ್ಕೆ ಪಾತ್ರನಾಗುವನು.

೧೩. ಮಾರ್ಕಾಂಡೇಯ ಹ್ರದಕ್ಕೆಹೋಗಿ ಅಲ್ಲಿ ಉತ್ತರಾಭಿಮುಖವಾಗಿ ನಿಂತು ಸ್ನಾನಮಾಡಿ ಶುಚಿಯಾಗಿ ಅಲ್ಲಿ ಮೂರು ವಾರಗಳು ಅವಗಾಹನ ಸ್ನಾನ ಮಾಡಬೇಕು. ಸ್ನಾನಕಾಲದಲ್ಲಿ ಈ ಮಂತ್ರವನ್ನು ಹೇಳಬೇಕು.

೧೪. ಸ್ನಾನಮಂತ್ರ :—"ತ್ರಿಪುರವೈರಿಯಾದ ಈಶ್ವರನೇ! ನಿನಗೆ ನಮಸ್ಕಾರಮಾಡುವೆನು. ಸಂಸಾರಸಮುದ್ರದಲ್ಲಿ ಮುಳುಗಿ ಪಾಪವನ್ನು ಗಳಿಸಿ ಜಡದಂತಿರುವ ನನ್ನನ್ನು ಕಾಪಾಡು.

೧೫. ದೇವೇಶಾ! ಶಾಂತಿಸಂಪನ್ನನು, ಸಕಲ ಪಾಪಪರಿಹಾರಕನು, ಶಿವನೂ ಆದ ನಿನಗೆ ನಮಸ್ಕಾರ! ಈ ತೀರ್ಥದಲ್ಲಿ ಸ್ನಾನಮಾಡುವೆನು, ನನ್ನ ಪಾಪವು ಹೋಗಲಿ" ಎಂದು ಹೇಳಿ ಸ್ನಾನಮಾಡಬೇಕು.

ನಾಭಿಮಾತ್ರೇ ಜಲೇ ಸ್ಥಿತ್ವಾ ವಿಧಿವದ್ದೇವತಾ ಋಷೀನ್ ।
ತಿಲೋದಕೇನ ಮತಿಮಾನ್ ಪಿತ್ರೂನನ್ಯಾಂಶ್ಚ ತರ್ಪಯೇತ್ ॥ ೧೬ ॥

ಸ್ನಾತ್ವೈವಂ ಚ ತಥಾಚಮ್ಯ ತತೋ ಗಚ್ಛೇಚ್ಛಿವಾಲಯಂ ।
ಪ್ರವಿಶ್ಯ ದೇವತಾಗಾರಂ ಕೃತ್ವಾ ತಂ ತ್ರಿಃಪ್ರದಕ್ಷಿಣಂ ॥ ೧೭ ॥

ಮೂಲಮಂತ್ರೇಣ ಸಂಪೂಜ್ಯ ಮಾರ್ಕಂಡೇಯೇಶಮಾದರಾತ್ ।
ಅಘೋರೇಣ ತು ಮಂತ್ರೇಣ ಪ್ರಣಿಪತ್ಯ ಕ್ಷಮಾಪಯೇತ್ ॥ ೧೮ ॥

ತ್ರಿಲೋಚನ ನಮಸ್ತೇಸ್ತು ನಮಸ್ತೇ ಶಶಿಭೂಷಣ ।
ತ್ರಾಹಿ ಮಾಂ ಪುಂಡರೀಕಾಕ್ಷ ಮಹಾದೇವ ನಮೋಸ್ತು ತೇ ॥ ೧೯ ॥

ಮಾರ್ಕಂಡೇಯಹ್ರದೇ ತ್ವೇವಂ ಸ್ನಾತ್ವಾ ದೃಷ್ಟ್ವಾ ಚ ಶಂಕರಂ ।
ದಶಾನಾಮಶ್ವಮೇಧಾನಾಂ ಫಲಂ ಪ್ರಾಪ್ನೋತಿ ಮಾನವಃ ॥ ೨೦ ॥

---

೧೬. ಆ ತೀರ್ಥದಲ್ಲಿ ನಡುವಿನ ಪ್ರಮಾಣದ ನೀರಿನಲ್ಲಿ ನಿಂತು ವಿಧಿವತ್ತಾಗಿ ದೇವತೆ ಮತ್ತು ಋಷಿಗಳನ್ನೂ ತಿಲೋದಕದಿಂದ ಪಿತೃಗಳನ್ನೂ ಇತರರನ್ನೂ ಸಹ ತರ್ಪಣ ಕೊಟ್ಟು ಸತ್ಕರಿಸಬೇಕು.

೧೭-೧೮. ಈರೀತಿಯಾಗಿ ಸ್ನಾನಮಾಡಿ ಬಳಿಕ ಆಚಮನಮಾಡಿ ಅನಂತರ ಶಿವಾಲಯಕ್ಕೆ ಹೋಗಬೇಕು. ಬಳಿಕ ದೇವತಾಗಾರವನ್ನು ಮೂರಾವರ್ತಿ ಪ್ರದಕ್ಷಿಣಮಾಡಿ ಭಕ್ತಿಪೂರ್ವಕವಾಗಿ ಮಾರ್ಕಾಂಡೇಯೇಶ್ವರನನ್ನು ಪೂಜೆಮಾಡಿ "ಅಘೋರೇಣ" ಇತ್ಯಾದಿ ಮಂತ್ರದಿಂದ ನಮಸ್ಕಾರಮಾಡಿ ಕ್ಷಮಾಪಣೆಯನ್ನು ಬೇಡಬೇಕು.

೧೯. ತ್ರಿನಯನೇಶ್ವರ! ನಿನಗೆ ನಮಸ್ಕಾರ! ಚಂದ್ರಶೇಖರ! ನಿನಗೆ ನಮಸ್ಕಾರಮಾಡುವೆನು. ಪುಂಡರೀಕಾಕ್ಷ! ನನ್ನನ್ನು ರಕ್ಷಿಸು! ಮಹಾದೇವ! ನಿನಗೆ ನಮಸ್ಕಾರಮಾಡುವೆನು ಎಂದು ಪ್ರಾರ್ಥನೆಮಾಡಬೇಕು.

೨೦. ಈ ಪ್ರಕಾರ ಮಾರ್ಕಾಂಡೇಯ ಹ್ರದದಲ್ಲಿ ಸ್ನಾನಮಾಡಿ ಶಂಕರನನ್ನು ದರ್ಶನಮಾಡಿದರೆ ಮಾನವನು ಹತ್ತು ಅಶ್ವಮೇಧಯಜ್ಞಗಳ ಫಲವನ್ನು ಅನುಭವಿಸುವನು.

ಪಾಪೈಸ್ಸರ್ವೈರ್ವಿನಿರ್ಮುಕ್ತಃ ಶಿವಲೋಕಂ ಸ ಗಚ್ಛತಿ ।
ತತ್ರ ಭುಕ್ತ್ವಾ ವರಾನ್ಭೋಗಾನ್ಯಾವದಾಭೂತಸಂಪ್ಲವಂ ॥ ೨೧ ॥

ಇಹ ಲೋಕೇ ಸಮಾಸಾದ್ಯ ಭವೇದ್ವಿಪ್ರೋ ಬಹುಶ್ರುತಃ ।
ಶಾಂಕರಂ ಯೋಗಮಾಸಾದ್ಯ ತತೋ ಮೋಕ್ಷಮವಾಪ್ನುಯಾತ್ ॥ ೨೨ ॥

ಕಲ್ಪವೃಕ್ಷಂ ತತೋ ಗತ್ವಾ ಕೃತ್ವಾ ತಂ ತ್ರಿಃಪ್ರದಕ್ಷಿಣಂ ।
ಪೂಜಯೇತ್ಪರಯಾ ಭಕ್ತ್ಯಾ ಮಂತ್ರೇಣಾನೇನ ತಂ ವಟಂ ॥ ೨೩ ॥

ಓಂ ನಮೋಽವ್ಯಕ್ತರೂಪಾಯ ಮಹತೇ ಸತಪಾಲಿನೇ ।
ಮಹೋದಕೋಪವಿಷ್ಟಾಯ ನ್ಯಗ್ರೋಧಾಯ ನಮೋಽಸ್ತುತೇ ॥ ೨೪ ॥

---

೨೧-೨೨. ಅವನು ಸಕಲ ಪಾಪಮುಕ್ತನಾಗಿ ಶಿವಲೋಕಕ್ಕೆ ಹೋಗುವನು. ಅಲ್ಲಿ ಭೂತಪ್ರಳಯದವರೆಗೂ ಉತ್ತಮಭೋಗಗಳನ್ನನುಭವಿಸಿ ಈ ಲೋಕಕ್ಕೆ ಬಂದು ಬಹುಶ್ರುತನಾದ ವಿಪ್ರನಾಗುವನು. ಅನಂತರ ಶಾಂಕರ ಯೋಗವನ್ನಾಚರಿಸಿ ಮೋಕ್ಷಭಾಗಿಯಾಗುವನು.

೨೩. ತರುವಾಯ ಕಲ್ಪವೃಕ್ಷದ ಬಳಿಗೆಹೋಗಿ ಅದನ್ನು ಮೂರಾವರ್ತಿ ಪ್ರದಕ್ಷಿಣೆಮಾಡಿ ಉತ್ಕೃಷ್ಟಭಕ್ತಿಯಿಂದ ಈ ಮಂತ್ರವನ್ನು ಹೇಳಿ ಆ ವಟವನ್ನು ಪೂಜಿಸಬೇಕು.

೨೪. ಮಂತ್ರ :—ಅವ್ಯಕ್ತರೂಪವುಳ್ಳುದು, ಪ್ರಣತಜನರನ್ನು ಪಾಲಿಸುವುದು, ಮಹತ್ತೂ ಆದ ವಟವೃಕ್ಷಕ್ಕೆ ನಮಸ್ಕಾರ ! ಮಹಾಜಲದಲ್ಲಿ ನಿಂತಿರುವ ವಟವೃಕ್ಷಕ್ಕೆ ನಮಸ್ಕಾರಮಾಡುವೆನು.

೨೫. ವಟವೃಕ್ಷವೇ ! ನೀನು ಸಮುದ್ರದ ದಡದಲ್ಲಿ ಹರಿಯ ಆಯತನದಲ್ಲಿ ಕಲ್ಪಾದಿಯಿಂದ ಯಾವಾಗಲೂ ವಾಸಿಸುತ್ತಿರುವೆ. ನ್ಯಗ್ರೋಧ ! ನೀನು ನನ್ನ ಪಾಪವನ್ನು ಪರಿಹರಿಸು. ಕಲ್ಪವೃಕ್ಷ ! ನಿನಗೆ ನಮಸ್ಕಾರಮಾಡುವೆನು.

ಅವಸಸ್ತ್ವಂ ಸದಾ ಕಲ್ಪೇ ಹರೇಶ್ಛಾಯತನೇ ತಟೇ ।
ನ್ಯಗ್ರೋಧ ಹರ ಮೇ ಪಾಪಂ ಕಲ್ಪವೃಕ್ಷ ನಮೋಽಸ್ತು ತೇ ॥ ೨೫ ॥

ಭಕ್ತ್ಯಾ ಪ್ರದಕ್ಷಿಣಂ ಕೃತ್ವಾ ಗತ್ವಾ ಕಲ್ಪವಟಂ ನರಃ ।
ಸಹಸೋಜ್ಝತಿ ಪಾಪೌಘಂ ಜೀರ್ಣತ್ವಚಮಿವೋರಗಃ ॥ ೨೬ ॥

ಛಾಯಾಂ ತಸ್ಯ ಸಮಾಕ್ರಮ್ಯ ಕಲ್ಪವೃಕ್ಷಸ್ಯ ಮೋಹಿನಿ ।
ಬ್ರಹ್ಮಹತ್ಯಾಂ ನರೋ ಜಹ್ಯಾತ್ಪಾಪೇಷ್ವನ್ಯೇಷು ಕಾ ಕಥಾ ॥ ೨೭ ॥

ದೃಷ್ಟ್ವಾ ಕೃಷ್ಣಾಂಗಸಂಭೂತಂ ಬ್ರಹ್ಮತೇಜೋಮಯಂ ಪರಂ ।
ನ್ಯಗ್ರೋಧಾಕೃತಿಕಂ ವಿಷ್ಣುಂ ಪ್ರಣಿಪತ್ಯ ಚ ವೈಧಸಿ ॥ ೨೮ ॥

ರಾಜಸೂಯಾಶ್ವಮೇಧಾಭ್ಯಾಂ ಫಲಂ ಪ್ರಾಪ್ನೋತಿ ಚಾಧಿಕಂ ।
ತಥಾ ಕುಲಂ ಸಮುದ್ಧೃತ್ಯ ವಿಷ್ಣುಲೋಕಂ ಸ ಗಚ್ಛತಿ ॥ ೨೯ ॥

---

ಮನುಷ್ಯನು ಕಲ್ಪವೃಕ್ಷದ ಬಳಿಗೆಹೋಗಿ ಅದಕ್ಕೆ ಭಕ್ತಿಯಿಂದ ಪ್ರದಕ್ಷಿಣೆ ಮಾಡಿದರೆ ಸರ್ಪವು ಹಳೆಯಪರೆಯನ್ನು ಬಿಡುವಂತೆ ಮನುಷ್ಯನು ತಕ್ಷಣದಲ್ಲಿಯೇ ಪಾಪರಾಶಿಯನ್ನು ದೂರಮಾಡುವನು.

೨೭. ಮೋಹಿನೀ! ಆ ಕಲ್ಪವೃಕ್ಷದ ಛಾಯೆಯನ್ನು ಆಶ್ರಯಿಸಿದರೆ ಮನುಷ್ಯನು ಬ್ರಹ್ಮಹತ್ಯೆಯನ್ನು ಕಳೆದುಕೊಳ್ಳುವನು. ಅಂದಬಳಿಕ ಇತರ ಪಾಪಗಳು ಪರಿಹಾರವಾಗುತ್ತದೆಂದು ಹೇಳಬೇಕಾದುದೇನು?

೨೮-೨೯. ಬ್ರಹ್ಮಕುಮಾರಿ! ಕೃಷ್ಣನ ಅಂಗದಿಂದ ಹಟ್ಟಿದ, ಬ್ರಹ್ಮತೇಜೋಮಯವಾದ, ವಟವೃಕ್ಷಾಕಾರವನ್ನು ತಾಳಿರುವ ಆ ಉತ್ತಮನಾದ ವಿಷ್ಣುವನ್ನು ನಮಸ್ಕರಿಸಿದರೆ ರಾಜಸೂಯ ಮತ್ತು ಅಶ್ವಮೇಧಯಾಗಗಳಫಲಕ್ಕಿಂತಲೂ ಹೆಚ್ಚಾಗಿ ಫಲಬರುವುದು. ಅಂತೆಯೇ ಅವನ ಕುಲವೂ ಉದ್ಧಾರವಾಗುವುದು. ಅವನೂ ವಿಷ್ಣುಲೋಕಕ್ಕೆ ಹೋಗಿ ಸುಖಿಯಾಗುವನು.

ವೈನತೇಯಂ ನಮಸ್ಕೃತ್ಯ ಕೃಷ್ಣಸ್ಯ ಪುರತಃ ಸ್ಥಿತಂ ।
ಸರ್ವಪಾಪವಿನಿರ್ಮುಕ್ತಸ್ತತೋ ವಿಷ್ಣುಪುರಂ ವ್ರಜೇತ್ ॥ ೩೦ ॥

ದೃಷ್ಟ್ವಾ ವಟಂ ವೈನತೇಯಂ ಯಃ ಪಶ್ಯೇತ್ಪುರುಷೋತ್ತಮಂ ।
ಸಂಕರ್ಷಣಂ ಸುಭದ್ರಾಂ ಚ ಸ ಯಾತಿ ಪರಮಾಂ ಗತಿಂ ॥ ೩೧ ॥

ಪ್ರವಿಶ್ಯಾಯತನಂ ವಿಷ್ಣೋಃ ಕೃತ್ವಾ ತಂ ತ್ರಿಃ ಪ್ರದಕ್ಷಿಣಂ ।
ಸಂಕರ್ಷಣಂ ಸುಭದ್ರಾಂ ಚ ಭಕ್ತ್ಯಾ ಪೂಜ್ಯ ಪ್ರಸಾದಯೇತ್ ॥ ೩೨ ॥

ನಮಸ್ತೇ ಹಲಧೃಙ್ನಾಮ್ನೇ ನಮಸ್ತೇ ಮುಸಲಾಯುಧ ।
ನಮಸ್ತೇ ರೇವತೀಕಾಂತ ನಮಸ್ತೇ ಭಕ್ತವತ್ಸಲ ॥ ೩೩ ॥

ನಮಸ್ತೇ ಬಲಿನಾಂ ಶ್ರೇಷ್ಠ ನಮಸ್ತೇ ಧರಣೀಧರ ।
ಪ್ರಲಂಬಾರೇ ನಮಸ್ತೇಽಸ್ತು ತ್ರಾಹಿ ಮಾಂ ಕೃಷ್ಣಪೂರ್ವಜ ॥ ೩೪ ॥

---

೩೦. ಅನಂತರ ಕೃಷ್ಣನ ಇದಿರಿಗಿರುವ ಗರುಡನಿಗೆ ನಮಸ್ಕಾರಮಾಡುವುದರಿಂದ ಸಕಲಪಾಪ ವಿಮೋಚನೆಯಾಗಿ ವಿಷ್ಣುಮಂದಿರಕ್ಕೆ ಹೋಗುವನು.

೩೧. ವಟವೃಕ್ಷ ಮತ್ತು ವೈನತೇಯರನ್ನು ದರ್ಶನಮಾಡಿ ಪುರುಷೋತ್ತಮ, ಸಂಕರ್ಷಣ ಮತ್ತು ಸುಭದ್ರಾದೇವಿಯರನ್ನು ದರ್ಶನಮಾಡುವವನು ಉತ್ತಮಗತಿಯನ್ನು ಹೊಂದುವನು.

೩೨. ವಿಷ್ಣ್ವಾಲಯಕ್ಕೆ ಪ್ರವೇಶಿಸಿ ಅದನ್ನು ಮೂರುಪ್ರದಕ್ಷಿಣೆಮಾಡಿ ಬಲರಾಮ ಸುಭದ್ರೆಯರನ್ನು ಭಕ್ತಿಯಿಂದ ಪೂಜಿಸಿ ಪ್ರಸನ್ನೀಕರಿಸಿಕೊಳ್ಳಬೇಕು.

೩೩. "ಹಲಧೃಕ್" ಎಂಬ ನಾಮಧೇಯವುಳ್ಳ ದೇವನೇ! ನಿನಗೆ ನಮಸ್ಕಾರ! ರೇವತೀರಮಣನಾದ ನಿನಗೆ ನಮಸ್ಕಾರ! ಭಕ್ತವತ್ಸಲ! ನಿನಗೆ ನಮಸ್ಕಾರ ಮಾಡುವೆನು

೩೪. ಬಲವಂತರಲ್ಲಿ ಉತ್ತಮನೇ! ನಿನಗೆ ನಮಸ್ಕಾರ! ಧರಣೀಧರ! ನಿನಗೆ ನಮಸ್ಕಾರ! ಪ್ರಲಂಬವೈರಿಯೇ! ನಿನಗೆ ನಮಸ್ಕಾರಮಾಡುವೆನು. ಕೃಷ್ಣಾಗ್ರಜ! ನನ್ನನ್ನು ರಕ್ಷಿಸು!

ಏವಂ ಪ್ರಸಾದ್ಯ ಚಾನಂತಮಜೇಯಂ ತ್ರಿದಶಾರ್ಚಿತಂ ।
ಕೈಲಾಸಶಿಖರಾಕಾರಂ ಚಂದ್ರಕಾಂತವರಾನನಂ ॥ ೩೫ ॥

ನೀಲವಸ್ತ್ರಧರಂ ದೇವಂ ಫಣಾವಿಕಟಮಸ್ತಕಂ ।
ಮಹಾಬಲಂ ಹಲಧರಂ ಕುಂಡಲೈಕ ವಿಭೂಷಿತಂ ॥ ೩೬ ॥

ರೌಹಿಣೇಯಂ ನರೋ ಭಕ್ತ್ಯಾ ಲಭೇದಭಿಮತಂ ಫಲಂ ।
ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕಂ ಚ ಗಚ್ಛತಿ ॥ ೩೭ ॥

ಆಭೂತಸಂಪ್ಲವಂ ಯಾವದ್ಭುಕ್ತ್ವಾ ತತ್ರ ಸ್ವಯಂ ಬುಧಃ ।
ಪುಣ್ಯಕ್ಷಯಾದಿಹಾಗತ್ಯ ಪ್ರವರೋ ಯೋಗಿನಾಂ ಕುಲೇ ॥ ೩೮ ॥

ಬ್ರಾಹ್ಮಣಪ್ರವರೋ ಭೂತ್ವಾ ಸರ್ವಶಾಸ್ತ್ರಾರ್ಥಪಾರಗಃ ।
ಜ್ಞಾನಂ ತತ್ರ ಸಮಾಸಾದ್ಯ ಮುಕ್ತಿಂ ಪ್ರಾಪ್ನೋತಿ ದುರ್ಲಭಾಂ ॥ ೩೯ ॥

---

೩೫-೩೭. ಅಜೇಯನು, ದೇವತೆಗಳಿಂದ ಪೂಜಿತನು, ಕೈಲಾಸಶಿಖರದಂತೆ ಉನ್ನತಾಕಾರನು, ಚಂದ್ರಕಾಂತದಂತೆ ಉತ್ಕೃಷ್ಟವಾದ ಮುಖವುಳ್ಳವನು, ನೀಲವಸ್ತ್ರಧಾರಿಯು, ಹೆಡೆಯಂತೆ ವಿಚಿತ್ರ ಶಿರಸ್ಸುಳ್ಳವನು, ಮಹಾಬಲಿಷ್ಠನು, ನೇಗಿಲನ್ನು ಹಿಡಿದಿರುವವನು, ಕುಂಡಲಗಳಿಂದಲಂಕೃತನು, ರೋಹಿಣೀದೇವಿಯ ಮಗನೂ ಆದ ಅನಂತ ಎಂದರೆ ಬಲರಾಮನನ್ನು ಈರೀತಿಯಾಗಿ ಭಕ್ತಿಯಿಂದ ಪ್ರಸನ್ನೀಕರಿಸಿಕೊಂಡ ಮನುಷ್ಯನು ಇಷ್ಟಫಲವನ್ನು ಹೊಂದುವನು. ಅಷ್ಟೇ ಅಲ್ಲ; ಸಕಲಪಾಪಗಳಿಂದಲೂ ಬಿಡುಗಡೆಯಾಗಿ ವಿಷ್ಣುಲೋಕಕ್ಕೆ ಹೋಗುವನು.

೩೮-೩೯. ಜ್ಞಾನಿಯಾದವನು ಅಲ್ಲಿ ಭೂತಪ್ರಳಯವಾಗುವವರೆಗೂ ಭೋಗಿಸಿ, ಪುಣ್ಯಕ್ಷಯವಾದಮೇಲೆ ಇಲ್ಲಿಗೆ ಬಂದು ಉತ್ತಮಯೋಗಿಗಳ ಕುಲದಲ್ಲಿ ಸಕಲ ಶಾಸ್ತ್ರಪಾರಂಗತನಾದ ಬ್ರಾಹ್ಮಣೋತ್ತಮನಾಗಿ ಜನಿಸಿ, ಅಪರೋಕ್ಷ ಜ್ಞಾನವನ್ನು ಹೊಂದಿ ದುರ್ಲಭವಾದ ಮುಕ್ತಿಯನ್ನು ಪಡೆಯುವನು.

ಏವಮಭ್ಯರ್ಚ್ಯ ಹಲಿನಂ ತತಃ ಕೃಷ್ಣಂ ವಿಚಕ್ಷಣಃ ।
ದ್ವಾದಶಾಕ್ಷರಮಂತ್ರೇಣ ಪೂಜಯೇತ್ಸುಸಮಾಹಿತಃ ॥ ೪೦ ॥
ದ್ವಿಷಟ್ಕವರ್ಣಮಂತ್ರೇಣ ಭಕ್ತ್ಯಾಯೇ ಪುರುಷೋತ್ತಮಂ ।
ಪೂಜಯಂತಿ ಸದಾ ಧೀರಾಸ್ತೇ ಮೋಕ್ಷಂ ಪ್ರಾಪ್ನುವಂತಿ ಹಿ ॥ ೪೧ ॥
ನ ತಾಂ ಗತಿಂ ಸುರಾ ಯಾಂತಿ ಯೋಗಿನೋ ನೈವ ಸೋಮಪಾಃ ।
ಯಾಂ ಗತಿಂ ಯಾಂತಿ ವಿಧಿಜೇ ದ್ವಾದಶಾಕ್ಷರತತ್ಪರಾಃ ॥ ೪೨ ॥
ತಸ್ಮಾತ್ತೇನೈವ ಮಂತ್ರೇಣ ಭಕ್ತ್ಯಾ ಕೃಷ್ಣಂ ಜಗದ್ಗುರುಂ ।
ಸಂಪೂಜ್ಯ ಗಂಧಪುಷ್ಪಾದ್ಯೈಃ ಪ್ರಣಿಪತ್ಯ ಪ್ರಸಾದಯೇತ್ ॥ ೪೩ ॥
ಜಯ ಕೃಷ್ಣ ಜಗನ್ನಾಥ ಜಯ ಸರ್ವಾಘನಾಶನ ।
ಜಯ ಚಾಣೂರಕೇಶಿಘ್ನ ಜಯ ಕಂಸನಿಷೂದನ ॥ ೪೪ ॥

---

೪೦. ಈರೀತಿಯಾಗಿ ಬಲರಾಮನನ್ನು ಪೂಜಿಸಿದನಂತರ ವಿಚಕ್ಷಣನಾದವನು ಸಮಾಧಾನಚಿತ್ತದಿಂದ ದ್ವಾದಶಾಕ್ಷರ ಮಂತ್ರಜಪಪೂರ್ವಕವಾಗಿ ಕೃಷ್ಣನನ್ನು ಪೂಜಿಸಬೇಕು.

೪೧. ಭಕ್ತಿಪೂರ್ವಕವಾಗಿ ಯಾವಾಗಲೂ ದ್ವಾದಶಾಕ್ಷರಮಂತ್ರದಿಂದ ಪುರುಷೋತ್ತಮನನ್ನು ಪೂಜಿಸುವ ಧೀರರು ಮೋಕ್ಷವನ್ನು ಹೊಂದುವರು.

೪೨. ಬ್ರಹ್ಮನಂದನನೇ! ದ್ವಾದಶಾಕ್ಷರ ಮಂತ್ರಜಪನಿಷ್ಠರು ಹೊಂದುವಂತಹ ಉತ್ತಮಗತಿಯನ್ನು ದೇವತೆಗಳು, ಯೋಗಿಗಳು, ಯಜ್ಞಗಳನ್ನು ಮಾಡಿ ಸೋಮಪಾನಮಾಡಿದವರೂ ಸಹ ಹೊಂದಲಾರರು.

೪೩. ಆದಕಾರಣ ಆ ಮಂತ್ರದಿಂದಲೇ ಭಕ್ತಿಯಿಂದ ಜಗದ್ಗುರುವಾದ ಕೃಷ್ಣನನ್ನು ಆರಾಧಿಸಿ, ಗಂಧಪುಷ್ಪಾದಿಗಳನ್ನೂ ಅವರಿಂದಲೇ ಅರ್ಪಿಸಿ, ನಮಸ್ಕಾರಮಾಡಿ ಪ್ರಸನ್ನೀಕರಿಸಿಕೊಳ್ಳಬೇಕು.

೪೪. ಕೃಷ್ಣ! ನಿನಗೆ ಜಯವಾಗಲಿ! ಸರ್ವಪಾಪ ಪರಿಹಾರಕನಾದ ಜಗನ್ನಾಥಾ! ನಿನಗೆ ಜಯವಾಗಲಿ! ಚಾಣೂರ, ಕೇಶಿ ಎಂಬ ದೈತ್ಯರನ್ನು ಸಂಹರಿಸಿದ ದೇವನೇ! ನಿನಗೆ ಜಯವಾಗಲಿ! ಕಂಸಸಂಹಾರಕನೇ! ನಿನಗೆ ಜಯವಾಗಲಿ!

ಜಯ ಪದ್ಮಪಲಾಶಾಕ್ಷ ಜಯ ಚಕ್ರಗದಾಧರ ।
ಜಯ ನೀಲಾಂಬುದಶ್ಯಾಮ ಜಯ ಸರ್ವಸುಖಪ್ರದ ॥ ೪೫ ॥

ಜಯ ದೇವ ಜಗತ್ಪೂಜ್ಯ ಜಯ ಸಂಸಾರನಾಶನ ।
ಜಯ ಲೋಕಪತೇ ನಾಥ ಜಯ ವಾಂಛಾಫಲಪ್ರದ ॥ ೪೬ ॥

ಸಂಸಾರಸಾಗರೇ ಘೋರೇ ನಿಃಸಾರೇ ದುಃಖಫೇನಿಲೇ ।
ಕ್ರೋಧಗ್ರಾಹಾಕುಲೇ ರೌದ್ರೇ ವಿಷಯೋದಕಸಂಪ್ಲವೇ ॥ ೪೭ ॥

ನಾನಾರೋಗೋರ್ಮಿಕಲಿಲೇ ಮೋಹಾವರ್ತಸುದುಸ್ತರೇ ।
ನಿಮಗ್ನೋಽಹಂ ಸುರಶ್ರೇಷ್ಠ ತ್ರಾಹಿ ಮಾಂ ಪುರುಷೋತ್ತಮ ॥ ೪೮ ॥

ಏವಂ ಪ್ರಸಾದ್ಯ ದೇವೇಶಂ ವರದಂ ಭಕ್ತವತ್ಸಲಂ ।
ಸರ್ವಲಕ್ಷಣಸಂಯುಕ್ತಂ ವನಮಾಲಾವಿಭೂಷಿತಂ ॥ ೪೯ ॥

---

೪೫. ಪದ್ಮಪತ್ರದಂತೆ ವಿಶಾಲನಯನನೇ ! ನಿನಗೆ ಜಯವಾಗಲಿ ! ಚಕ್ರಗದಾಧರನೇ ! ನಿನಗೆ ಜಯವಾಗಲಿ ! ನೀಲಮೇಘಶ್ಯಾಮ ! ನೀನು ಜಯಿಸು ! ಸಕಲಸುಖದಾಯಕ ! ನಿನಗೆ ಜಯ ವಾಗಲಿ !

೪೬. ಲೋಕಪೂಜ್ಯನಾದ ದೇವ ! ನಿನಗೆ ಜಯವಾಗಲಿ ! ಸಂಸಾರ ನಾಶಕ ! ನಿನಗೆ ಜಯವಾಗಲಿ ! ಲೋಕನಾಥ ! ನಿನಗೆ ಜಯನಾಗಲಿ ! ಕಾಮಿತಫಲದಾಯಕಸ್ವಾಮೀ ! ನಿನಗೆ ಜಯವಾಗಲಿ !

೪೭-೪೮. ಪುರುಷೋತ್ತಮದೇವನೇ ! ನಾನು ಘೋರವು, ನಿಸ್ಸಾರವು, ದುಃಖವೆಂಬ ನೊರೆಯುಳ್ಳದು, ಕ್ರೋಧವೆಂಬ ಮಾನುಗಳಿಂದ ಪೂರ್ಣವಾಗಿರುವುದು, ಭಯಂಕರವು, ಸ್ರಕ್ಚಂದನಾದಿವಿಷಯಗಳೆಂಬ ಉದಕಪೂರ್ಣವು, ನಾನಾವಿಧ ರೋಗಗಳೆಂಬ ಅಲೆಗಳಿಂದ ಕಲ್ಲೋಲವಾಗುತ್ತಿರುವುದು, ಮೋಹವೆಂಬ ಸುಳಿಗಳಿಂದ ದಾಟಲಶಕ್ಯವೂ ಆಗಿರುವ ಸಂಸಾರವೆಂಬ ಸಮುದ್ರದಲ್ಲಿ ಮುಳುಗಿರುವೆನು. ಸುರಶ್ರೇಷ್ಠ ! ನನ್ನನ್ನು ರಕ್ಷಿಸು !

೪೯-೫೦. ಮೋಹಿನೀ ! ಸಕಲಲಕ್ಷಣಸಂಪನ್ನನು, ವನಮಾಲೆಯಿಂದಲಂಕೃತನು, ಭಕ್ತವತ್ಸಲನು, ವರಪ್ರದನೂ ಆದ, ದೇವದೇವೇಶನನ್ನು ಈ ರೀತಿ

ದೃಷ್ಟ್ವಾ ನರೋಂಜಲಿಂ ಕೃತ್ವಾ ದಂಡವತ್ಪ್ರಣಿಪತ್ಯ ಚ ।
ಅಶ್ವಮೇಧಸಹಸ್ರಾಣಾಂ ಫಲಂ ಪ್ರಾಪ್ನೋತಿ ಮೋಹಿನಿ ॥ ೫೦ ॥

ಯತ್ಫಲಂ ಸರ್ವತೀರ್ಥೇಷು ಸ್ನಾನೇ ದಾನೇ ಪ್ರಕೀರ್ತನೇ ।
ನರಸ್ತತ್ಫಲಮಾಪ್ನೋತಿ ದೃಷ್ಟ್ವಾ ಕೃಷ್ಣಂ ಪ್ರಣಮ್ಯ ಚ ॥ ೫೧ ॥

ಯತ್ಫಲಂ ಸರ್ವದಾನೇಷು ವ್ರತೇಷು ನಿಯಮೇಷು ಚ ।
ನರಸ್ತತ್ಫಲಮಾಪ್ನೋತಿ ದೃಷ್ಟ್ವಾ ಕೃಷ್ಣಂ ಪ್ರಣಮ್ಯ ಚ ॥ ೫೨ ॥

ಯತ್ಫಲಂ ಬ್ರಹ್ಮಚರ್ಯೇಣ ಸಮ್ಯಕ್ ಚೀರ್ಣೇನ ಕೀರ್ತಿತಂ ।
ನರಸ್ತತ್ಫಲಮಾಪ್ನೋತಿ ದೃಷ್ಟ್ವಾ ಕೃಷ್ಣಂ ಪ್ರಣಮ್ಯ ಚ ॥ ೫೩ ॥

ಗಾರ್ಹಸ್ಥ್ಯೇನ ಯಥೋಕ್ತೇನ ಯತ್ಫಲಂ ಸಮುದಾಹೃತಂ ।
ನರಸ್ತತ್ಫಲಮಾಪ್ನೋತಿ ದೃಷ್ಟ್ವಾ ಕೃಷ್ಣಂ ಪ್ರಣಮ್ಯ ಚ ॥ ೫೪ ॥

---

ಯಾಗಿ ದರ್ಶನಮಾಡಿ ಪ್ರಸನ್ನೀಕರಿಸಿಕೊಂಡು ಮನುಷ್ಯನು ಕೈಮುಗಿದು, ಸಾಷ್ಟಾಂಗ ನಮಸ್ಕಾರಮಾಡಿದರೆ ಸಾವಿರ ಅಶ್ವಮೇಧಯಜ್ಞಗಳ ಫಲವನ್ನು ಹೊಂದುವನು!

೫೧. ಸಕಲ ತೀರ್ಥಗಳಲ್ಲಿಯೂ ಸ್ನಾನಮಾಡುವುದರಿಂದ, ಸಕಲ ದಾನ ಮತ್ತು ದೇವಸಂಕೀರ್ತನೆ ಮಾಡುವುದರಿಂದಲೂ ಮನುಷ್ಯನು ಹೊಂದುವ ಫಲವನ್ನು ಕೃಷ್ಣದರ್ಶನಮಾಡಿ ನಮಸ್ಕಾರಮಾಡುವ ಮಾತ್ರದಿಂದಲೇ ಪಡೆಯುವನು.

೫೨. ಸಮಸ್ತವಾದ ದಾನ, ವ್ರತ, ನಿಯಮಗಳ ಅನುಷ್ಠಾನದಿಂದ ಪಡೆಯುವ ಫಲವನ್ನು ಮನುಷ್ಯನು ಕೃಷ್ಣದರ್ಶನಮಾಡಿ ನಮಸ್ಕಾರಮಾಡುವ ಮಾತ್ರದಿಂದಲೇ ಹೊಂದುವನು.

೫೩. ಬ್ರಹ್ಮಚರ್ಯಾನುಷ್ಠಾನದಿಂದ ಬರುತ್ತದೆಂದುಕ್ತವಾಗಿರುವ ಫಲವನ್ನು ಮನುಷ್ಯನು ಈ ಕೃಷ್ಣದರ್ಶನ ಪ್ರಣಾಮಗಳಿಂದಲೇ ಹೊಂದುವನು.

೫೪. ವಿಹಿತರೀತಿಯಿಂದಾಚರಿಸಿದ ಗಾರ್ಹಸ್ಥ್ಯಕ್ಕೆ ಉಕ್ತವಾಗಿರುವ ಫಲವು ಮನುಷ್ಯನಿಗೆ ಕೃಷ್ಣದರ್ಶನ ಪ್ರಣಾಮಮಾಡುವುದರಿಂದಲೇ ಬರುವುದು.

ಯತ್ಫಲಂ ವನವಾಸೇನ ವಾನಪ್ರಸ್ಥಸ್ಯ ಕೀರ್ತಿತಂ ।
ನರಸ್ತತ್ಫಲಮಾಪ್ನೋತಿ ದೃಷ್ಟ್ವಾ ಕೃಷ್ಣಂ ಪ್ರಣಮ್ಯ ಚ ॥ ೫೫ ॥

ಸಂನ್ಯಾಸೇನ ಯಥೋಕ್ತೇನ ಯತ್ಫಲಂ ಸಮುದಾಹೃತಂ ।
ನರಸ್ತತ್ಫಲಮಾಪ್ನೋತಿ ದೃಷ್ಟ್ವಾ ಕೃಷ್ಣಂ ಪ್ರಣಮ್ಯ ಚ ॥ ೫೬ ॥

ಕಿಂಚಾತ್ರ ಬಹುನೋಕ್ತೇನ ಮಾಹಾತ್ಮ್ಯಂ ತಸ್ಯ ಭಾಮಿನಿ ।
ದೃಷ್ಟ್ವಾ ಕೃಷ್ಣಂ ನರೋ ಭಕ್ತ್ಯಾ ಮೋಕ್ಷಂ ಪ್ರಾಪ್ನೋತಿ ದುರ್ಲಭಂ ॥

ಪಾಪೈರ್ವಿಮುಕ್ತಃ ಶುದ್ಧಾತ್ಮಾ ಕಲ್ಪಕೋಟಿಸಮುದ್ಭವೈಃ ।
ಶ್ರಿಯಾ ಪರಮಯಾ ಯುಕ್ತಃ ಸರ್ವೈಃ ಸಮುದಿತೋ ಗುಣೈಃ ॥ ೫೮ ॥

ಸರ್ವಕಾಮಸಮೃದ್ಧೇನ ವಿಮಾನೇನ ಸುವರ್ಚಸಾ ।
ತ್ರಿಃಸಪ್ತಕುಲಮುದ್ಧೃತ್ಯ ನರೋ ವಿಷ್ಣುಪುರಂ ವ್ರಜೇತ್ ॥ ೫೯ ॥

---

೫೫. ವಾನಪ್ರಸ್ಥಾಶ್ರಮಿಯು ವನವಾಸಮಾಡುವುದರಿಂದ ಗಳಿಸುವ ಫಲವು ಮನುಷ್ಯನಿಗೆ ಕೃಷ್ಣದರ್ಶನ ಪ್ರಣಾಮಗಳಿಂದಲೇ ಸಂಭವಿಸುವುದು.

೫೬. ಶಾಸ್ತ್ರೋಕ್ತ ಸನ್ಯಾಸಾಶ್ರಮಧರ್ಮದಿಂದ ಬರುತ್ತದೆಂದು ಹೇಳಿರುವ ಫಲವನ್ನೂ ಸಹ ಮನುಷ್ಯನು ಕೃಷ್ಣದರ್ಶನ ನಮನಾದಿಗಳಿಂದಲೇ ಪಡೆಯುವನು.

೫೭. ಭಾಮಿನೀ! ಈ ದೇವನ ಮಹಿಮೆಯನ್ನು ಹೆಚ್ಚು ಹೇಳಿದುದರಿಂದೇನು? ಮನುಷ್ಯನು ಭಕ್ತಿಯಿಂದ ಕೃಷ್ಣದರ್ಶನಮಾಡಿದರೆ ದುರ್ಲಭವಾದ ಮೋಕ್ಷವನ್ನೇ ಹೊಂದುವನು.

೫೮. ಕೃಷ್ಣದರ್ಶನಮಾಡಿದ ಮನುಷ್ಯನು ಕೋಟ್ಯಂತರ ಕಲ್ಪಗಳಲ್ಲಿ ಮಾಡಿದ ಪಾಪಗಳಿಂದ ವಿಮೋಚನೆಯಾಗಿ ಶುದ್ಧನಾಗುವನು. ಉತ್ತಮ ಸಂಪತ್ತು ಮತ್ತು ಸಕಲಗುಣಗಳಿಂದಲೂ ಯುಕ್ತನೂ ಆಗುವನು.

೫೯. ಅಂತಹ ಮನುಷ್ಯನು ಸಕಲೇಷ್ಟಪರಿಪೂರ್ಣವಾದ, ಬಹುವಾಗಿ ತೇಜಸ್ಸುಳ್ಳ ವಿಮಾನದಿಂದ ಇಪ್ಪತ್ತೊಂದು ಕುಲವನ್ನುದ್ಧರಿಸಿ ವಿಷ್ಣುಲೋಕಕ್ಕೆ ಹೋಗುವನು.

ತತಃ ಕಲ್ಪಶತಂ ಯಾವದ್ಭುಕ್ತ್ವಾ ಭೋಗಾನ್ಮನೋರಮಾನ್ ।
ಸ ಗಂಧರ್ವಾಪ್ಸರಃಸಾರ್ಧಂ ಯಥಾ ವಿಷ್ಣುಶ್ಚತುರ್ಭುಜಃ ॥ ೬೦ ॥

ಚ್ಯುತಸ್ತಸ್ಮಾದಿಹಾಯಾತೋ ವಿಪ್ರಾಣಾಂ ಪ್ರವರೇ ಕುಲೇ ।
ಸರ್ವಜ್ಞಃ ಸರ್ವವೇದೀ ಚ ಜಾಯತೇ ಗತಮತ್ಸರಃ ॥ ೬೧ ॥

ಸ್ವಧರ್ಮನಿರತಃ ಶಾಂತೋ ದಾತಾ ಭೂತಹಿತೇ ರತಃ ।
ಆಸಾದ್ಯ ವೈಷ್ಣವಂ ಜ್ಞಾನಂ ತತೋ ಮುಕ್ತಿಮವಾಪ್ನುಯಾತ್ ॥ ೬೨ ॥

ತತಃ ಸಂಪೂಜ್ಯ ಮಂತ್ರೇಣ ಸುಭದ್ರಾಂ ಭಕ್ತವತ್ಸಲಾಂ ।
ಪ್ರಸಾದಯೇಚ್ಚ ವಿಧಿಜೇ ಪ್ರಣಿಪತ್ಯ ಕೃತಾಂಜಲಿಃ ॥ ೬೩ ॥

ನಮಸ್ತೇ ಸರ್ವಗೇ ದೇವಿ ನಮಸ್ತೇ ಶುಭಸೌಖ್ಯದೇ ।
ತ್ರಾಹಿ ಮಾಂ ಪದ್ಮಪತ್ರಾಕ್ಷಿ ಕಾತ್ಯಾಯನಿ ನಮೋಽಸ್ತು ತೇ ॥ ೬೪ ॥

---

೬೦. ಅಲ್ಲಿ ಚತುರ್ಭುಜನಾದ ವಿಷ್ಣುವಿನ ಇಚ್ಛಾನುಸಾರವಾಗಿ ಗಂಧರ್ವ ಮತ್ತು ಅಪ್ಸರಸ್ತ್ರೀಯರಿಂದೊಡಗೂಡಿ ಮನೋಹರವಾದ ಭೋಗಗಳನ್ನು ನೂರು ಕಲ್ಪಗಳವರೆಗೆ ಅನುಭವಿಸುವನು.

೬೧. ಬಳಿಕ ಆ ಲೋಕವನ್ನು ಬಿಟ್ಟು ಇಲ್ಲಿಗೆ ಬಂದು ಉತ್ತಮವಾದ ಬ್ರಾಹ್ಮಣಕುಲದಲ್ಲಿ ಜನಿಸಿ ಸರ್ವಜ್ಞನು, ಸರ್ವವೇತೃವೂ, ಮಾತ್ಸರ್ಯಾದಿ ದೋಷಗಳಿಲ್ಲದವನೂ ಆಗುವನು.

೬೨. ಅವನು ಸ್ವಧರ್ಮನಿಷ್ಠನು, ಶಾಂತಿಸಂಪನ್ನನು, ದಾನಿಯು, ಪ್ರಾಣಿಗಳಿಗುಪಕಾರಿಯೂ ಆಗಿ ವಿಷ್ಣುಸಾಕ್ಷಾತ್ಕಾರವನ್ನು ಹೊಂದಿ ಮುಕ್ತಿಯನ್ನು ಪಡೆಯುವನು.

೬೩. ಬ್ರಹ್ಮನಂದನನೇ! ಅನಂತರ ವಿಹಿತಮಂತ್ರದಿಂದ ಭಕ್ತವತ್ಸಲೆಯಾದ ಸುಭದ್ರಾದೇವಿಯನ್ನು ಪೂಜಿಸಿ ಕೈಮುಗಿದು ನಮಸ್ಕಾರಮಾಡಿ ಪ್ರಸನ್ನೀಕರಿಸಿಕೊಳ್ಳಬೇಕು.

೬೪. ಮಂತ್ರ :— ವ್ಯಾಪಕಳಾದ ದೇವಿಯೇ! ನಿನಗೆ ನಮಸ್ಕಾರ! ಶುಭಸೌಖ್ಯದಾಯಕಳೇ! ನಿನಗೆ ನಮಸ್ಕಾರ! ಪದ್ಮಪತ್ರದಂತೆ ನೇತ್ರಗಳುಳ್ಳ ಕಾತ್ಯಾಯನೀದೇವಿಯೇ! ನಿನಗೆ ನಮಸ್ಕಾರಮಾಡುವೆನು; ನನ್ನನ್ನು ರಕ್ಷಿಸು!

ಏವಂ ಪ್ರಸಾದ್ಯ ತಾಂ ದೇವೀಂ ಜಗದ್ಧಾತ್ರೀಂ ಜಗದ್ಧಿತಾಂ ।
ಬಲದೇವಸ್ಯ ಭಗಿನೀಂ ಸುಭದ್ರಾಂ ವರದಾಂ ಶಿವಾಂ ॥ ೬೫ ॥

ಕಾಮಗೇನ ವಿಮಾನೇನ ನರೋ ವಿಷ್ಣುಪುರಂ ವ್ರಜೇತ್ ।
ಆಭೂತಸಂಪ್ಲವಂ ಯಾವತ್ಕ್ರೀಡಿತ್ವಾ ತತ್ರ ದೇವವತ್ ॥ ೬೬ ॥

ಇಹ ಮಾನುಷತಾಂ ಪ್ರಾಪ್ತೋ ಬ್ರಾಹ್ಮಣೋ ವೇದವಿದ್ಭವೇತ್ ।
ಪ್ರಾಪ್ಯ ಯೋಗಂ ಹರೇಸ್ತತ್ರ ಮೋಕ್ಷಂ ಚ ಲಭತೇ ಧ್ರುವಂ ॥ ೬೭ ॥

ನಿಷ್ಕ್ರಮ್ಯ ದೇವತಾಗಾರಾತ್ಕೃತಕೃತ್ಯೋ ಭವೇನ್ನರಃ ।
ಪ್ರಣಮ್ಯಾಯತನೇ ಪಶ್ಚಾದ್ವ್ರಜೇತ್ತತ್ರ ಸಮಾಹಿತಃ ॥ ೬೮ ॥

ಇಂದ್ರನೀಲಮಯೋ ವಿಷ್ಣುರ್ಯತ್ರಾಸ್ತೇ ವಾಲುಕಾವೃತಃ ।
ಅಂತರ್ಧಾನೇಽಪಿ ತಂ ನತ್ವಾ ತತೋ ವಿಷ್ಣುಪುರಂ ವ್ರಜೇತ್ ॥ ೬೯ ॥

---

೬೫-೬೭. ಜಗದ್ಧಾತ್ರಿಯು, ಲೋಕಹಿತಳು, ಬಲರಾಮನ ಸಹೋದರಿಯು, ವರಪ್ರದಳು, ಮಂಗಳಕರಳೂ ಆದ ಆ ಸುಭದ್ರಾದೇವಿಯನ್ನು ಈ ರೀತಿಯಾಗಿ ಆರಾಧಿಸಿ ಆ ದೇವಿಯ ಅನುಗ್ರಹವನ್ನು ಸಂಪಾದಿಸಿದರೆ ಮನುಷ್ಯನು ಕಾಮಚಾರಿಯಾದ ವಿಮಾನದಿಂದ ವಿಷ್ಣುಲೋಕಕ್ಕೆ ಹೋಗುವನು. ಅಲ್ಲಿ ಪ್ರಳಯಪರ್ಯಂತವಾಗಿ ದೇವತೆಯಂತೆ ಕ್ರೀಡಿಸಿ ಬಳಿಕ ಇಲ್ಲಿ ಮನುಷ್ಯಜನ್ಮವನ್ನು ಹೊಂದಿ ವೇದವೇತ್ತೃವಾದ ಬ್ರಾಹ್ಮಣನಾಗುವನು. ಆ ಜನ್ಮದಲ್ಲಿ ಹರಿಭಕ್ತಿಯನ್ನು ಮಾಡಿ ಸ್ಥಿರವಾದ ಮೋಕ್ಷವನ್ನು ಪಡೆಯುವನು.

೬೮-೭೦. ಹೀಗೆ ಕರ್ತವ್ಯವನ್ನು ಮುಗಿಸಿಕೊಂಡು, ದೇವಾಲಯದಿಂದ ಹೊರಕ್ಕೆ ಬಂದು ಆಲಯವನ್ನು ನಮಸ್ಕರಿಸಿದರೆ ಮನುಷ್ಯನು ಕೃತಕೃತ್ಯನಾಗುವನು. ಅನಂತರ ಸಮಾಧಾನ ಮನಸ್ಕನಾಗಿ ಮರಳಿನಿಂದ ಆವರಿಸಲ್ಪಟ್ಟಿರುವ ಇಂದ್ರನೀಲಮಯನಾದ ಹರಿಯು ಇರುವ ಸ್ಥಳಕ್ಕೆ ಹೋಗಿ ಅದೃಶ್ಯನಾಗಿದ್ದರೂ ಆ ವಿಷ್ಣುವನ್ನು ನಮಸ್ಕರಿಸಿ ಬಳಿಕ ಸರ್ವದೇವಾಂತರ್ಗತನು, ಹಿರಣ್ಯಕಶಿಪುವ

ಸರ್ವದೇವಮಯೋ ದೇವೋ ಹಿರಣ್ಯಕಶಿಪೂದ್ಧರಃ ।
ಯತ್ರಾಸ್ತೇ ನಿತ್ಯದಾ ದೇವಿ ಸಿಂಹಾರ್ಧಕೃತವಿಗ್ರಹಃ ॥ ೭೦ ॥

ಭಕ್ತ್ಯಾ ದೃಷ್ಟ್ವಾ ತು ತಂ ದೇವಂ ಪ್ರಣಮ್ಯ ನೃಹರಿಂ ಶುಭೇ ।
ಮುಚ್ಯತೇ ಪಾತಕೈರ್ಮರ್ತ್ಯಃ ಸಮಸ್ತೈರ್ನಾತ್ರ ಸಂಶಯಃ ॥ ೭೧ ॥

ನರಸಿಂಹಸ್ಯ ಯೇ ಭಕ್ತಾ ಭವಂತಿ ಭುವಿ ಮಾನವಾಃ ।
ನ ತೇಷಾಂ ದುಷ್ಕೃತಂ ಕಿಂಚಿತ್ಫಲಂ ಚ ಸ್ಯಾದ್ಯದೀಪ್ಸಿತಂ ॥ ೭೨ ॥

ತಸ್ಮಾತ್ಸರ್ವಪ್ರಯತ್ನೇನ ನರಸಿಂಹಂ ಸಮಾಶ್ರಯೇತ್ ।
ಧರ್ಮಾರ್ಥಕಾಮಮೋಕ್ಷಾಣಾಂ ಫಲಂ ಯಸ್ಮಾತ್ಪ್ರಯಚ್ಛತಿ ॥ ೭೩ ॥

ತಸ್ಮಾತ್ತಂ ಬ್ರಹ್ಮತನಯೇ ಭಕ್ತ್ಯಾ ಸಂಪೂಜಯೇತ್ಸದಾ ।
ಮೃಗರಾಜಂ ಮಹಾವೀರ್ಯಂ ಸರ್ವಕಾಮಫಲಪ್ರದಂ ॥ ೭೪ ॥

---

ನ್ನುದ್ಧರಿಸಿದವನು, ನರಸಿಂಹರೂಪಿಯೂ ಆದ ದೇವನು ಸರ್ವದಾ ಸನ್ನಿಹಿತನಾಗಿರುವ ವಿಷ್ಣುಪುರಕ್ಕೆ ಹೋಗಬೇಕು.

೭೧. ಶೋಭನೇ! ಭಕ್ತಿಯಿಂದ ಆ ನರಸಿಂಹದೇವನನ್ನು ಸಂದರ್ಶಿಸಿ ನಮಸ್ಕರಿಸಿದರೆ ಮನುಷ್ಯನು ಸಮಸ್ತಪಾಪಗಳಿಂದಲೂ ಮುಕ್ತನಾಗುವನು. ಸಂದೇಹವಿಲ್ಲ.

೭೨. ಭೂಲೋಕದಲ್ಲಿ ನರಸಿಂಹಭಕ್ತರಾದ ಮಾನವರಿಗೆ ಪಾಪವು ಸ್ವಲ್ಪವೂ ಉಳಿಯುವುದಿಲ್ಲ ; ಇಷ್ಟಫಲವೆಲ್ಲವೂ ಲಭಿಸುವುದು.

೭೩. ಆದಕಾರಣ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥಚತುಷ್ಟಯವನ್ನೂ ಕೊಡುವುದರಿಂದ ಸರ್ವಪ್ರಯತ್ನದಿಂದಲೂ ನರಸಿಂಹನನ್ನೇ ಸೇವಿಸಬೇಕು.

೭೪. ಆದಕಾರಣ ಬ್ರಹ್ಮಕುಮಾರಿಯೇ! ಮಹಾಪರಾಕ್ರಮಿಯು, ಸರ್ವೇಷ್ಟಫಲದಾಯಕನೂ ಆದ ನರಸಿಂಹನನ್ನು ಯಾವಾಗಲೂ ಭಕ್ತಿಯಿಂದ ಪೂಜಿಸಬೇಕು.

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಸ್ತ್ರಿಯಃ ಶೂದ್ರಾಂತ್ಯಜಾದಯಃ ।
ಸಂಪೂಜ್ಯ ತು ಸುರಶ್ರೇಷ್ಠಂ ಭಕ್ತ್ಯಾ ಸಿಂಹವಪುರ್ಧರಂ ॥ ೭೫ ॥

ಮುಚ್ಯಂತೇಽಶುಭಾದ್ದುಃಖಾಜ್ಜನ್ಮಕೋಟಿಸಮುದ್ಭವಾತ್ ।
ಸಂಪೂಜ್ಯ ತಂ ಸುರಶ್ರೇಷ್ಠಂ ಪ್ರಾಪ್ನುವಂತ್ಯಭಿವಾಂಛಿತಂ ॥ ೭೬ ॥

ದೇವತ್ವಮಮರೇಶತ್ವಂ ಧನೇಶತ್ವಂ ಚ ಭಾಮಿನಿ ।
ಯಕ್ಷವಿದ್ಯಾಧರತ್ವಂ ಚ ತಥಾನ್ಯಚ್ಚ ಪ್ರಯಚ್ಛತಿ ॥ ೭೭ ॥

ಶೃಣುಷ್ವ ನರಸಿಂಹಸ್ಯ ಪ್ರಭಾವಂ ವಿಧಿನಂದಿನಿ ।
ಅಜಿತಸ್ಯಾಪ್ರಮೇಯಸ್ಯ ಭುಕ್ತಿಮುಕ್ತಿಪ್ರದಸ್ಯ ಚ ॥ ೭೮ ॥

ಕಃ ಶಕ್ನೋತಿ ಗುಣಾನ್ವಕ್ತುಂ ಸಮಸ್ತಾಂಸ್ತಸ್ಯ ಸುವ್ರತೇ ।
ಸಿಂಹಾರ್ಧಕೃತದೇಹಸ್ಯ ಪ್ರವಕ್ಷ್ಯಾಮಿ ಸಮಾಸತಃ ॥ ೭೯ ॥

---

೭೫-೭೬. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಸ್ತ್ರೀ, ಶೂದ್ರ ಮತ್ತು ಅಂತ್ಯಜ ಮುಂತಾದ ಭಕ್ತರೆಲ್ಲರೂ ಸಿಂಹಾಕಾರದ ಶರೀರವನ್ನು ಧರಿಸಿರುವ ದೇವಶ್ರೇಷ್ಠನನ್ನು ಪೂಜಿಸಿದರೆ ಕೋಟ್ಯಾಂತರ ಜನ್ಮಗಳಲ್ಲಿ ಪ್ರಾಪ್ತವಾದ ಅಶ್ರೇಯಸ್ಕರವಾದ ದುಃಖದಿಂದ ಮುಕ್ತರಾಗುವರು. ಅಷ್ಟೇ ಅಲ್ಲ. ಆ ಶ್ರೇಷ್ಠದೇವನನ್ನು ಪೂಜೆ ಮಾಡುವುದರಿಂದ ಇಷ್ಟಾರ್ಥವನ್ನೂ ಪಡೆಯುವರು.

೭೭. ಸುಂದರೀ ! ಹೀಗೆ ಪೂಜಿತನಾದ ದೇವನು ಪೂಜಕನಿಗೆ ದೇವತ್ವ, ಅಮರೇಶತ್ವ, ಧನೇಶತ್ವ, ಯಕ್ಷವಿದ್ಯಾಧರಪದವಿ ಮುಂತಾದುದೆಲ್ಲವನ್ನೂ ಕೊಡುವನು.

೭೮. ಬ್ರಹ್ಮಕುಮಾರೀ ! ಯಾರಿಂದಲೂ ಜಯಿಸಲ್ಪಡದವನು, ಅಪರಿಮಿತನು ಮತ್ತು ಭೋಗಮೋಕ್ಷಪ್ರದಾಯಕನೂ ಆದ ನರಸಿಂಹನ ಪ್ರಭಾವವನ್ನು ಹೇಳುವೆನು ಕೇಳು.

೭೯. ಸುವ್ರತೇ ! ಸಿಂಹಾಕಾರವಾದ ಅರ್ಧಶರೀರವುಳ್ಳ ಆ ದೇವನ ಗುಣಗಳೆಲ್ಲವನ್ನೂ ವರ್ಣಿಸಲು ಯಾವನು ಸಮರ್ಥನು ? ಆದುದರಿಂದ ಅವನ ಮಹಿಮೆಯನ್ನು ಸಂಕ್ಷೇಪವಾಗಿ ಹೇಳುವೆನು.

ಯೂಃ ಕಾಶ್ಚಿತ್ಸಿದ್ಧಯಶ್ಚಾತ್ರ ಶ್ರೂಯಂತೇ ದೈವಮಾನುಷಾಃ |
ಪ್ರಸಾದಾತ್ತಸ್ಯ ತಾಃ ಸರ್ವಾಃ ಸಿಧ್ಯಂತೇ ನಾತ್ರ ಸಂಶಯಃ || ೮೦ ||

ಸ್ವರ್ಗೇ ಮರ್ತ್ಯೇ ಚ ಪಾತಾಲೇ ದಿವಿ ತೋಯೇ ಸುರೇ ನಗೇ |
ಪ್ರಸಾದಾತ್ತಸ್ಯ ದೇವಸ್ಯ ಭವತ್ಯವ್ಯಾಹತಾ ಗತಿಃ || ೮೧ ||

ಅಸಾಧ್ಯಂ ತಸ್ಯ ದೇವಸ್ಯ ನಾಸ್ತ್ಯತ್ರ ಸಚರಾಚರೇ |
ನರಸಿಂಹಸ್ಯ ಸುಭಗೇ ಸದಾ ಭಕ್ತಾನುಕಂಪಿನಃ || ೮೨ ||

ವಿಧಾನಂ ತಸ್ಯ ವಕ್ಷ್ಯಾಮಿ ಭಕ್ತಾನಾಮುಪಕಾರಕಂ |
ಯೇನ ಪ್ರಸೀದೇತ್ತ್ವಚ್ಛಾಸೌ ಸಿಂಹಾರ್ಧಕೃತವಿಗ್ರಹಃ || ೮೩ ||

ಯತ್ತತ್ವಂ ತಸ್ಯ ದೇವಸ್ಯ ತದಜ್ಞಾತಂ ಸುರಾಸುರೈಃ |
ಶಾಕಯಾವಕಮೂಲೈಸ್ತು ಫಲಪಿಣ್ಯಾಕಸಕ್ತುಭಿಃ || ೮೪ ||

---

೮೦. ದೈವ ಅಥವಾ ಮಾನುಷಸಿದ್ಧಿಗಳೆಂದು ಪ್ರಸಿದ್ಧವಾಗಿರುವ ಸಕಲ ಸಿದ್ಧಿಗಳೂ ಆ ನರಸಿಂಹನ ಅನುಗ್ರಹದಿಂದ ಸಿದ್ಧಿಸುವುವು. ಈ ವಿಷಯದಲ್ಲಿ ಸಂದೇಹವಿಲ್ಲ.

೮೧. ಆ ದೇವನ ಅನುಗ್ರಹದಿಂದ ಸ್ವರ್ಗಲೋಕ, ಮರ್ತ್ಯಲೋಕ, ಪಾತಾಲ, ಅಂತರಿಕ್ಷ, ಜಲ, ದೇವಲೋಕ, ಪರ್ವತ ಇವುಗಳಲ್ಲೆಲ್ಲಾ ತಡೆಯಿಲ್ಲದೆ ಗತಿಯು ಲಭಿಸುವುದು.

೮೨. ಮನೋಹರಳಾದ ಮೋಹಿನಿಯೇ! ಚರಾಚರಸಹಿತವಾದ ಈ ಪ್ರಪಂಚದಲ್ಲಿ ಯಾವಾಗಲೂ ಭಕ್ತಾನುಗ್ರಹಶೀಲನಾದ ನರಸಿಂಹದೇವನಿಗೆ ಅಸಾಧ್ಯವಾದುದಾವುದೂ ಇಲ್ಲ.

೮೩. ಈ ನರಸಿಂಹನು ಯಾವುದರಿಂದ ಪ್ರಸನ್ನನಾಗುವನೋ ಅಂತಹ ಭಕ್ತೋಪಕಾರಕವಾದ ಅವನ ಪೂಜಾವಿಧಾನವನ್ನು ಹೇಳುವೆನು.

೮೪-೮೫. ಆ ದೇವನ ಮಹಿಮೆಯು ಸುರಾಸುರರಿಗೂ ಸಹ ಸಂಪೂರ್ಣವಾಗಿ ತಿಳಿದಿಲ್ಲ. ಭದ್ರೇ! ಸಾಧಕವರ್ಯನು ಶಾಕ, ಯವ, ಗೆಡ್ಡೆ, ಹಣ್ಣು,

ಪಯೋಭಕ್ಷ್ಯೇಣ ವಾ ಭದ್ರೇ ವರ್ತತೇ ಸಾಧಕೇಶ್ವರಃ |
ಕಾಸಕೌಪೀನವಾಸಾಶ್ಚ ಧ್ಯಾನಯುಕ್ತೋ ಜಿತೇಂದ್ರಿಯಃ || ೮೫ ||

ಅರಣ್ಯೇ ವಿಜನೇ ದೇಶೇ ನದೀಸಂಗಮಪರ್ವತೇ |
ಸಿದ್ಧಕ್ಷೇತ್ರೇ ಚೋಷರೇ ಚ ನರಸಿಂಹಾಶ್ರಮೇ ತಥಾ || ೮೬ ||

ಪ್ರತಿಷ್ಠಾಪ್ಯ ಸ್ವಯಂ ಚಾಪಿ ಪೂಜಾಂ ಕೃತ್ವಾ ವಿಧಾನತಃ |
ಉಪಪಾತಕವಾನ್ಪೋಪಿ ಮಹಾಪಾತಕವಾನಪಿ || ೮೭ ||

ಮುಕ್ತೋ ಭವೇತ್ಪಾತಕೇಭ್ಯಃ ಸಾಧಕೋ ನಾತ್ರ ಸಂಶಯಃ |
ಕೃತ್ವಾ ಪ್ರದಕ್ಷಿಣಂ ತತ್ರ ನರಸಿಂಹಂ ಪ್ರಪೂಜಯೇತ್ || ೮೮ ||

ಗಂಧಪುಷ್ಪಾದಿಭಿರ್ಧೂಪೈಃ ಪ್ರಣಮ್ಯ ಶಿರಸಾ ಪ್ರಭುಂ |
ಕರ್ಪೂರಚಂದನಾಕ್ತಾನಿ ಜಾತೀಪುಷ್ಪಾಣಿ ಮಸ್ತಕೇ || ೮೯ ||

---

ಹಿಂಡಿ, ಹಿಟ್ಟು, ಕ್ಷೀರ ಇವುಗಳನ್ನೇ ಆಹಾರಮಾಡುವನು. ಕಾಚೀಹುಲ್ಲಿನ ಕೌಪೀನವನ್ನು ಧರಿಸಿ ಜಿತೇಂದ್ರಿಯನಾಗಿ ಧ್ಯಾನದಲ್ಲಾಸಕ್ತನಾಗಿರುವನು.

೮೬-೮೮. ದೇವಿಯೇ! ಸಾಧಕನು ಅರಣ್ಯ, ನಿರ್ಜನಪ್ರದೇಶ, ನದಿಯ ಸಂಗಮಸ್ಥಾನ, ಪರ್ವತ, ಸಿದ್ಧಕ್ಷೇತ್ರ, ಊಷರಕ್ಷೇತ್ರ, ನರಸಿಂಹಾಶ್ರಮ ಈ ಸ್ಥಾನಗಳಲ್ಲಿ ನರಸಿಂಹನನ್ನು ಪ್ರತಿಷ್ಠೆಮಾಡಿಸಿ ತಾನೂ ವಿಧಾನಾನುಸಾರವಾಗಿ ಪೂಜೆಮಾಡಿದರೆ ಅವನ ಉಪಪಾತಕ ಅಥವಾ ಮಹಾಪಾತಕ ಮಾಡಿದವನಾದರೂ ಅವುಗಳೆಲ್ಲದರಿಂದಲೂ ಮುಕ್ತನಾಗುವನು. ಈ ವಿಷಯದಲ್ಲಿ ಸಂಶಯವಿಲ್ಲ.

೮೮-೯೦. ಅಲ್ಲಿ ನರಸಿಂಹದೇವನನ್ನು ಪ್ರದಕ್ಷಿಣೆಮಾಡಿ, ಗಂಧ, ಪುಷ್ಪ, ಧೂಪ ದೀಪಾದಿಗಳಿಂದ ಪೂಜಿಸಬೇಕು. ಬಳಿಕ ಸ್ವಾಮಿಗೆ ತಲೆಬಾಗಿ ನಮಸ್ಕರಿಸಿ ನರಸಿಂಹನ ಶಿರಸ್ಸಿನಮೇಲೆ ಕರ್ಪೂರ, ಚಂದನಗಳಲ್ಲಿ ನೆನೆಸಿದ ಜಾಜಿಪುಷ್ಪ

ಪ್ರದದ್ಯಾನ್ನರಸಿಂಹಸ್ಯ ತತಸ್ಸಿದ್ಧಿಃ ಪ್ರಜಾಯತೇ ।
ಭಗವಾನ್ಸರ್ವಕಾರ್ಯೇಷು ನ ಕ್ವಚಿತ್ಪ್ರತಿಹಂತಿ ನಃ ॥ ೯೦ ॥

ನ ಶಕ್ತಾಸ್ತಂ ಸಮಾಕ್ರಾಂತುಂ ಬ್ರಹ್ಮರುದ್ರಾದಯಃ ಸುರಾಃ ।
ಕಿಂ ಪುನರ್ದಾನವಾ ಲೋಕೇ ಸಿದ್ಧಗಂಧರ್ವಮಾನುಷಾಃ ॥ ೯೧ ॥

ವಿದ್ಯಾಧರಾ ಯಕ್ಷಗಣಾಃ ಸಕಿನ್ನರಮಹೋರಗಾಃ ।
ತೇ ಸರ್ವೇ ಪ್ರಲಯಂ ಯಾಂತಿ ದಿವ್ಯಾ ದಿವ್ಯಾಗ್ನಿತೇಜಸಾ ॥ ೯೨ ॥

ಸಕೃಜ್ಜಪ್ತ್ವಾಗ್ನಿಶಿಖಯಾ ಹನ್ಯಾತ್ಸರ್ವಾನುಪದ್ರವಾನ್ ।
ತ್ರಿರ್ಜಪ್ತ್ವಾ ಕವಚಂ ದಿವ್ಯಂ ಸಂರಕ್ಷೇದ್ದೈತ್ಯದಾನವಾತ್ ॥ ೯೩ ॥

ಭೂತಾತ್ಪಿಶಾಚಾದ್ರಕ್ಷೋಭ್ಯೋ ಯೇ ಚಾನ್ಯೇ ಪರಿಪಂಥಿನಃ ।
ತ್ರಿರ್ಜಪ್ತಂ ಕವಚಂ ದಿವ್ಯಮಭೇದ್ಯಂ ಚ ಸುರಾಸುರೈಃ ॥ ೯೪ ॥

---

ಗಳನ್ನು ಸಮರ್ಪಿಸಬೇಕು. ಅದರಿಂದ ಸಿದ್ಧಿಯುಂಟಾಗುವುದು. ಹಾಗೆಮಾಡಿದರೆ ಭಗವಂತನು ನಮ್ಮ ಎಲ್ಲಾ ಕಾರ್ಯಗಳಿಗೂ ತಡೆಬಾರದಂತೆ ಕಾಪಾಡುವನು.

೯೧-೯೨. ಆ ನರಸಿಂಹನನ್ನು ಇದಿರಿಸಲು ಬ್ರಹ್ಮರುದ್ರಾದಿದೇವತೆಗಳೇ ಸಮರ್ಥರಲ್ಲ. ಹೀಗಿರುವಾಗ ದಾನವರು, ಸಿದ್ಧರು, ಗಂಧರ್ವರು, ಮನುಷ್ಯರು ವಿದ್ಯಾಧರರು, ಯಕ್ಷಗಣಗಳು, ಕಿನ್ನರರು ಮತ್ತು ಮಹೋರಗರು ಸಮರ್ಥರಲ್ಲವೆಂದು ಹೇಳತಕ್ಕದೇನು? ಆ ದೇವನ ದಿವ್ಯಾಗ್ನಿತೇಜಸ್ಸಿನಿಂದ ಅವರೆಲ್ಲರೂ ಲಯವಾಗವರು.

೯೩-೯೪. ಆ ನರಸಿಂಹ ಕವಚವನ್ನು ಒಂದಾವರ್ತಿ ಜಪಿಸಿದರೆ ಸಕಲೋಪದ್ರವಗಳೂ ನಾಶವಾಗುವುವು. ಮೂರಾವರ್ತಿ ಜಪಿಸಿದರೆ ಆ ದಿವ್ಯ ಕವಚವು ದೈತ್ಯ, ದಾನವ, ಭೂತ, ಪಿಶಾಚ, ರಾಕ್ಷಸ, ಮತ್ತು ಇತರ ವಿರೋಧಿಗಳು ಇವರಾರಿಂದಲೂ ಬಾಧೆಯಾಗದಂತೆ ರಕ್ಷಿಸುವುದು. ಮೂರಾವರ್ತಿ ಜಪಿಸಿದ ದಿವ್ಯಕವಚವು ದೇವಾಸುರರಿಂದಲೂ ಅಭೇದ್ಯವು.

ಯೋಜನದ್ವಾದಶಾಂತೆಸ್ತು ದೇವೋ ರಕ್ಷತಿ ಸರ್ವದಾ ।
ನರಸಿಂಹೋ ಮಹಾಭಾಗೇ ಮಹಾಬಲಪರಾಕ್ರಮಃ ॥ ೯೫ ॥

ತತೋ ಗತ್ವಾ ಬಿಲದ್ವಾರಮುಪೋಷ್ಯ ರಜನೀತ್ರಯಂ ।
ಪಲಾಶಕಾಷ್ಠೈಃ ಪ್ರಜ್ವಾಲ್ಯ ಭಗವಜ್ಜಾತವೇದಸಂ ॥ ೯೬ ॥

ಪಾಲಾಶಸಮಿಧಂ ತತ್ರ ಜುಹುಯಾತ್ತ್ರಿಮಧುಪ್ಲುತಾಂ ।
ದ್ವೇ ಯುತೇ ಕಂಜನಯನೇ ಶಕಟಂ ಚೈವ ಸಾಧಕಃ ॥ ೯೭ ॥

ತತಃ ಕವಲ್ಲೀವಿವರಂ ಪ್ರಕಟಂ ಜಾಯತೇ ಕ್ಷಣಾತ್ ।
ತತೋ ವಿಶೇತ್ತು ನಿಶ್ಶಂಕಃ ಕವಲ್ಲೀವಿವರಂ ಬುಧಃ ॥ ೯೮ ॥

ಗಚ್ಛತಃ ಶಕಟಸ್ಯಾಥ ತಮೋ ಮೋಹಶ್ಚ ನಶ್ಯತಿ ।
ರಾಜಮಾರ್ಗಸ್ತು ವಿಸ್ತೀರ್ಣೋ ದೃಶ್ಯತೇ ತತ್ರ ಮೋಹಿನಿ ॥ ೯೯ ॥

---

೯೫. ಧನ್ಯಳಾದ ಮೋಹಿನೀ! ಬಲಿಷ್ಠನೂ ಪರಾಕ್ರಮಿಯೂ ಆದ ನರಸಿಂಹದೇವನು ಹನ್ನೆರಡುಗಾವುದಗಳವರೆಗೂ ಸರ್ವದಾ ರಕ್ಷಿಸುವನು.

೯೬-೯೮. ಪದ್ಮನೇತ್ರಳಾದ ಮೋಹಿನೀ! ತರುವಾಯ ಸಾಧಕನು ಬಿಲದ್ವಾರದ ಬಳಿಗೆ ಹೋಗಿ ಮೂರು ರಾತ್ರಿಗಳು ಉಪವಾಸನಾಗಿ ಮುತ್ತುಗದ ಕಟ್ಟಿಗೆಗಳಿಂದ ಪೂಜ್ಯವಾದ ಅಗ್ನಿಯನ್ನು ಪ್ರಜ್ವಲಿಸಿ ಅಲ್ಲಿ ಮುತ್ತುಗದ ಸಮಿತ್ತನ್ನು ಆಜ್ಯ, ಸಕ್ಕರೆ, ಮಧುಗಳಲ್ಲಿ ನೆನೆಸಿ ಎರಡೆಂಡಾಗಿ ಹೋಮಮಾಡಬೇಕು. ಅದರಿಂದ ಕ್ಷಣಮಾತ್ರದಲ್ಲಿ ಕವಲ್ಲೀಬಿಲವು ಪ್ರಕಟವಾಗುವುದು ಬಳಿಕ ಸಾಧಕನು ಗಾಡಿಯನ್ನು ಹತ್ತಿ ನಿಶ್ಶಂಕವಾಗಿ ಕವಲ್ಲೀಬಿಲವನ್ನು ಪ್ರವೇಶಿಸಬೇಕು.

೯೯. ಮೋಹಿನೀ! ಶಕಟಸಹಿತವಾಗಿ ಹೋಗುತ್ತಿರುವ ಸಾಧಕನಿಗೆ ಅಂಧಕಾರ ಮತ್ತು ಅಜ್ಞಾನಗಳು ನಾಶವಾಗುವುವು. ಅಲ್ಲಿ ವಿಸ್ತಾರವಾದ ರಾಜಮಾರ್ಗವು ಕಾಣುವುದು.

ನರಸಿಂಹಂ ಸ್ಮರಂಸ್ತತ್ರ ಪಾತಾಲಂ ವಿಶತೇ ತದಾ ।
ಗತ್ವಾ ತತ್ರ ಜಪೇಚ್ಛುದ್ಧೋ ನರಸಿಂಹಂ ತಮವ್ಯಯಂ ॥ ೧೦೦ ॥

ತತಃ ಸ್ತ್ರೀಣಾಂ ಸಹಸ್ರಾಣಿ ವೀಣಾಚಾಮರಕರ್ಮಣಾಂ ।
ನಿರ್ಗಚ್ಛಂತಿ ಪುರಾಚ್ಚೈವ ಸ್ವಾಗತಂ ತಾ ವದಂತಿ ಚ ॥ ೧೦೧ ॥

ಪ್ರವೇಶಯಂತಿ ತಂ ಹಸ್ತೇ ಗೃಹೀತ್ವಾ ಸಾಧಕೇಶ್ವರಂ ।
ತತೋ ರಸಾಯನಂ ದಿವ್ಯಂ ಪಾಯಯಂತಿ ಸುಲೋಚನೇ ॥ ೧೦೨ ॥

ಪೀತಮಾತ್ರೇ ದಿವ್ಯದೇಹೋ ಜಾಯತೇ ಸುಮಹಾಬಲಃ ।
ಕ್ರೀಡತೇ ದಿವ್ಯಕನ್ಯಾಭಿರ್ಯಾವದಾಭೂತಸಂಪ್ಲವಂ ॥ ೧೦೩ ॥

---

೧೦೦. ಆಗ ಅವನು ಅಲ್ಲಿ ನರಸಿಂಹದೇವನನ್ನು ಸ್ಮರಿಸುತ್ತಾ ಪಾತಾಲಕ್ಕೆ ಪ್ರವೇಶಿಸಿ ಅಲ್ಲಿ ಶೌಚಾದಿಗಳಿಂದ ಪರಿಶುದ್ಧನಾಗಿ ನಾಶರಹಿತನಾದ ನರಸಿಂಹನನ್ನು ಧ್ಯಾನಿಸಬೇಕು.

೧೦೧. ಅಲ್ಲಿ ವೀಣೆಯನ್ನು ನುಡಿಸುತ್ತಾ ಚಾಮರ ಹಾಕುತ್ತಿರುವ ಸಾವಿರ ಸ್ತ್ರೀಯರು ಪಟ್ಟಣದಿಂದ ಹೊರಗೆ ಬಂದು ಅವನಿಗೆ ಸ್ವಾಗತವನ್ನು ಹೇಳುವರು.

೧೦೨. ಸುಲೋಚನೇ ! ಆ ಸ್ತ್ರೀಯರು ಆ ಸಾಧಕೇಶ್ವರನ ಕೈಗಳನ್ನು ಹಿಡಿದುಕೊಂಡು ಒಳಕ್ಕೆ ಕರೆದುಕೊಂಡುಹೋಗುವರು. ಅನಂತರ ದಿವ್ಯ ರಸಾಯನವನ್ನು ಕುಡಿಸುವರು.

೧೦೩. ಅದನ್ನು ಪಾನಮಾಡಿದಕೂಡಲೇ ದಿವ್ಯಶರೀರವನ್ನು ಹೊಂದಿ ಅತ್ಯಂತ ಬಲಶಾಲಿಯಾಗುವನು. ಭೂತಪ್ರಳಯವಾಗುವವರೆಗೂ ದಿವ್ಯ ಕನ್ಯೆಗಳೊಡನೆ ಕ್ರೀಡಿಸುತ್ತಿರುವನು.

ಭಿನ್ನದೇಹೋ ವಾಸುದೇವಂ ನೀಯತೇ ನಾತ್ರ ಸಂಶಯಃ |
ವೃಣೋತಿ ತಾ ಯದಾ ಮರ್ತ್ಯೋ ನಿರ್ಗಚ್ಛಂತಿ ತದಾ ಪುನಃ || ೧೦೪ ||

ಪಟ್ಟಂ ಶೂಲಂ ಖಡ್ಗಂ ಚ ರೋಚನಾಂ ಚ ಮಣಿಂ ತಥಾ |
ರಸಂ ರಸಾಯನಂ ಚೈವ ಪಾದುಕಾಂಜನಮೇವ ಚ || ೧೦೫ ||

ಕೃಷ್ಣಾಂಜಲಿಂ ಚ ಸುಭಗೇ ಗುಟಿಕಾಂ ಚ ಮನಃಶಿಲಾಂ |
ಮುಂಡಲಾಂ ಚಾಕ್ಷಸೂತ್ರಂ ಚ ಷಷ್ಠೀಂ ಸಂಜೀವಿನೀಂ ತಥಾ || ೧೦೬ ||

ಸಿದ್ಧಾಂ ವಿದ್ಯಾಂ ಚ ಶಸ್ತ್ರಾಣಿ ಗೃಹೀತ್ವಾ ಸಾಧಕೋತ್ತಮಃ |
ಜ್ವಲದ್ವಹ್ನಿಸ್ಫುಲಿಂಗೋರ್ಮಿವೇಷ್ಟಿತಂ ತ್ರಿದಶಂ ಹೃದಿ || ೧೦೭ ||

ಸಕೃನ್ನ್ಯಸ್ತಂ ದಹೇತ್ಸರ್ವಂ ವೃಜಿನಂ ಜನ್ಮಕೋಟಿಜಂ |
ವಿಷೇ ನ್ಯಸ್ತಂ ವಿಷಂ ಹನ್ಯಾತ್ಕುಷ್ಟಂ ಹನ್ಯಾತ್ತನೌ ಸ್ಥಿತಂ || ೧೦೮ ||

---

೧೦೪. ಆ ದೇಹವು ಭಿನ್ನವಾದನಂತರ ವಾಸುದೇವನನ್ನು ಹೊಂದುವನು. ಆ ವಿಷಯದಲ್ಲಿ ಸಂದೇಹವಿಲ್ಲ. ಆ ಮನುಷ್ಯನು ಆ ಸ್ತ್ರೀಯರನ್ನು ಅಪೇಕ್ಷಿಸಿದಾಗ ಅವರು ಪುನಃ ಹೊರಗೆ ಬರುವರು.

೧೦೫-೧೦೭. ಸುಂದರೀ! ಪಟ್ಟ, ಶೂಲ, ಖಡ್ಗ, ಗೋರೋಜನ, ಮಣಿ, ರಸ, ರಸಾಯನ, ಪಾದುಕಾಂಜನ, ಕೃಷ್ಣಾಜಿನ, ಗುಟಿಕೆ, ಮನಃಶಿಲೆ, ಮುಂಡಲಾ, ಅಕ್ಷಸೂತ್ರ, ಆರನೆಯ ಸಂಜೀವಿನೀ, ಸಿದ್ಧವಿದ್ಯೆ, ಶಾಸ್ತ್ರ ಇವುಗಳನ್ನು ಸಂಗ್ರಹಿಸಿ ಸಾಧಕೋತ್ತಮನು ಉರಿಯುತ್ತಿರುವ ಬೆಂಕಿಕಿಡಿಗಳೆಂಬ ಊರ್ಮಿಗಳಿಂದ ವೇಷ್ಟಿತವಾದ ತ್ರಿದಶನನ್ನು ಹೃದಯದಲ್ಲಿ ನ್ಯಾಸಮಾಡಬೇಕು.

೧೦೮. ಒಂದಾವರ್ತಿ ನ್ಯಾಸಮಾಡಿದರೆ ಕೋಟಿಜನ್ಮಗಳಲ್ಲಿ ಸಂಪಾದಿತವಾದ ಪಾಪವನ್ನು ಸುಡುವುದು. ವಿಷದಲ್ಲಿ ನ್ಯಾಸಮಾಡಿದರೆ ಅದನ್ನು ನಾಶಮಾಡುವುದು. ಕುಷ್ಠರೋಗಿಯು ತನ್ನ ಶರೀರದಲ್ಲಿ ನ್ಯಾಸಮಾಡಿದರೆ ಆ ರೋಗವು ಪರಿಹಾರವಾಗುವುದು.

ಸುದೇಹಭ್ರೂಣಹತ್ಯಾದಿ ಧೃತ್ವಾ ದಿವ್ಯೇನ ಶುಧ್ಯತಿ ।
ಮಹಾಗ್ರಹಗೃಹೀತೇಷೂಜ್ವಲಮಾಸಂ ವಿಚಿಂತಯೇತ್ ॥ ೧೦೯ ॥

ರುದಂತಿ ವೈ ತತಃ ಶೀಘ್ರಂ ನಶ್ಯೇಯುರ್ದಾರುಣಾ ಗ್ರಹಾಃ ।
ಬಾಲಾನಾಂ ಕಂಠಕೇ ಬದ್ಧಾ ರಕ್ಷಾ ಭವತಿ ನಿತ್ಯಶಃ ॥ ೧೧೦ ॥

ಗಂಡಪಿಂಡಕನ್ಯತ್ರಾನಾಂ ನಾಶನಂ ಕುರುತೇ ಧ್ರುವಂ ।
ವ್ಯಾಧಿಘಾತೇ ಸಮಿದ್ಭಿಶ್ಚ ಘೃತಂ ಕ್ಷೀರೇಣ ಹೋಮಯೇತ್ ॥ ೧೧೧ ॥

ತ್ರಿಸಂಧ್ಯಂ ಮಾಸಮೇಕಂ ತು ಸರ್ವರೋಗಾನ್ವಿನಾಶಯೇತ್ ।
ಅಸಾಧ್ಯಂ ನಾಸ್ಯ ಪಶ್ಯಾಮಿ ತತ್ವಸ್ಯ ಸಚರಾಚರೇ ॥ ೧೧೨ ॥

---

೧೦೯-೧೧೧. ಭ್ರೂಣಹತ್ಯಾದಿಗಳನ್ನು ಮಾಡಿದವನೂ ಸಹ ಈ ದಿವ್ಯ ಕವಚಧಾರಣೆಯಿಂದ ಪರಿಶುದ್ಧನಾಗುವನು. ಮಹಾಗ್ರಹಗ್ರಸ್ತರ ವಿಷಯದಲ್ಲಿ ಜ್ವಲಿಸುತ್ತಿರುವ ದೇವನನ್ನು ಚಿಂತನೆಮಾಡಬೇಕು. ಅದರಿಂದ ಅವರು ಬೇಗ ರೋದನಮಾಡುವರು. ಕ್ರೂರಗ್ರಹಗಳು ನಾಶವಾಗುವುವು.

ಬಾಲಕರ ಕುತ್ತಿಗೆಯಲ್ಲಿ ಅದನ್ನು ಕಟ್ಟಿದರೆ ಯಾವಾಗಲೂ ರಕ್ಷೆಯಾಗುವುದು. ಗಾಯ, ಪಿಶಾಚ, ಮುಂತಾದುವುಗಳ ಬಾಧೆಯನ್ನು ಖಂಡಿತವಾಗಿಯೂ ನಾಶಮಾಡುವುದು. ರೋಗ ಮತ್ತು ಶಸ್ತ್ರಘಾತಗಳು ಸಂಭವಿಸಿದಾಗ ಸಮಿತ್ತು, ಕ್ಷೀರಗಳ ಸಹಿತವಾಗಿ ತುಪ್ಪವನ್ನು ಹೋಮಮಾಡಬೇಕು.

೧೧೨. ಒಂದುತಿಂಗಳು ಮೂರು ಸಂಧ್ಯಾಕಾಲಗಳಲ್ಲಿಯೂ ಹೀಗೆ ಹೋಮಮಾಡಿದರೆ ಸಕಲರೋಗಗಳೂ ಪರಿಹಾರವಾಗುವುದು. ಚರಾಚರ ಪ್ರಪಂಚದಲ್ಲಿ ಪರತತ್ವವಾದ ಈ ದೇವನಿಗೆ ಅಸಾಧ್ಯವಾದುದಾವುದನ್ನೂ ಕಾಣೆನು.

ಯಾಂ ಯಾಂ ಕಾಮಯತೇ ಸಿದ್ಧಿಂ ತಾಂ ತಾಂ ಪ್ರಾಪ್ನೋತ್ಯಪಿ ಧ್ರುವಂ ।
ಅಷ್ಟೋತ್ತರಶತಂ ತ್ವೇತಂ ಪೂಜಯಿತ್ವಾ ಮೃಗಾಧಿಪಂ ॥ ೧೧೩ ॥

ಮೃತ್ತಿಕಾಂ ಸಪ್ತ ವಲ್ಮೀಕೇ ಶ್ಮಶಾನೇ ಚ ಚತುಷ್ಪಥೇ ।
ರಕ್ತಚಂದನಸಂಮಿಶ್ರಾಂ ಗವಾಂ ಕ್ಷೀರೇಣ ಲೇಪಯೇತ್ ॥ ೧೧೪ ॥

ಸಿಂಹಸ್ಯ ಪ್ರತಿಮಾಂ ಕೃತ್ವಾ ಪ್ರಮಾಣೇನ ಷಡಂಗುಲಾಂ ।
ಭೂರ್ಜಪತ್ರೇ ವಿಶೇಷೇಣ ಲಿಖೇದ್ರೋಚನಯಾ ತಥಾ ॥ ೧೧೫ ॥

ನರಸಿಂಹಸ್ಯ ಕಂಠೇ ತು ಬದ್ಧ್ವಾ ಚೈವ ಸ ಮಂತ್ರವಿತ್ ।
ಜಪೇತ್ಸಂಖ್ಯಾವಿಹೀನಂ ತು ಪೂಜಯಿತ್ವಾ ಜಲಾಶಯೇ ॥ ೧೧೬ ॥

ಯಾವನ್ಮಂತ್ರಂ ತು ಜಪತಿ ಸಪ್ತಾಹಂ ಸಂಯತೇಂದ್ರಿಯಃ ।
ಜಲಾಕೀರ್ಣಾ ಮುಹೂರ್ತೇನ ಜಾಯತೇ ಸರ್ವಮೇದಿನೀ ॥ ೧೧೭ ॥

---

೧೧೩-೧೧೪. ಹೀಗೆ ಆರಾಧಿಸುವವನು ಬಯಸಿದ ಎಲ್ಲಾ ಸಿದ್ಧಿಗಳನ್ನೂ ಖಂಡಿತವಾಗಿ ಪಡೆಯುವನು. ಈ ನರಸಿಂಹನಿಗೆ ಅಷ್ಟೋತ್ತರ ಶತಪೂಜೆಯನ್ನು ಮಾಡಿ ಹುತ್ತ, ಸ್ಮಶಾನ, ನಾಲ್ಕುದಾರಿಗಳು ಸೇರುವ ಚೌಕ ಇವುಗಳಲ್ಲಿನ ಮೃತ್ತಿಕೆಯನ್ನು ರಕ್ತಚಂದನ ಮಿಶ್ರಮಾಡಿ ಗೋಕ್ಷೀರದಿಂದ ಲೇಪನೆ ಮಾಡಬೇಕು.

೧೧೫-೧೧೭. ಆರು ಅಂಗುಲ ಪರಿಮಿತವಾದ ಸಿಂಹ ಪ್ರತಿಮೆಯನ್ನು ಮಾಡಿ ಭೂತಾಳೆಯ ಪತ್ರದಲ್ಲಿ ಗೋರೋಜನದಿಂದ ಉಲ್ಲೇಖಿಸಬೇಕು. ಮಂತ್ರಜ್ಞನು ಅದನ್ನು ಮಂತ್ರಪೂರ್ವಕವಾಗಿ ನರಸಿಂಹನ ಕಂಠದಲ್ಲಿ ಕಟ್ಟಿ ಮಂತ್ರವನ್ನು ಅಸಂಖ್ಯಾಕವಾಗಿ ಜಪಿಸಬೇಕು.

ಹೀಗೆ ಜಲಾಶಯದಲ್ಲಿ ಪೂಜಿಸಿ ಜಿತೇಂದ್ರಿಯನಾಗಿ ಏಳುದಿನಗಳು ಮಂತ್ರವನ್ನು ಜಪಿಸಿದರೆ ಮುಹೂರ್ತಮಾತ್ರದಲ್ಲಿ ಸಕಲ ಭೂಮಂಡಲವೂ ನೀರಿನಿಂದ ವ್ಯಾಪಿಸುವುದು.

ಅಥವಾ ಶುದ್ಧಾವೃಕ್ಷಾಗ್ರೇ ನರಸಿಂಹಂ ತು ಪೂಜಯೇತ್ |
ಜಪ್ತ್ವಾ ಚಾಷ್ಟಶತಂ ತತ್ರ್ಹಂ ವರ್ಷಂ ತದ್ವಿನಿವಾರಯೇತ್ || ೧೧೮ ||

ತಮೇವ ಪಿಂಜಕೇ ಬದ್ಧ್ವಾ ಭ್ರಾಮಯೇತ್ಸಾಧಕೋತ್ತಮಃ |
ಮಹಾವಾತೋ ಮುಹೂರ್ತೇನ ಆಗಚ್ಛೇನ್ನಾತ್ರ ಸಂಶಯಃ || ೧೧೯ ||

ಪುನಶ್ಚ ವಾರಯೇದ್ವರ್ಷ ಸಿಕ್ತ್ವಾಂ ಸಪ್ತ ಜಪ್ತೇನ ವಾರಿಣಾ |
ಅಥ ತಾಂ ಪ್ರತಿಮಾಂ ದ್ವಾರೇ ನಿಖನೇದ್ಯಸ್ಯ ಸಾಧಕಃ || ೧೨೦ ||

ಗೋತ್ರೋತ್ಸಾದೋ ಭವೇತ್ತಸ್ಯ ಉದ್ಧೃತೇ ಚೈವ ಶಾಂತಿದಃ |
ತಸ್ಮಾದ್ವೈ ಬ್ರಹ್ಮತನಯೇ ಪೂಜಯೇದ್ಭಕ್ತಿತಃ ಸದಾ || ೧೨೧ ||

ಮೃಗರಾಜಂ ಮಹಾವೀರ್ಯಂ ಸರ್ವಕಾಮಫಲಪ್ರದಂ |
ದೃಷ್ಟ್ವಾ ಸ್ತುತ್ವಾ ನಮಸ್ಕೃತ್ಯ ಸಂಪೂಜ್ಯ ನೃಹರಿಂ ಶುಭೇ || ೧೨೨ ||

---

೧೧೮. ಅಥವಾ ಶುದ್ಧ ವೃಕ್ಷಾಗ್ರದಲ್ಲಿ ನರಸಿಂಹನನ್ನು ಪೂಜಿಸಿ ಎಂಟು ನೂರುಬಾರಿ ಮಂತ್ರಜಪ ಮಾಡಿದರೆ ಮಳೆಯು ನಿವಾರಣೆಯಾಗುವುದು.

೧೧೯. ಸಾಧಕೋತ್ತಮನು ಅದನ್ನೇ ಬಿಲ್ಲಿನಲ್ಲಿ ಕಟ್ಟಿ ತಿರುಗಿಸಿದರೆ ಮುಹೂರ್ತಮಾತ್ರದಲ್ಲಿ ಬಿರುಗಾಳಿಯು ಬರುವುದು. ಸಂದೇಹವಿಲ್ಲ.

೧೨೦-೧೨೧. ಪುನಃ ಏಳಾವರ್ತಿ ಮಂತ್ರಜಪಮಾಡಿ ಅಭಿಮಂತ್ರಿಸಿದ ಉದಕದಿಂದ ಅಭಿಷೇಕಮಾಡಿ ಆ ಪ್ರತಿಮೆಯನ್ನು ಸಾಧಕನು ಯಾರ ಮನೆಯ ಬಾಗಿಲಿನಲ್ಲಿ ಅಗೆದು ಹೂಳುವನೋ ಅವನ ವಂಶ ನಾಶವಾಗುವುದು. ಅದನ್ನು ತೆಗೆದರೆ ಸುಖಪ್ರದವಾಗುವುದು. ಆದಕಾರಣ ! ಬ್ರಹ್ಮಕುಮಾರೀ ! ನರಸಿಂಹ ನನ್ನು ಭಕ್ತಿಯಿಂದ ಯಾವಾಗಲೂ ಪೂಜಿಸಬೇಕು.

೧೨೨-೧೨೩. ಶೋಭನೇ ! ಮಹಾಪರಾಕ್ರಮಿಯು, ಸಕಲೇಷ್ಟಪ್ರದಾ ಯಕನೂ ಆದ ನರಸಿಂಹನ ದರ್ಶನ, ಸ್ತುತಿ, ನಮಸ್ಕಾರ, ಪೂಜೆಗಳನ್ನು ಮಾಡಿದರೆ ಮನುಷ್ಯರು ರಾಜ್ಯ, ಸ್ವರ್ಗ ಮತ್ತು ದುರ್ಲಭವಾದ ಮೋಕ್ಷ ಇವು

ಪ್ರಾಪ್ನುವಂತಿ ನರಾ ರಾಜ್ಯಂ ಸ್ವರ್ಗಂ ಮೋಕ್ಷಂ ಚ ದುರ್ಲಭಂ ।
ನರಸಿಂಹಂ ನರೋ ದೃಷ್ಟ್ವಾ ಲಭೇದಭಿಮತಂ ಫಲಂ ॥ ೧೨೩ ॥

ವಿಮುಕ್ತಃ ಸರ್ವಪಾಪೇಭ್ಯೋ ವಿಷ್ಣುಲೋಕಂ ಚ ಗಚ್ಛತಿ ।
ಸಕೃದ್ದೃಷ್ಟ್ವಾ ತು ತಂ ದೇವಂ ಭಕ್ತ್ಯಾ ಸಿಂಹವಪುರ್ಧರಂ ॥ ೧೨೪ ॥

ಮುಚ್ಯತೇ ಪಾತಕೈಸ್ಸರ್ವೈಃ ಕಾಯವಾಕ್ಚಿತ್ತಸಂಭವೈಃ ।
ಸಂಗ್ರಾಮೇ ಸಂಕಟೇ ದುರ್ಗೇ ಚೋರವ್ಯಾಘ್ರಾದಿಪೀಡಿತೇ ॥ ೧೨೫ ॥

ಕಾಂತಾರೇ ಪ್ರಾಣಸಂದೇಹೇ ವಿಷವಹ್ನಿಜಲೇಷು ಚ ।
ರಾಜಾದಿಭೀಷು ಸಂಗ್ರಾಮೇ ಗ್ರಹರೋಗಾದಿಪೀಡಿತೇ ॥ ೧೨೬ ॥

ಸ್ಮೃತ್ವಾ ತಂ ಯೋ ಹಿ ಪುರುಷಃ ಸಂಕಟೈರ್ವಿಪ್ರಮುಚ್ಯತೇ ।
ಸೂರ್ಯೋದಯೇ ಯಥಾ ನಾಶಂ ತಮೋಭ್ಯೇತಿ ಮಹತ್ತರಂ ॥ ೧೨೭ ॥

---

ಗಳನ್ನೆಲ್ಲಾ ಪಡೆಯುವರು. ನರಸಿಂಹ ದರ್ಶನ ಮಾಡುವ ಮನುಷ್ಯನು ಇಷ್ಟ ಫಲವನ್ನು ಹೊಂದುವನು.

೧೨೪. ನರಸಿಂಹರೂಪಿಯಾದ ಆ ದೇವನನ್ನು ಒಂದಾವರ್ತಿ ದರ್ಶನ ಮಾಡಿದರೆ ಸಕಲಪಾಪವಿಮೋಚನೆಯಾಗಿ ವಿಷ್ಣುಲೋಕಕ್ಕೆ ಹೋಗುವನು.

೧೨೫-೧೨೭. ಆ ದೇವನ ಭಕ್ತನು ದರ್ಶನಾದಿಗಳಿಂದ ಕಾಯಿಕ, ವಾಚಿಕ, ಮಾನಸಿಕಗಳಾದ ಸಕಲಪಾಪಗಳನ್ನೂ ಪರಿಹರಿಸಿಕೊಳ್ಳುವನು. ಯುದ್ಧ, ಸಂಕಟ, ದುರ್ಗ, ಕಳ್ಳಕಾಕರು ಮತ್ತು ವ್ಯಾಘ್ರಾದಿ ದುಷ್ಟಮೃಗಗಳಿಂದ ಬಾಧಿಸಲ್ಪಡುತ್ತಿರುವ ಸಮಯ, ಅಡವಿಯಲ್ಲಿ ಪ್ರಾಣಾಪಾಯವು ಒದಗಿ ಬದುಕುವುದೇ ಸಂದಿಗ್ಧವಾಗಿರುವ ಸಮಯ, ವಿಷ, ಬೆಂಕಿ, ನೀರು, ರಾಜಕೀಯ ಭಯ ಮತ್ತು ಗ್ರಹರೋಗಾದಿಗಳ ಬಾಧೆಯುಂಟಾದಕಾಲ ಈ ಸಂದರ್ಭಗಳಲ್ಲಿ ಸಿಕ್ಕಿ ಬಿದ್ದಾಗ ಆ ನರಸಿಂಹನನ್ನು ಸ್ಮರಿಸುವ ಪುರುಷನು ಸಂಕಟಗಳಿಗೀಡಾಗುವುದಿಲ್ಲ.

೧೨೭-೧೨೯. ಸೂರ್ಯೋದಯವಾದರೆ ಕತ್ತಲುಹೋಗುವಂತೆ ನರಸಿಂಹನ

ತಥಾ ಸಂದರ್ಶನೇ ತಸ್ಯ ವಿನಾಶಂ ಯಾಂತ್ಯುಪದ್ರವಾಃ ।
ಗುಟಿಕಾಂ ಜನಪಾತಾಲೇ ಪಾದಲೇಪರಸಾಯನಂ ॥ ೧೨೮ ॥

ನರಸಿಂಹೇ ಪ್ರಸನ್ನೇ ತು ಪ್ರಾಪ್ನೋತ್ಯನ್ಯಾಂಶ್ಚ ವಾಂಛಿತಾನ್ ।
ಯಾನ್ಯಾನ್ಕಾಮಾನಭಿಧ್ಯಾಯನ್ ಭಜೇತ ನೃಹರಿಂ ನರಃ ॥ ೧೨೯ ॥
ತಾಂಸ್ತಾನ್ ಕಾಮಾನವಾಪ್ನೋತಿ ನರೋ ನಾಸ್ತ್ಯತ್ರ ಸಂಶಯಃ ॥ ೧೩೦ ॥

ಇತಿ ಶ್ರೀನಾರದೀಯಮಹಾಪುರಾಣೋತ್ತರಭಾಗೇ ಮೋಹಿನೀ
ವಸುಸಂವಾದೇ ಪುರುಷೋತ್ತಮಮಾಹಾತ್ಮ್ಯೇ
ಸಂಚಪಂಚಾಶತ್ತಮೋಽಧ್ಯಾಯಃ

ದರ್ಶನವಮಾಡಿದರೆ ಕಷ್ಟಗಳೆಲ್ಲವೂ ಹೋಗುವುವು ನರಸಿಂಹನು ಪ್ರಸನ್ನನಾದರೆ ಗುಟಿಕಾ, ರಸಾಯನ ಇನ್ನೂ ಇತರ ಇಷ್ಟಾರ್ಥಗಳೆಲ್ಲವೂ ದೊರೆಯುತ್ತದೆ.

೧೨೯-೧೩೦. ಮನುಷ್ಯನು ಯಾವಯಾವ ಇಷ್ಟಗಳನ್ನು ಕೋರಿ ನರಹರಿಯನ್ನು ಭಜಿಸುವನೋ ಅವನು ಆಯಾಯಾ ಇಷ್ಟಾರ್ಥಗಳನ್ನೆಲ್ಲಾ ಪಡೆಯುವನು. ಈ ವಿಷಯದಲ್ಲಿ ಸಂದೇಹಪಡಬಾರದು.

ಇಂತು ಶ್ರೀನಾರದೀಯಪುರಾಣೋತ್ತರಭಾಗದೊಳು ಮೋಹಿನೀವಸು
ಸಂವಾದದಲ್ಲಿ ಪುರುಷೋತ್ತಮ ಮಾಹಾತ್ಮ್ಯವೆಂಬ ಐವತ್ತೈದ
ನೆಯ ಅಧ್ಯಾಯವು ಮುಗಿದುದು.



## ಷಟ್ಪಂಚಾಶತ್ತಮೋಽಧ್ಯಾಯಃ

---

### ವಸುರುವಾಚ

ಅನ್ಯಚ್ಛೃಣು ಮಹಾಭಾಗೇ ತಸ್ಮಿನ್ ಶ್ರೀಪುರುಷೋತ್ತಮೇ ।
ತೀರ್ಥವ್ರಜಂ ಮಹತ್ಪುಣ್ಯಂ ದರ್ಶನಾತ್ಪಾಪನಾಶನಂ ॥ ೧ ॥

ಅನಂತಾಖ್ಯಂ ವಾಸುದೇವಂ ದೃಷ್ಟ್ವಾ ಭಕ್ತ್ಯಾ ಪ್ರಣಮ್ಯ ಚ ।
ಸರ್ವಪಾಪವಿನಿರ್ಮುಕ್ತೋ ನರೋ ಯಾತಿ ಪರಂ ಪದಂ ॥ ೨ ॥

ಶ್ವೇತಗಂಗಾಂ ನರಃ ಸ್ನಾತ್ವಾ ಯಃ ಪಶ್ಯೇಚ್ಛ್ವೇತಮಾಧವಂ ।
ಮತ್ಸ್ಯಾಖ್ಯಂ ಮಾಧವಂ ಚೈವ ಶ್ವೇತದ್ವೀಪಂ ಸ ಗಚ್ಛತಿ ॥ ೩ ॥

---

### ಐವತ್ತಾರನೆಯ ಅಧ್ಯಾಯ

೧ ವಸುವು ಹೇಳಿದನು :—ಧನ್ಯಳಾದ ಮೋಹಿನೀ! ಆ ಪುರುಷೋತ್ತಮ ಕ್ಷೇತ್ರದಲ್ಲಿ ದರ್ಶನಮಾಡುವ ಮಾತ್ರದಿಂದ ಪಾಪಗಳನ್ನು ಪರಿಹರಿಸುವಂತಹ ಮಹಾಪುಣ್ಯಕರವಾದ ತೀರ್ಥಗಳು ಅನಂತವಾಗಿವೆ ಎಂಬುದನ್ನು ವಿವರಿಸಿ ಹೇಳುತ್ತೇನೆ ಕೇಳು.

೨. ಅನಂತನಾಮಕನಾದ ವಾಸುದೇವನನ್ನು ದರ್ಶನಮಾಡಿ ಭಕ್ತಿಯಿಂದ ನಮಸ್ಕರಿಸುವ ಮನುಷ್ಯನು ಸಕಲ ಪಾಪವಿಮೋಚನನಾಗಿ ಉತ್ತಮ ಪದವಿಗೆ ಹೋಗುವನು.

೩ ಶ್ವೇತಗಂಗೆಯಲ್ಲಿ ಸ್ನಾನಮಾಡಿ ಶ್ವೇತಮಾಧವಸ್ವಾಮಿಯನ್ನು ಮತ್ತು ಮತ್ಸ್ಯನಾಮಕನಾದ ಮಾಧವನನ್ನೂ ದರ್ಶನಮಾಡುವ ಮನುಷ್ಯನು ಶ್ವೇತದ್ವೀಪಕ್ಕೆ ಹೋಗುವನು.

ತುಷಾರಪ್ರತಿಮಂ ಶುದ್ಧಂ ಶಂಖಚಕ್ರಗದಾಧರಂ ।
ಸರ್ವಲಕ್ಷಣಸಂಯುಕ್ತಂ ಪುಂಡರೀಕಾಯತೇಕ್ಷಣಂ ॥ ೪ ॥

ಶ್ರೀವತ್ಸವಕ್ಷಃಸಂಯುಕ್ತಂ ಸುಪ್ರಸನ್ನಂ ಚತುರ್ಭುಜಂ ।
ವನಮಾಲಾವೃತೋರಸ್ಕಂ ಮುಕುಟಾಂಗದಧಾರಿಣಂ ॥ ೫ ॥

ಪೀತವಸ್ತ್ರಂ ಸುಪೀನಾಂಸಂ ಕುಂಡಲಾಭ್ಯಾಮಲಂಕೃತಂ ।
ಕುಶಾಗ್ರೇಣಾಪಿ ರಾಜೇಂದ್ರ ಶ್ವೇತಗಾಂಗೇಯಮೇವ ಚ ॥ ೬ ॥

ಸ್ಪೃಷ್ಟ್ವಾ ಸ್ವರ್ಗಂ ಗಮಿಷ್ಯಂತಿ ವಿಷ್ಣುಭಕ್ತಾಃ ಸಮಾಹಿತಾಃ ।
ಯಸ್ತ್ವಿಮಾಂ ಪ್ರತಿಮಾಂ ಪಶ್ಯೇನ್ಮಾಧವಾಖ್ಯಾಂ ಶಶಿಪ್ರಭಾಂ ॥ ೭ ॥

ಶಂಖಗೋಕ್ಷೀರಸಂಕಾಶಾಮಶೇಷಾಘವಿನಾಶಿನೀಂ ।
ತಾಂ ಪ್ರಣಮ್ಯ ಸಕೃದ್ಭಕ್ತ್ಯಾ ಪುಂಡರೀಕನಿಭೇಕ್ಷಣಂ ॥ ೮ ॥

ವಿಹಾಯ ಸರ್ವಕಾಮಾನ್ವೈ ವಿಷ್ಣುಲೋಕೇ ಮಹೀಯತೇ ।
ಮನ್ವಂತರಾಣಿ ತತ್ರೈವ ದೇವಕನ್ಯಾಭಿರಾವೃತಃ ॥ ೯ ॥

---

೪-೭. ಹಿಮದಂತೆ ಪರಿಶುದ್ಧನು, ಶಂಖಚಕ್ರಗದಾಪಾಣಿಯು, ಸಕಲ ಲಕ್ಷಣಸಂಪನ್ನನು, ಪದ್ಮದಂತಿರುವ ನೇತ್ರಗಳುಳ್ಳವನು, ವಕ್ಷಃಸ್ಥಳದಲ್ಲಿ ಶ್ರೀವತ್ಸವನ್ನು ಧರಿಸಿರುವವನು, ಅತ್ಯಂತ ಪ್ರಸನ್ನಮೂರ್ತಿಯು, ಚತುರ್ಭುಜನು, ವನಮಾಲೆಯನ್ನು ಕುತ್ತಿಗೆಯಲ್ಲಿ ಹಾಕಿಕೊಂಡಿರುವವನು, ಕಿರೀಟಾದಿ ಆಭರಣಗಳನ್ನಿಟ್ಟುಕೊಂಡಿರುವವನು, ಪೀತಾಂಬರಧಾರಿಯು, ಪರಿಪುಷ್ಟವಾದ ಭುಜಗಳುಳ್ಳವನು, ಕುಂಡಲಗಳಿಂದಲಂಕೃತನೂ ಆದ ಸ್ವಾಮಿಯನ್ನು ಸೇವಿಸಿ ಶ್ವೇತಗಂಗೋದಕವನ್ನು ಸ್ಪರ್ಶಮಾಡಿದರೆ ಸಮಾಹಿತರಾದ ವಿಷ್ಣುಭಕ್ತರು ಸ್ವರ್ಗಕ್ಕೆ ಹೋಗುವರು.

೭-೯. ಚಂದ್ರನಂತೆ ಹೊಳೆಯುತ್ತಿರುವ, ಶಂಖ ಮತ್ತು ಗೋಕ್ಷೀರಗಳಿಗೆ ಸಮಾನವಾಗಿರುವ, ಸಮಸ್ತ ಪಾಪನಾಶಕವಾದ ಈ ಪ್ರತಿಮೆಯನ್ನು ನೋಡಿ ಭಕ್ತಿಯಿಂದ ಒಂದಾವರ್ತಿ ಕಮಲದಂತೆ ನೇತ್ರವುಳ್ಳ ಆ ಸ್ವಾಮಿಯನ್ನು ನಮಸ್ಕರಿಸುವ ಮನುಷ್ಯನು, ಐಹಿಕ ಸಕಲ ಕಾಮಗಳನ್ನೂ ತ್ಯಜಿಸಿ ವಿಷ್ಣುಲೋಕಕ್ಕೆ ಹೋಗಿ ಅಲ್ಲಿ ಉತ್ತಮಭೋಗಗಳನ್ನು ಅನುಭವಿಸುವನು.

ಗೀಯಮಾನಶ್ಚ ಗಂಧರ್ವೈಃ ಸಿದ್ಧವಿದ್ಯಾಧರಾರ್ಚಿತಃ ।
ಭುನಕ್ತಿ ವಿಪುಲಾನ್ ಭೋಗಾನ್ಯಥೇಷ್ಟಂ ದೇವತೈಃ ಸಹ ॥ ೧೦ ॥

ಚ್ಯುತಸ್ತಸ್ಮಾದಿಹಾಗತ್ಯ ಮಾನುಷ್ಯೇ ಬ್ರಾಹ್ಮಣೋ ಭವೇತ್ ।
ವೇದವೇದಾಂಗವಿದ್ಭೋಗೀ ಭೋಗವಾಂಶ್ಚಿರಜೀವಿತಃ ॥ ೧೧ ॥

ಗಜಾಶ್ವರಥಯಾನಾಢ್ಯೋ ಧನಧಾನ್ಯವೃತಃ ಶುಚಿಃ ।
ರೂಪವಾನ್ಬಹುಭಾಗ್ಯಶ್ಚ ಪುತ್ರಪೌತ್ರಸಮನ್ವಿತಃ ॥ ೧೨ ॥

ಪುರುಷೋತ್ತಮಂ ಪುನಃ ಪ್ರಾಪ್ಯ ವಟಮೂಲೇಥ ಸಾಗರೇ ।
ತ್ಯಕ್ತ್ವಾ ದೇಹಂ ಹರಿಂ ಸ್ಮೃತ್ವಾ ತತಃ ಶಾಂತಂ ಪದಂ ವ್ರಜೇತ್ ॥ ೧೩ ॥

ಶ್ವೇತಮಾಧವಮಾಲೋಕ್ಯ ಸಮೀಪೇ ಮತ್ಸ್ಯಮಾಧವಂ ।
ಏಕಾರ್ಣವೇ ಜಲೇ ಪೂರ್ವಂ ರೂಪಂ ರೋಹಿತಮಾಸ್ಥಿತಃ ॥ ೧೪ ॥

---

೯-೧೦. ಅಲ್ಲಿಯೇ ದೇವಕನ್ಯೆಯರಿಂದ ಪರಿವೃತನಾಗಿ, ಗಂಧರ್ವರ ಗಾನವನ್ನು ಕೇಳುತ್ತಾ, ಸಿದ್ಧವಿದ್ಯಾಧರರಿಂದ ಪೂಜಿತನಾಗಿ, ದೇವತೆಗಳ ಸಂಗಡ ಉದಾರವಾದ ಭೋಗಗಳನ್ನು ಯಥೇಷ್ಟವಾಗಿ ಅನುಭವಿಸುವನು.

೧೧-೧೨. ಅಲ್ಲಿ ನಿಯಮಿತಕಾಲವು ಮುಗಿದಮೇಲೆ ಈ ಭೂಲೋಕಕ್ಕೆ ಬಂದು ಮನುಷ್ಯಜನ್ಮದಲ್ಲಿ ಬ್ರಾಹ್ಮಣನಾಗಿ ಹುಟ್ಟುವನು. ಆಗ ಅವನು ವೇದ ವೇದಾಂಗಪಂಡಿತನು, ಭೋಗಿಯು, ಚಿರಜೀವಿಯು, ಆನೆ, ಕುದುರೆ, ರಥ ಮತ್ತು ವಾಹನಗಳಿಂದ ಯುಕ್ತನು, ಧನಧಾನ್ಯವಂತನು, ಪರಿಶುದ್ಧನು, ಸುಂದರನು, ಬಹುಭಾಗ್ಯಶಾಲಿಯು, ಮಕ್ಕಳು, ಮೊಮ್ಮಕ್ಕಳುಗಳುಳ್ಳವನೂ ಆಗಿ ಸುಖವಾಗಿರುವನು.

೧೩. ಅವನು ಪುನಃ ಪುರುಷೋತ್ತಮಕ್ಷೇತ್ರಕ್ಕೆ ಬಂದು ಸಮುದ್ರತೀರದಲ್ಲಿರುವ ವಟಮೂಲದಲ್ಲಿ ಹರಿಯನ್ನು ಸ್ಮರಿಸುತ್ತಾ ದೇಹತ್ಯಾಗಮಾಡಿ ಮುಕ್ತಿಸ್ಥಾನವನ್ನು ಪಡೆಯುವನು.

೧೪-೧೬. ಶ್ವೇತಮಾಧವನ ದರ್ಶನಮಾಡಿದ ನಂತರ ಅವರ ಸಮೀಪದಲ್ಲಿರುವ ಮತ್ಸ್ಯಮಾಧವನನ್ನು ಸೇವಿಸಬೇಕು. ಪೂರ್ವದಲ್ಲಿ ಮಾಧವನು

ವೇದಾನಾಂ ಹರಣಾರ್ಥಾಯ ರಸಾತಲತಲೇ ಸ್ಥಿತಃ ।
ಚಿಂತಯಿತ್ವಾ ಕ್ಷಿತಿಂ ಮತ್ಸ್ಯಂ ತಸ್ಮಿನ್ ಸ್ಥಾನೇ ವ್ಯವಸ್ಥಿತಂ ॥ ೧೫ ॥

ಅಥಾಯ ತರುಣಂ ರೂಪಂ ಮಾಧವಂ ಮತ್ಸ್ಯಮಾಧವಂ ।
ಪ್ರಣಮ್ಯ ಪ್ರಯತೋ ಭೂತ್ವಾ ಸರ್ವಕಷ್ಟಂ ವಿಮುಂಚತಿ ॥ ೧೬ ॥

ಪ್ರಯಾತಿ ಪರಮಂ ಸ್ಥಾನಂ ಯತ್ರ ದೇವೋ ಹರಿಃ ಸ್ವಯಂ ।
ಕಾಲೇ ಪುನರಿಹಾಯಾತೋ ರಾಜಾ ಸ್ಯಾತ್ಪೃಥಿವೀತಲೇ ॥ ೧೭ ॥

ಮತ್ಸ್ಯಮಾಧವಮಾಸಾದ್ಯ ದುರಾಧರ್ಷೋ ಭವೇನ್ನರಃ ।
ದಾತಾ ಭೋಕ್ತಾ ಭವೇದ್ಯೋದ್ಧಾ ವೈಷ್ಣವಃ ಸತ್ಯಸಂಗರಃ ॥ ೧೮ ॥

ಯೋಗಂ ಪ್ರಾಪ್ಯ ಹರೇಃ ಪಶ್ಚಾತ್ತತೋ ಮೋಕ್ಷಮವಾಪ್ನುಯಾತ್ ।
ಮತ್ಸ್ಯಮಾಧವಮಾಹಾತ್ಮ್ಯಂ ಮಯಾ ತೇ ಪರಿಕೀರ್ತಿತಂ ॥ ೧೯ ॥

---

ವೇದಗಳನ್ನುದ್ಧರಿಸುವುದಕ್ಕಾಗಿ ರಸಾತಲದ ಕೆಳಭಾಗದಲ್ಲಿ ಮತ್ಸ್ಯರಾಜನ ರೂಪವನ್ನು ತಾಳಿ ಜಲದಲ್ಲಿ ಅವತರಿಸಿರುವನು. ತರುಣರೂಪವನ್ನು ಧರಿಸಿ ಆ ಸ್ಥಳದಲ್ಲಿ ಸನ್ನಿಹಿತನಾಗಿರುವ ಆ ಮತ್ಸ್ಯರೂಪಿಯಾದ ಮಾಧವನನ್ನು ಧ್ಯಾನಿಸಿ, ಜಿತೇಂದ್ರಿಯನಾಗಿ ನಮಸ್ಕರಿಸಿದರೆ ಸಕಲ ಕಷ್ಟಗಳೂ ಹೋಗುವುವು.

೧೭. ಅಲ್ಲದೆ ಅವನು, ಹರಿಯು ಸಾಕ್ಷಾತ್ತಾಗಿ ನೆಲೆಸಿರುವ ಉತ್ತಮ ಸ್ಥಾನವನ್ನೂ ಪಡೆಯುವನು. ಅಲ್ಲಿ ನಿಯಮಿತವಾದ ಅವಧಿಯು ಮುಗಿದ ಮೇಲೆ ಈ ಭೂಲೋಕದಲ್ಲಿ ರಾಜನಾಗಿ ಹುಟ್ಟುವನು.

೧೮. ಮತ್ಸ್ಯಮಾಧವಯಾತ್ರೆ ಮಾಡಿದ ಮನುಷ್ಯನು ಕಷ್ಟಕ್ಕೆ ಸಿಲುಕಲಾರನು. ಅವನು ದಾತನು, ಭೋಕ್ತನು, ಒಳ್ಳೆಯ ಯುದ್ಧಭಟನು, ವಿಷ್ಣುಭಕ್ತನು ಮತ್ತು ಸತ್ಯಭಾಷಿಯೂ ಆಗುವನು.

೧೯–೨೦. ತರುವಾಯ ಹರಿಯ ಯೋಗಸಿದ್ಧಿಯನ್ನು ಹೊಂದಿ ಮೋಕ್ಷವನ್ನು ಪಡೆಯುವನು. ಬ್ರಹ್ಮನಂದನನೇ! ಯಾವ ದೇವನನ್ನು ಸಂದರ್ಶಿಸಿದರೆ ಸಕಲೇಷ್ಟಾರ್ಥಗಳೂ ಲಭಿಸುವುವೋ ಅಂತಹ ಮತ್ಸ್ಯಮಾಧವದೇವನ ಮಾಹಾ

ಯಂ ದೃಷ್ಟ್ವಾ ಬ್ರಹ್ಮತೇಜಸಂ ಸಂಪಾದ್ಯ ಸಾನ್ನಿಧ್ಯಮಾಪ್ನುಯಾತ್ ।
ಮಾರ್ಜನಂ ತತ್ರ ವಕ್ಷ್ಯಾಮಿ ಮಾರ್ಕಂಡೇಯಹ್ರದೇ ಶುಭೇ ॥ ೨೦ ॥

ಭಕ್ತ್ಯಾ ತು ತನ್ಮನಾ ಭೂತ್ವಾ ಪುರಾಣಂ ಪುಣ್ಯಮುಕ್ತಿದಂ ।
ಮಾರ್ಕಂಡೆಯಹ್ರದೇ ಸ್ನಾನಂ ಸರ್ವಕಾಲಂ ಪ್ರಶಸ್ಯತೇ ॥ ೨೧ ॥

ಚತುರ್ದಶ್ಯಾಂ ವಿಶೇಷೇಣ ಸರ್ವಪಾಪಪ್ರಣಾಶನಂ ।
ತದ್ವತ್ಸ್ನಾನಂ ಸಮುದ್ರಸ್ಯ ಸರ್ವಕಾಲಂ ಪ್ರಶಸ್ಯತೇ ॥ ೨೨ ॥

ಪೌರ್ಣಮಾಸ್ಯಾಂ ವಿಶೇಷೇಣ ಹಯಮೇಧಫಲಂ ಲಭೇತ್ ।
ಪೂರ್ಣಿಮಾ ಜ್ಯೇಷ್ಠಮಾಸಸ್ಯ ಜ್ಯೇಷ್ಠಾಋಕ್ಷಂ ಯದಾ ಭವೇತ್ ॥ ೨೩ ॥

ತದಾಗಚ್ಛೇದ್ವಿಶೇಷೇಣ ತೀರ್ಥರಾಜಂ ಪರಂ ಶುಭಂ ।
ಕಾಯವಾಙ್ಮನಸ್ಯೈಃ ಶುದ್ಧಸದ್ಭಾವೋಽನನ್ಯಮಾನಸಃ ॥ ೨೪ ॥

---

ತ್ಮ್ಯೆಯನ್ನು ನಿನಗೆ ನಾನು ಹೇಳಿರುವೆನು. ಮಂಗಳಕರವಾದ ಮಾರ್ಕಂಡೇಯ ಹ್ರದದಲ್ಲಿ ಮಾರ್ಜನವಿಧಾನವನ್ನು ಹೇಳುವೆನು ಕೇಳು.

೨೧. ಭಕ್ತಿಯಿಂದ ಇದನ್ನೆಲ್ಲ ಮನದಲ್ಲಿ ನೆನೆಯುತ್ತಾ ಮಾಡುವ, ಪುರಾತನವಾದ, ಪುಣ್ಯಮೋಕ್ಷದಾಯಕವಾದ ಮಾರ್ಕಂಡೇಯಹ್ರದಸ್ನಾನವು ಸರ್ವಕಾಲದಲ್ಲಿಯೂ ಪ್ರಶಸ್ತವು.

೨೨. ಚತುರ್ದಶಿಯ ದಿನದಲ್ಲಿ ವಿಶೇಷವಾಗಿ ಆ ಹ್ರದಸ್ನಾನವು ಸಕಲ ಪಾಪ ಪರಿಹಾರಕವು. ಅದರಂತೆಯೇ ಸಮುದ್ರಸ್ನಾನವೂ ಸಹ ಯಾವಾಗಲೂ ಪ್ರಶಸ್ತವು.

೨೩-೨೪. ಪೂರ್ಣಿಮೆಯ ದಿನ ಸಮುದ್ರಸ್ನಾನಮಾಡುವುದು ಪ್ರಶಸ್ತವು. ಅದರಿಂದ ಅಶ್ವಮೇಧಯಜ್ಞದ ಫಲವು ಬರುವುದು. ಜ್ಯೇಷ್ಠಮಾಸದ ಪೂರ್ಣಿಮಾ ದಿನದಲ್ಲಿ ಜ್ಯೇಷ್ಠಾನಕ್ಷತ್ರವು ಬಂದಾಗ ಸ್ನಾನಮಾಡುವುದು ಅಧಿಕ ಮಂಗಳಕರವು. ಉತ್ತಮವಾದ ಆ ತೀರ್ಥಕ್ಕೆ ವಿಶೇಷವಾಗಿ ಹೋಗಬೇಕು.

೨೪-೨೬. ಅಲ್ಲಿ ಪರಿಶುದ್ಧವಾದ ಶರೀರ ವಾಙ್ಮನೋಭಾವನೆಯುಳ್ಳವನು, ಅನನ್ಯಮನಸ್ಕನು, ಸುಖದುಃಖಾದಿದ್ವಂದ್ವಪರಿತ್ಯಾಗಿಯು, ರಾಗಮಾತ್ಸ

ಸರ್ವದ್ವಂದ್ವವಿನಿರ್ಮುಕ್ತೋ ವೀತರಾಗೋ ವಿಮತ್ಸರಃ ।
ಕಲ್ಪವೃಕ್ಷಂ ವಟಂ ರಮ್ಯಂ ಯತ್ರ ಸಾಕ್ಷಾಜ್ಜನಾರ್ದನಃ ॥ ೨೫ ॥

ಪ್ರದಕ್ಷಿಣಂ ಪ್ರಕುರ್ವೀತ ತ್ರೀನ್ವಾರಾನ್ಸುಸಮಾಹಿತಃ ।
ದೃಷ್ಟ್ವಾ ನಶ್ಯತಿ ಯಂ ಪಾಪಂ ಸಪ್ತಜನ್ಮಸಮುದ್ಭವಂ ॥ ೨೬ ॥

ಪುಣ್ಯಾಂ ಪ್ರಾಪ್ನೋತಿ ವಿಪುಲಂ ಗತಿಮಿಷ್ಟಾಂ ಚ ಮೋಹಿನಿ ।
ತಸ್ಯ ನಾಮಾನಿ ವಕ್ಷ್ಯಾಮಿ ಸಪ್ರಮಾಣಂ ಯುಗೇಯುಗೇ ॥ ೨೭ ॥

ವಟಂ ವಟೇಶ್ವರಂ ಶಾಂತಂ ಪುರಾಣಪುರುಷಂ ವಿದುಃ ।
ವಟಸ್ಯೈತಾನಿ ನಾಮಾನಿ ಕೀರ್ತಿತಾನಿ ಕೃತಾದಿಷು ॥ ೨೮ ॥

ಯೋಜನಂ ಪಾದಹೀನಂ ಚ ಯೋಜನಾರ್ಧಂ ತದರ್ಧಕಂ ।
ಪ್ರಮಾಣಂ ಕಲ್ಪವೃಕ್ಷಸ್ಯ ಕೃತಾದಿಷು ಯಥಾಕ್ರಮಂ ॥ ೨೯ ॥

---

ರ್ಯಗಳನ್ನು ಬಿಟ್ಟಿರುವವನೂ ಆಗಿ, ಜನಾರ್ದನನು ಸ್ವತಃ ಸನ್ನಿಹಿತನಾಗಿರುವ, ಮನೋಹರವಾದ, ಕಲ್ಪವೃಕ್ಷದಂತಿರುವ ವಟವೃಕ್ಷವನ್ನು ಸಮಾಧಾನ ಚಿತ್ತದಿಂದ ಮೂರುವಾರಗಳು ಪ್ರದಕ್ಷಿಣೆ ಮಾಡಿ ಸೇವಿಸಬೇಕು.

೨೬-೨೭. ಮೋಹಿನೀ! ಆ ವಟವೃಕ್ಷವು ದರ್ಶನಮಾತ್ರದಿಂದ ಏಳು ಜನ್ಮಗಳಲ್ಲಿ ಗಳಿಸಿದ ಪಾಪವನ್ನು ನಾಶಪಡಿಸುವುದು. ಅಷ್ಟೇ ಅಲ್ಲ. ಅದರ ದರ್ಶನಮಾಡಿದವನು ಪುಣ್ಯ ಮತ್ತು ಇಷ್ಟವಾದ ಗತಿಗಳನ್ನೂ ಹೊಂದುವನು. ಅದಕ್ಕೆ ಒಂದೊಂದು ಯುಗದಲ್ಲಿಯೂ ಬೇರೆಬೇರೆ ಹೆಸರುಗಳಿವೆ. ಅವುಗಳನ್ನು ಸಪ್ರಮಾಣವಾಗಿ ಹೇಳುವೆನು ಕೇಳು.

೨೮. ಕೃತ ಮುಂತಾದ ಯುಗಗಳಲ್ಲಿ ಕ್ರಮವಾಗಿ ಈ ವಟವೃಕ್ಷಕ್ಕೆ ವಟ, ವಟೇಶ್ವರ, ಶಾಂತ, ಪುರಾಣಪುರುಷ ಎಂಬುದಾಗಿ ನಾಮಗಳು ಉಕ್ತವಾಗಿವೆ.

೨೯. ಕೃತ, ತ್ರೇತಾ, ದ್ವಾಪರ ಮತ್ತು ಕಲಿಯುಗಗಳಲ್ಲಿ ಈ ವಟ ವೃಕ್ಷವು ಕ್ರಮವಾಗಿ ಒಂದುಗಾವುದ, ಮುಕ್ಕಾಲುಗಾವುದ, ಅರ್ಧಗಾವುದ, ಕಾಲು ಗಾವುದ ಪರಿಮಾಣವುಳ್ಳದಾಗಿರುತ್ತದೆ.

ಪೂರ್ವೋಕ್ತೇನ ತು ಮಂತ್ರೇಣ ನಮಸ್ಕೃತ್ವಾ ಚ ತಂ ವಟಂ ।
ದಕ್ಷಿಣಾಭಿಮುಖೋ ಗಚ್ಛೇದ್ಧನ್ವಂತರಶತತ್ರಯಂ ॥ ೩೦ ॥

ಯತ್ರಾಸೌ ದೃಶ್ಯತೇ ಚಿಹ್ನಂ ಸ್ವರ್ಗದ್ವಾರಂ ಮನೋರಮಂ ।
ಸಾಗರಾಂತಃ ಸಮಾಕೃಷ್ಟಂ ಕಾಷ್ಠಂ ಸರ್ವಗುಣಾನ್ವಿತಂ ॥ ೩೧ ॥

ಪ್ರಣಿಪತ್ಯ ತತಸ್ತಿಷ್ಠೇತ್ಪರಿಪೂಜ್ಯ ತತಃ ಪುನಃ ।
ಮುಚ್ಯತೇ ಸರ್ವಪಾಪೌಘೈಸ್ತಥಾ ಪಾಪಗ್ರಹಾದಿಭಿಃ ॥ ೩೨ ॥

ಉಗ್ರಸೇನಂ ಪುರಾ ದೃಷ್ಟ್ವಾ ಸ್ವರ್ಗದ್ವಾರೇಣ ಸಾಗರಂ ।
ಗತ್ವಾಽಚಮ್ಯ ಶುಚಿಸ್ತತ್ರ ಧ್ಯಾತ್ವಾ ನಾರಾಯಣಂ ಪರಂ ॥ ೩೩ ॥

ನ್ಯಸೇದಷ್ಟಾಕ್ಷರಂ ಮಂತ್ರಂ ಪಶ್ಚಾದ್ಧಸ್ತಶರೀರಯೋಃ ।
ಓಂ ನಮೋ ನಾರಾಯಣಾಯೇತಿ ಯಂ ವದಂತಿ ಮನೀಷಿಣಃ ॥ ೩೪ ॥

---

೩೦. ಹಿಂದೆ ಹೇಳಿದ ಮಂತ್ರದಿಂದ ದಕ್ಷಿಣಾಭಿಮುಖನಾಗಿ ಆ ವಟಕ್ಕೆ ನಮಸ್ಕಾರಮಾಡಿ ಧನ್ವಂತರ ಶತತ್ರಯಕ್ಕೆ ಹೋಗಬೇಕು.

೩೧. ಅಲ್ಲಿ ಸಾಗರದ ಒಳಭಾಗದಲ್ಲಿ ಸೇರಿಕೊಂಡಿರುವ, ಸಕಲಗುಣ ಯುಕ್ತವಾದ, ಸ್ವರ್ಗದ್ವಾರಚಿಹ್ನೆಯಾದ, ಮನೋಹರಕಾಷ್ಠವು ಕಾಣಿಸುವುದು.

೩೨. ಅಲ್ಲಿ ಅದಕ್ಕೆ ನಮಸ್ಕರಿಸಿ ಪುನಃ ಪೂಜೆಮಾಡಿದರೆ ಸಕಲ ಪಾಪ ರಾಶಿಗಳಿಂದಲೂ ಮತ್ತು ಪಾಪಗ್ರಹಾದಿಗಳಿಂದಲೂ ಮುಕ್ತನಾಗುವನು.

೩೩-೩೪. ಪೂರ್ವದಲ್ಲಿ ಉಗ್ರಸೇನನು ಸ್ವರ್ಗದ್ವಾರದಿಂದ ಸಮುದ್ರ ವನ್ನು ನೋಡಿ ಅಲ್ಲಿಗೆ ಹೋಗಿ ಆಚಮನಮಾಡಿ ಪರಿಶುದ್ಧನಾಗಿ ಅಲ್ಲಿಯೇ ಉತ್ತಮನಾದ ನಾರಾಯಣನನ್ನು ಧ್ಯಾನಿಸಿ ಬಳಿಕ ಜ್ಞಾನಿಗಳು "ಓಂ ನಮೋ ನಾರಾಯಣಾಯ" ಎಂದು ಹೇಳುವ ಅಷ್ಟಾಕ್ಷರಮಂತ್ರವನ್ನು ಹಸ್ತ ಮತ್ತು ಶರೀರಗಳಲ್ಲಿ ನ್ಯಾಸಮಾಡಿದನು.

ಕಿಂ ಕಾರ್ಯಂ ಬಹುಭಿರ್ಮಂತ್ರೈರ್ಮನೋವಿಭವಕಾರಕೈಃ ।
ನಮೋ ನಾರಾಯಣಾಯೇತಿ ಮಂತ್ರಃ ಸರ್ವಾರ್ಥಸಾಧಕಃ ॥ ೩೫ ॥

ಆಪೋ ನರಸ್ಯ ಸೂನುತ್ವಾನ್ನಾರಾ ಇತಿ ಹ ಕೀರ್ತಿತಾಃ ।
ವಿಷ್ಣೋಸ್ತಾಸ್ತ್ವಲಯಂ ಪೂರ್ವಂ ತೇನ ನಾರಾಯಣಃ ಸ್ಮೃತಃ ॥ ೩೬ ॥

ನಾರಾಯಣಪರಾ ವೇದಾ ನಾರಾಯಣಪರಾ ದ್ವಿಜಾಃ ।
ನಾರಾಯಣಪರಂ ಜ್ಞಾನಂ ನಾರಾಯಣಪರಾ ಕ್ರಿಯಾ ॥ ೩೭ ॥

ನಾರಾಯಣಪರೋ ಧರ್ಮೋ ನಾರಾಯಣಪರಂ ತಪಃ ।
ನಾರಾಯಣಪರಂ ದಾನಂ ನಾರಾಯಣಪರಂ ವ್ರತಂ ॥ ೩೮ ॥

ನಾರಾಯಣಪರಾ ಲೋಕಾ ನಾರಾಯಣಪರಾಃ ಸುರಾಃ ।
ನಾರಾಯಣಪರಂ ನಿತ್ಯಂ ನಾರಾಯಣಪರಂ ಪದಂ ॥ ೩೯ ॥

---

೩೫. ಮನೋವೈಭವವನ್ನುಂಟುಮಾಡುವ ಬಹುಮಂತ್ರಗಳನ್ನು ಜಪಿಸುವುದರಿಂದೇನು? "ಓಂ ನಮೋ ನಾರಾಯಣಾಯ" ಎಂಬ ಮಂತ್ರವೇ ಸರ್ವಾರ್ಥಸಾಧಕವು.

೩೬. ನರಸೂನುವಾದ್ದರಿಂದ ಜಲವು ನಾರವೆನಿಸಿದೆ. ಅಂತಹ ನಾರ ಎಂದರೆ ಜಲವು ವಿಷ್ಣುವಿಗೆ ಆಲಯವಾಗಿರುವುದರಿಂದ ಅವನಿಗೆ ನಾರಾಯಣ ಎಂಬ ನಾಮವು ಅನ್ವರ್ಥಕವಾಗಿದೆ.

೩೭. ವೇದಗಳು ನಾರಾಯಣನನ್ನೇ ಹೊಗಳುತ್ತವೆ. ದ್ವಿಜರು ನಾರಾಯಣನನ್ನೇ ಧ್ಯಾನಿಸುವರು. ಜ್ಞಾನವು ನಾರಾಯಣವಿಷಯಕವು. ನಾರಾಯಣನಿಗೆ ಪ್ರೀತಿಯಾಗಲೆಂಬ ಉದ್ದೇಶದಿಂದ ಪ್ರವೃತ್ತನಾದುದೇ ಕರ್ತವ್ಯ.

೩೮. ನಾರಾಯಣಪರವಾದುದು ಧರ್ಮವು. ನಾರಾಯಣನನ್ನು ಭಜಿಸುವುದು ತಪಸ್ಸು. ನಾರಾಯಣ ಪ್ರೀತಿಕರವಾದುದೇ ದಾನ ಮತ್ತು ವ್ರತವು.

೩೯. ಲೋಕಗಳು ನಾರಾಯಣನ ಅಧೀನಗಳಾಗಿವೆ ದೇವತೆಗಳು ನಾರಾಯಣ ಭಕ್ತರು. ನಿತ್ಯವಸ್ತುವೂ ನಾರಾಯಣನ ಅಧೀನವು. ಗಮ್ಯಸ್ಥಾನವೂ ನಾರಾಯಣನ ವಶವು!

ನಾರಾಯಣಪರಾ ಪೃಥ್ವೀ ನಾರಾಯಣಪರಂ ಜಲಂ ।
ನಾರಾಯಣಪರೋ ವಹ್ನಿರ್ನಾರಾಯಣಪರಂ ನಭಃ ॥ ೪೦ ॥

ನಾರಾಯಣಪರೋ ವಾಯುರ್ನಾರಾಯಣಪರಂ ಮನಃ ।
ಅಹಂಕಾರಶ್ಚ ಬುದ್ಧಿಶ್ಚ ಉಭೇ ನಾರಾಯಣಾತ್ಮಕೇ ॥ ೪೧ ॥

ಭೂತಂ ಭವ್ಯಂ ಭವಿಷ್ಯಂ ಚ ಯತ್ಕಿಂಚಿಜ್ಜೀವಸಂಜ್ಞಿತಂ ।
ಸ್ಥೂಲಂ ಸೂಕ್ಷ್ಮಂ ಪರಂ ಚೈವ ಸರ್ವಂ ನಾರಾಯಣಾತ್ಮಕಂ ॥ ೪೨ ॥

ನಾರಾಯಣಾತ್ಪರಂ ಕಿಂಚಿನ್ನೇಹ ಪಶ್ಯಾಮಿ ಮೋಹಿನಿ ।
ತೇನ ವ್ಯಾಪ್ತಮಿದಂ ಸರ್ವಂ ದೃಶ್ಯಾದೃಶ್ಯಂ ಚರಾಚರಂ ॥ ೪೩ ॥

ಆಪೋ ಹ್ಯಾಯತನಂ ವಿಷ್ಣೋಃ ಸ ಚಾಪಾಮಂಭಸಾಂ ಪತಿಃ ।
ತಸ್ಮಾದಪ್ಸರ ಇತ್ಯೇವಂ ನಾರಾಯಣಮಘಾಪಹಂ ॥ ೪೪ ॥

ಸ್ನಾನಕಾಲೇ ವಿಶೇಷೇಣ ಚೋಪಸ್ಥಾಯ ಜಲೇ ಶುಚಿಃ ।
ಸ್ಮರೇನ್ನಾರಯಣಂ ಧ್ಯಾಯೇದ್ಹಸ್ತೇ ಕಾಯೇ ಚ ವಿನ್ಯಸೇತ್ ॥ ೪೫ ॥

---

೪೦-೪೨. ಪೃಥಿವಿ, ಜಲ, ತೇಜಸ್ಸು, ಆಕಾಶ, ವಾಯು, ಮನಸ್ಸು, ಅಹಂಕಾರ, ಬುದ್ಧಿ ಮುಂತಾದ ಭೂತ ಭವಿಷ್ಯದ್ವರ್ತಮಾನ ಕಾಲೀನಗಳಾದ ಸ್ಥೂಲ ಸೂಕ್ಷ್ಮವೆನಿಸಿರುವ ಎಲ್ಲಾ ವಸ್ತುಗಳು ಮತ್ತು ಜೀವನಾಮಕವಾದುದೂ ಸಹ ನಾರಾಯಣನ ಅಧೀನಗಳಾಗಿಯೇ ಇವೆ.

೪೩. ಮೋಹಿನೀ! ನಾರಾಯಣನಿಗಿಂತ ಉತ್ತಮ ವಸ್ತುವನ್ನು ಎಲ್ಲಿಯೂ ಕಾಣೆನು. ಕಾಣಿಸುತ್ತಿರುವ ಮತ್ತು ಕಾಣಿಸದಿರುವ ಚರಾಚರ ವಸ್ತುಗಳೆಲ್ಲವೂ ಅವನಿಂದಲೇ ವ್ಯಾಪಿಸಲ್ಪಟ್ಟಿದೆ.

೪೪. ಜಲವು ವಿಷ್ಣುವಿಗೆ ಆಯತನವು. ವಿಷ್ಣುವೇ ಜಲಪತಿಯು ಆದ ಕಾರಣ ನಾರಾಯಣನಿಗೆ ಅಪ್ಸರ ಎಂಬ ಪಾಪಪರಿಹಾರಕನಾದ ನಾಮಧೇಯವು ಸ್ಮೃತವಾಗಿದೆ.

೪೫. ಸ್ನಾನಕಾಲದಲ್ಲಿ ಜಲದಲ್ಲಿ ಸನ್ನಿಹಿತನಾದ ನಾರಾಯಣನನ್ನು ವಿಶೇಷವಾಗಿ ಸ್ಮರಿಸಬೇಕು. ಸ್ನಾನದಿಂದ ಪರಿಶುದ್ಧನಾದಮೇಲೆ ಕೈ ಮತ್ತು ಶರೀರಗಳಲ್ಲಿ ನಾರಾಯಣಮಂತ್ರವನ್ನು ನ್ಯಾಸಮಾಡಬೇಕು.

ಓಂಕಾರಂ ವಾಮಕಟ್ಯಾಂ ತು ನಾಕಾರಂ ದಕ್ಷಿಣೇ ತಥಾ ।
ರಾಕಾರಂ ನಾಭಿದೇಶೇ ತು ಯಕಾರಂ ವಾಮಬಾಹುಕೇ ॥ ೪೬ ॥

ಣಾಕಾರಂ ದಕ್ಷಿಣೇ ನ್ಯಸ್ಯ ಯಕಾರಂ ಮೂರ್ಧ್ನಿ ವಿನ್ಯಸೇತ್ ।
ಅಧಶ್ಚೋರ್ಧ್ವಂ ಚ ಹೃದಯೇ ಪಾರ್ಶ್ವತಃ ಪೃಷ್ಠತೋಗ್ರತಃ ॥ ೪೭ ॥

ಧ್ಯಾತ್ವಾ ನಾರಾಯಣಂ ಪಶ್ಚಾದಾರಭೇತ್ಕವಚಂ ಬುಧಃ ।
ಪೂರ್ವೇ ಮಾಂ ಪಾತು ಗೋವಿಂದೋ ದಕ್ಷಿಣೇ ಮಧುಸೂದನಃ ॥ ೪೮ ॥

ಪಶ್ಚಿಮೇ ಶ್ರೀಧರೋ ದೇವಃ ಕೇಶವಸ್ತು ತಥೋತ್ತರೇ ।
ಪಾತು ವಿಷ್ಣುಸ್ತಥಾಗ್ನೇಯೇ ನೈರ್ಋತೇ ಮಾಧವೋಽವ್ಯಯಃ ॥ ೪೯ ॥

ವಾಯವ್ಯೇ ತು ಹೃಷೀಕೇಶಸ್ತಥೇಶಾನೇ ಚ ವಾಮನಃ ।
ಭೂತಲೇ ಪಾತು ವಾರಾಹಸ್ತಥೋರ್ಧ್ವೇ ಚ ತ್ರಿವಿಕ್ರಮಃ ॥ ೫೦ ॥

---

೪೬-೪೭. ಎಡನಡುವಿನಲ್ಲಿ ಓಂಕಾರ, ಬಲನಡುವಿನಲ್ಲಿ ನಾಕಾರ, ಹೊಕ್ಕಳಿನಲ್ಲಿ ರಾ ಎಂಬವರ್ಣ, ಎಡಬಾಹುವಿನಲ್ಲಿ ಯಕಾರ, ಬಲಬಾಹುವಿನಲ್ಲಿ ಣಾ ಎಂಬ ಅಕ್ಷರ, ಶಿರಸ್ಸಿನಲ್ಲಿ ಯಕಾರ ಈ ರೀತಿಯಾಗಿ ಅಷ್ಟಾಕ್ಷರಮಂತ್ರದಲ್ಲಿನ ವರ್ಣಗಳನ್ನು ನ್ಯಾಸಮಾಡಬೇಕು.

೪೭-೫೧. ಬಳಿಕ ಕೆಳಗೆ, ಮೇಲೆ, ಹೃದಯ, ಪಾರ್ಶ್ವ, ಹಿಂದೆ, ಮುಂದೆ ಎಲ್ಲಾ ಕಡೆಗಳಲ್ಲಿಯೂ ನಾರಾಯಣನನ್ನು ಧ್ಯಾನಿಸಿ ಅನಂತರ ಜ್ಞಾನಿಯು ಕವಚವನ್ನು ಆರಂಭಿಸಬೇಕು. ಎಂತೆಂದರೆ:—ಪೂರ್ವದಲ್ಲಿ ಗೋವಿಂದನು, ದಕ್ಷಿಣದಲ್ಲಿ ಮಧುಸೂದನನು, ಪಶ್ಚಿಮದಲ್ಲಿ ಶ್ರೀಧರದೇವನು, ಉತ್ತರದಲ್ಲಿ ಕೇಶವನೂ ಕಾಪಾಡಲಿ! ಅಂತೆಯೇ ಆಗ್ನೇಯಕೋಣದಲ್ಲಿ ವಿಷ್ಣುವು, ನೈಋತ್ಯದಲ್ಲಿ ಅವ್ಯಯನಾದ ಮಾಧವನು, ವಾಯುವ್ಯಮೂಲೆಯಲ್ಲಿ ಹೃಷೀಕೇಶನು, ಈಶಾನ್ಯದಲ್ಲಿ ವಾಮನನು, ಭೂತಲದಲ್ಲಿ ವರಾಹನು, ಊರ್ಧ್ವಭಾಗದಲ್ಲಿ ತ್ರಿವಿಕ್ರಮನೂ ರಕ್ಷಿಸಬೇಕೆಂದು ಕವಚವನ್ನನುಸಂಧಾನಮಾಡಿ, ನಾರಾಯಣದೇವನು ಅಹೇಯ

ಕೃತ್ವೈವಂ ಕವಚಂ ಪಶ್ಚಾದಾತ್ಮಾನಂ ಚಿಂತಯೇತ್ತತಃ ।
ಅಹಂ ನಾರಾಯಣೋ ದೇವಃ ಶಂಖಚಕ್ರಗದಾಧರಃ ॥ ೫೧ ॥

ಏವಂ ಧ್ಯಾತ್ವಾ ತದಾತ್ಮಾನಮಿಮಂ ಮಂತ್ರಮುದೀರಯೇತ್ ।
ತ್ವಮಗ್ನಿರ್ದ್ವಿಪದಾಂ ನಾಥ ರೇತೋಧಾಃ ಕಾಮದೀಪನಃ ॥ ೫೨ ॥

ಪ್ರಧಾನಃ ಸರ್ವಭೂತಾನಾಂ ಜೀವಾನಾಂ ಪ್ರಭುರವ್ಯಯಃ ।
ಅಮೃತಸ್ಯಾರಣಿಸ್ತ್ವಂ ಹಿ ದೇವಯೋನಿರಪಾಂಪತೇ ॥ ೫೩ ॥

ವೃಜಿನಂ ಹರ ಮೇ ಸರ್ವಂ ತೀರ್ಥರಾಜ ನಮೋಽಸ್ತು ತೇ ।
ಏವಮುಚ್ಚಾರ್ಯ ವಿಧಿವತ್ ಸ್ತುತ್ವಾ ಸ್ನಾನಂ ಸಮಾಚರೇತ್ ॥ ೫೪ ॥

ಅನ್ಯಥಾ ಬ್ರಹ್ಮತನಯೇ ಸ್ನಾನಂ ತತ್ರ ನ ಶಸ್ಯತೇ ।
ಕೃತ್ವಾ ಚಾಬ್ದೈವತೈರ್ಮಂತ್ರೈರಭಿಷೇಕಂ ಚ ಮಾರ್ಜನಂ ॥ ೫೫ ॥

---

ನಾದುದರಿಂದ ಅಹಂ ಎನಿಸಿರುವನು, ಶಂಖಚಕ್ರ ಗದಾಪಾಣಿಯಾಗಿರುವನು ಎಂಬುದಾಗಿ ಅಂತರ್ಯಾಮಿಯಾದ ಆತ್ಮನನ್ನು ಧ್ಯಾನಿಸಬೇಕು.

೫೨-೫೪. ಈರೀತಿಯಾಗಿ ಆತ್ಮನನ್ನು ಧ್ಯಾನಿಸಿ ಈ ಮಂತ್ರವನ್ನು ಹೇಳಬೇಕು. ಮಂತ್ರಾರ್ಥ:—ದ್ವಿಪಾದಪ್ರಾಣಿವರ್ಗಕ್ಕೆ ಸ್ವಾಮಿಯೇ! ನೀನು ಅಗ್ನಿನಾಮಕನು, ರೇತಸ್ಸನ್ನು ಧರಿಸಿರುವವನು, ಕಾಮೋದ್ದೀಪಕನು, ಸಕಲ ಭೂತಪ್ರಧಾನನು, ಜೀವನಿಯಾಮಕನು, ನಾಶರಹಿತನು, ಮೋಕ್ಷೋದ್ಭವಸ್ಥಾನನು, ದೇವಕಾರಣನೂ ಆದ ಜಲಸ್ವಾಮಿಯಾಗಿರುವೆ. ತೀರ್ಥರಾಜನೇ! ನೀನು ನನ್ನ ಸಕಲಪಾಪಗಳನ್ನೂ ಪರಿಹರಿಸು, ನಿನಗೆ ನಮಸ್ಕಾರಮಾಡುವೆನು. ಎಂಬೀ ಮಂತ್ರವನ್ನು ಹೇಳಿ ಅನಂತರ ವಿಧಿವತ್ತಾಗಿ ಸ್ನಾನಮಾಡಬೇಕು

೫೫-೫೬. ಬ್ರಹ್ಮಕುಮಾರಿಯೇ! ಈರೀತಿ ವಿಧಾನವನ್ನಾಚರಿಸದಿದ್ದರೆ ಆ ತೀರ್ಥದಲ್ಲಿ ಸ್ನಾನವು ವಿಹಿತಫಲದಾಯಕವಾಗುವುದಿಲ್ಲ. ಹೀಗೆ ಸ್ನಾನ ಮಾಡಿ ಜಲಾಭಿಮಾನಿದೇವತೆಗಳ ಮಂತ್ರಗಳಿಂದ ಅಭಿಷೇಕ ಮಾರ್ಜನಗಳನ್ನು ಮಾಡಿಕೊಂಡು ನೀರಿನಲ್ಲಿಯೇ ನಿಂತು, ಮೂರಾವರ್ತಿ ಅಘಮರ್ಷಣ ಸೂಕ್ತವನ್ನು ಜಪಿಸಬೇಕು.

ಅಂತರ್ಜಲೇ ಜಪೇತ್ಸಮ್ಯಕ್ತ್ರಿರಾವೃತ್ತ್ಯಾಘಮರ್ಷಣಂ |
ಹಯಮೇಧೋ ಯಥಾ ದೇವಿ ಸರ್ವಪಾಪಹರಃ ಕ್ರತುಃ || ೫೬ ||

ತಥಾಘಮರ್ಷಣಂ ಚಾತ್ರ ಸೂಕ್ತಂ ಸರ್ವಾಘಮರ್ಷಣಂ |
ಉತ್ತೀರ್ಯ ವಾಸಸೀ ಧೌತೇ ನಿರ್ಮಲೇ ಪರಿಧಾಯ ಚ || ೫೭ ||

ಪ್ರಾಣಾನಾಯಮ್ಯ ಚಾಚಮ್ಯ ಸಂಧ್ಯಾಂ ಚೋಪಾಸ್ಯ ಭಾಸ್ಕರಂ |
ಉಪಾತಿಷ್ಠೇತ್ತತೋರ್ಧ್ವೇ ಕ್ಷಿಪ್ತ್ವಾ ಪುಷ್ಪಜಲಾಂಜಲಿಂ || ೫೮ ||

ಉಪಸ್ಥಾಯೋರ್ಧ್ವಬಾಹುಶ್ಚ ತಲ್ಲಿಂಗೈರ್ಭಾಸ್ಕರಂ ತತಃ |
ಗಾಯತ್ರೀಂ ಪಾವನೀಂ ದೇವೀಂ ಜಪೇದಷ್ಟೋತ್ತರಂ ಶತಂ || ೫೯ ||

ಅನ್ಯಾಂಶ್ಚ ಸೌರಮಂತ್ರಾಂಶ್ಚ ಜಪ್ತ್ವಾ ತಿಷ್ಠೇತ್ಸಮಾಹಿತಃ |
ಕೃತ್ವಾ ಪ್ರದಕ್ಷಿಣಂ ಸೂರ್ಯಂ ನಮಸ್ಕೃತ್ಯೋಪವಿಶ್ಯ ಚ || ೬೦ ||

---

೫೬-೫೭. ದೇವಿಯೇ! ಅಶ್ವಮೇಧಯಾಗವು ಹೇಗೆ ಸಕಲಪಾಪ ಪರಿಹಾರಕವೋ ಅದರಂತೆ ಅಘಮರ್ಷಣ ಸೂಕ್ತವು ಸಕಲ ಪಾಪಪರಿಹಾರಕವು.

೫೭-೫೮. ಹೀಗೆ ಸ್ನಾನಜಪಗಳಾದನಂತರ ದಡಕ್ಕೆಬಂದು ನಿರ್ಮಲವಾದ ಒಗೆದ ಬಟ್ಟೆಯನ್ನುಟ್ಟುಕೊಂಡು ಆಚಮನ ಪ್ರಾಣಾಯಾಮಗಳನ್ನು ಮಾಡಿ ಸೂರ್ಯಪ್ರೀತ್ಯರ್ಥವಾಗಿ ಸಂಧ್ಯೋಪಾಸನೆ ಮಾಡಿ ಪುಷ್ಪಜಲಾಂಜಲಿಗಳನ್ನು ಮೇಲಕ್ಕೆಸೆಯಬೇಕು.

೫೯. ಬಳಿಕ ಬಾಹುಗಳನ್ನು ಮೇಲೆತ್ತಿ ಸೂರ್ಯಚಿಹ್ನೆಗಳಿಂದ ಅವನ ಉಪಸ್ಥಾನಮಾಡಿ ಅನಂತರ ಪವಿತ್ರವಾದ ಗಾಯತ್ರೀ ದೇವತಾಕವಾದ ಮಂತ್ರವನ್ನು ನೂರೆಂಟಾವರ್ತಿ ಜಪಿಸಬೇಕು.

೬೦. ತರುವಾಯ ನಿಂತು ಸಮಾಧಾನಮನಸ್ಕನಾಗಿ ಇತರ ಸೌರ ಮಂತ್ರಗಳನ್ನು ಜಪಿಸಿ ಸೂರ್ಯನಿಗೆ ಪ್ರದಕ್ಷಿಣೆ ನಮಸ್ಕಾರಗಳನ್ನುಮಾಡಿ ಕುಳಿತುಕೊಳ್ಳಬೇಕು.

ಸ್ವಾಧ್ಯಾಯಂ ಪ್ರಾಙ್ಮುಖಃ ಕೃತ್ವಾ ತರ್ಪಯೇದ್ದೇವಮಾನವಾನ್ |
ಋಷೀನ್ ಪಿತೄನ್ ಹಿ ಸ್ವೀಯಾಂಶ್ಚ ವಿಧಿವನ್ನಾಮಗೋತ್ರವಿತ್ || ೬೧ ||

ತೋಯೇನ ತಿಲಮಿಶ್ರೇಣ ವಿಧಿವತ್ಸುಸಮಾಹಿತಃ |
ಶ್ರಾದ್ಧೇ ಹವನಕಾಲೇ ಚ ಪಾಣಿನೈಕೇನ ನಿರ್ವಪೇತ್ || ೬೨ ||

ತರ್ಪಣೇ ತೂಭಯಂ ಕುರ್ಯಾದೇಷ ಏವ ವಿಧಿಃ ಸದಾ |
ಅನ್ವಾರಬ್ಧೇನ ಸವ್ಯೇನ ಪಾಣಿನಾ ದಕ್ಷಿಣೇನ ತು || ೬೩ ||

ತೃಪ್ಯತಾಮಿತಿ ಸುವ್ಯಕ್ತಂ ನಾಮಗೋತ್ರೇಣ ವಾಗ್ಯತಃ |
ಕಾಯಸ್ಥೈರ್ಯಸ್ತಿಲೈರ್ಮೋಹಾತ್ಕರೋತಿ ಪಿತೃತರ್ಪಣಂ || ೬೪ ||

ತರ್ಪಿತಾಸ್ತೇನ ಪಿತರಸ್ತ್ವಙ್ಮಾಂಸರುಧಿರಾಸ್ಥಿಭಿಃ |
ಜಲೇ ಸ್ಥಿತ್ವಾ ಸ್ಥಲೇ ದತ್ತಂ ಸ್ಥಲೇ ಸ್ಥಿತ್ವಾ ಜಲೇಽರ್ಪಿತಂ || ೬೫ ||

---

೬೧-೬೨. ಪೂರ್ವಾಭಿಮುಖನಾಗಿ ಕುಳಿತು, ವೇದಾರಂಭಣಮಾಡಿ ದೇವತೆ, ಮಾನವ, ಋಷಿ, ಪಿತೃ ನಾಮಗೋತ್ರಸಹಿತವಾಗ ತನ್ನ ಪಿತೃಗಳು ಇವರಿಗೆ ಎಳ್ಳುಮಿಶ್ರವಾದ ನೀರಿನಿಂದ ಸಮಾಹಿತಮನಸ್ಕನಾಗಿ ತರ್ಪಣಕೊಡಬೇಕು.

೬೨-೬೩. ಶ್ರಾದ್ಧ ಮತ್ತು ಹೋಮಕಾಲಗಳಲ್ಲಿ ಒಂದುಕೈಯಿಂದ ಪಿಂಡಾದಿಗಳನ್ನು ಕೊಡಬೇಕು. ತರ್ಪಣದಲ್ಲಿಯಾದರೋ ಸ್ಪಷ್ಟವಾಗಿ ನಾಮಗೋತ್ರೋಚ್ಚಾರಣ ಪೂರ್ವಕವಾಗಿ "ತೃಪ್ಯತಾಂ" ಎಂದು ಹೇಳುತ್ತಾ ಉಭಯ ಎಂದರೆ ಅನ್ವಾರಬ್ಧವಾದ ಸವ್ಯದಕ್ಷಿಣಹಸ್ತಗಳಿಂದ ಅಂಜಲಿಗಳನ್ನು ಕೊಡಬೇಕು. ಇದೇ ಯಾವಾಗಲೂ ತರ್ಪಣವಿಧಾನವು.

೬೩-೬೫. ಒಬ್ಬ ಪಿತೃವಿಗೆ ತರ್ಪಣಕೊಟ್ಟಮೇಲೆ ಕೈಯಲ್ಲಿ ಎಳ್ಳು ಉಳಿಯಬಾರದು ಹಾಗೂ ಅಂಟಿಕೊಂಡಿದ್ದ ಎಳ್ಳಿನಿಂದ ತಿಳಿಯದೆ ಪಿತೃ ತರ್ಪಣವನ್ನು ಮುಂದುವರಿಸಿದರೆ ಪಿತೃಗಳಿಗೆ, ತ್ವಕ್ಕು, ಮಾಂಸ, ರಕ್ತ, ಮೂಳೆ ಇವುಗಳಿಂದ ತರ್ಪಣ ಮಾಡಿದಂತಾಗುವುದು. ನೀರಿನಲ್ಲಿ ನಿಂತು ಭೂಮಿಯ ಮೇಲೆ ಕೊಡಲ್ಪಟ್ಟದ್ದು ಅಥವಾ ಭೂಮಿಯಮೇಲೆ ನಿಂತು ನೀರಿನಲ್ಲಿ ಸಮರ್ಪಣೆ ಮಾಡಿದುದು ಇವನ್ನು ಪಿತೃಗಳು ಸ್ವೀಕರಿಸುವುದಿಲ್ಲ.

ಸೋಽಪತಿಷ್ಯತಿ ತತ್ತೋಯಂ ಯದ್ಭೂಮ್ಯಾಂ ಸ ಪ್ರದೀಯತೇ ।
ಪಿತೃಣಾಮಕ್ಷಯಂ ಸ್ಥಾನಂ ಮಹೀ ದತ್ತಾ ವಿರಂಚಿನಾ ॥ ೬೬ ॥

ತಸ್ಮಾತ್ತತ್ರೈವ ದಾತವ್ಯಂ ಪಿತೃಣಾಂ ಪ್ರೀತಿಮಿಚ್ಛತಾ ।
ಭೂಮಿಸ್ತೇನ ಸಮುತ್ಪನ್ನಾ ಭೂಮ್ಯಾಂ ಚೈವ ತು ಸಂಸ್ಥಿತಂ ॥ ೬೭ ॥

ಭೂಮ್ಯಾಂ ಚೈವ ಲಯಂ ಯಾಂತಿ ಭೂಮೌ ದದ್ಯಾತ್ತತೋ ಜಲಂ ।
ಆಸ್ತೀರ್ಯ ಕುಶಾನ್ ಸಾಗ್ರಾನಾವಾಹ್ಯ ಸ್ವಸ್ವಮಂತ್ರತಃ ।
ಪ್ರಾಚೀನಾಗ್ರೇಷು ವೈ ದೇವಾನ್ಯಾಮ್ಯಾಗ್ರೇಷು ತಥಾ ಪಿತೄನ್ ॥ ೬೮ ॥

ಇತಿ ಶ್ರೀನಾರದೀಯಮಹಾಪುರಾಣೋತ್ತರಭಾಗೇ ಮೋಹಿನೀ
ವಸುಸಂವಾದೇ ಶ್ರೀಪುರುಷೋತ್ತಮಮಹಾತ್ಮ್ಯೇ
ಷಟ್‌ಪಂಚಾಶತ್ತಮೋಽಧ್ಯಾಯಃ

---

೬೬-೬೮. ಭೂಮಿಯಲ್ಲಿ ದತ್ತವಾಗದ ಜಲವು ಪಿತೃತೃಪ್ತಿಕಾರಕವಲ್ಲ. ಬ್ರಹ್ಮನು ಪಿತೃಗಳಿಗೆ ಭೂಮಿಯನ್ನೇ ಅಕ್ಷಯಸ್ಥಾನವಾಗಿ ಕೊಟ್ಟಿರುವನು ಆದ ಕಾರಣ ಪಿತೃತೃಪ್ತಿಯನ್ನು ಬಯಸುವವನು ಭೂಮಿಯಲ್ಲಿಯೇ ಪಿತೃಗಳಿಗೆ ಹವ್ಯ ದಾನವಮಾಡಬೇಕು.

ಭೂಮಿಯು ಜಲದಿಂದ ಹುಟ್ಟಿದೆ. ಅದರಲ್ಲಿಯೇ ನೀರು ಇರುತ್ತದೆ. ಅಲ್ಲಿಯೇ ಲಯವನ್ನು ಹೊಂದುತ್ತದೆ. ಆದಕಾರಣ ಭೂಮಿಯಲ್ಲಿಯೇ ಜಲ ಪ್ರದಾನ ಮಾಡಬೇಕು. ಅಗ್ರವುಳ್ಳ ದರ್ಭೆಗಳನ್ನು ಭೂಮಿಯಲ್ಲಿ ಪೂರ್ವ ಮತ್ತು ದಕ್ಷಿಣಾಗ್ರಗಳಾಗಿ ಹರಡಿ ಪೂರ್ವಾಗ್ರದಲ್ಲಿ ದೇವತೆಗಳನ್ನು, ದಕ್ಷಿಣಾಗ್ರ ದರ್ಭೆಗಳಲ್ಲಿ ಪಿತೃಗಳನ್ನೂ ಆಯಾಯ ಮಂತ್ರದಿಂದ ಆವಾಹನೆಮಾಡಿ ಹವ್ಯದಾನಾದಿಗಳನ್ನು ಮಾಡಬೇಕು.

ಇಂತು ಶ್ರೀನಾರದೀಯಪುರಾಣೋತ್ತರಭಾಗದಲ್ಲಿನ ಮೋಹಿನೀ ವಸು
ಸಂವಾದದೊಳು ಪುರುಷೋತ್ತಮ ಮಹಾತ್ಮ್ಯದಲ್ಲಿ
ಐವತ್ತಾರನೆಯ ಅಧ್ಯಾಯವು ಮುಗಿದುದು.

# ಸಪ್ತಪಂಚಾಶತ್ತಮೋಽಧ್ಯಾಯಃ



## ವಸುರುವಾಚ

ದೇವಾನೃಷೀನ್ ಪಿತೄಂಶ್ಚಾನ್ಯಾನ್ಸಂತರ್ಪ್ಯಾಚಮ್ಯ ವಾಗ್ಯತಃ ।
ಹಸ್ತಮಾತ್ರಂ ಚತುಷ್ಕೋಣಂ ಚತುರ್ದ್ವಾರಂ ಸುಶೋಭನಂ ॥ ೧ ॥

ಪುರಂ ವಿಲಿಖ್ಯ ವಿಧಿಜೇ ತೀರೇ ತಸ್ಯ ಮಹೋದಧೇಃ ।
ಮಧ್ಯೇ ತತ್ರ ಲಿಖೇತ್ಪದ್ಮಮಷ್ಟಪತ್ರಂ ಸಕರ್ಣಿಕಂ ॥ ೨ ॥

ಏವಂ ಮಂಡಲಮಾಲಿಖ್ಯ ಪೂಜಯೇತ್ತತ್ರ ಮೋಹಿನಿ ।
ಅಷ್ಟಾಕ್ಷರವಿಧಾನೇನ ನಾರಾಯಣಮಜಂ ವಿಭುಂ ॥ ೩ ॥

ಅಥ ತೇ ಸಂಪ್ರವಕ್ಷ್ಯಾಮಿ ಕಾಯಶೋಧನಮುತ್ತಮಂ ।
ಕ್ಷಕಾರಂ ಹೃದಯೇ ಚಿಂತ್ಯಂ ರಕ್ತಂ ರೇಫಸಮನ್ವಿತಂ ॥ ೪ ॥

---

## ಐವತ್ತೇಳನೆಯ ಅಧ್ಯಾಯ.

೧-೨. ವಸುವು ಹೇಳಿದನು :— ಬ್ರಹ್ಮಜಾತಳೇ ! ದೇವ, ಋಷಿ, ಪಿತೃಗಳಿಗೆ ತರ್ಪಣ ಮಾಡಿದನಂತರ ಆಚಮನಮಾಡಿ ಮೌನವಾಗಿ ಆ ಮಹಾಸಾಗರದ ತೀರದಲ್ಲಿ ನಾಲ್ಕು ಮೂಲೆಗಳು, ನಾಲ್ಕು ದ್ವಾರಗಳೂ ಉಳ್ಳ, ಅತ್ಯಂತ ಮಂಗಳಕರವಾದ, ಹಸ್ತಪರಿಮಾಣವುಳ್ಳ ಮಂಡಲವನ್ನು ಬರೆದು ಅದರ ಮಧ್ಯದಲ್ಲಿ ಕೋಶಸಹಿತವಾದ ಅಷ್ಟದಳಪದ್ಮವನ್ನು ಬರೆಯಬೇಕು.

೩. ಮೋಹಿನಿಯೇ ! ಈರೀತಿಯಾಗಿ ಬರೆದ ಮಂಡಲದಲ್ಲಿ ಉತ್ಪತ್ತಿರಹಿತನಾದ ನಾರಾಯಣಸ್ವಾಮಿಯನ್ನು ಅಷ್ಟಾಕ್ಷರ ವಿಧಾನದಿಂದ ಪೂಜಿಸಬೇಕು.

೪-೬. ಈಗ ನಿನಗೆ ಉತ್ತಮವಾದ ಕಾಯಶೋಧನ ಪದ್ಧತಿಯನ್ನು ಹೇಳುವೆನು :— ಪಾಪರಾಶಿಯನ್ನು ದಹಿಸುವ, ಶಿಖಾತ್ರಯವುಳ್ಳ, ಪ್ರಜ್ವಲಿಸು

ಜ್ವಲಂತಂ ತ್ರಿಶಿಖಂ ಚೈವ ದಹಂತಂ ಪಾಪಸಂಚಯಂ ।
ಚಂದ್ರಮಂಡಲಮಧ್ಯಸ್ಥಮೇಕಾರಂ ಮೂರ್ಧ್ನಿ ಚಿಂತಯೇತ್ ॥ ೫ ॥
ಶುಕ್ಲವರ್ಣಂ ಪ್ರವರ್ಷಂತಮಮೃತಂ ಪ್ಲಾವಯೇನ್ಮಹೀಂ ।
ಏವಂ ನಿರ್ಧೂತಪಾಪಸ್ತು ದಿವ್ಯದೇಹಸ್ತತೋ ಭವೇತ್ ॥ ೬ ॥
ಅಷ್ಟಾಕ್ಷರಂ ತತೋ ಮಂತ್ರಂ ನ್ಯಸೇದ್ದೇಹಾತ್ಮನೋರ್ಬುಧಃ ।
ವಾಮಪಾದಂ ಸಮಾರಭ್ಯ ಕ್ರಮಶಶ್ಚೈವ ವಿನ್ಯಸೇತ್ ॥ ೭ ॥
ಪಂಚಾಂಗಂ ವೈಷ್ಣವಂ ಚೈವ ಚತುರ್ವ್ಯೂಹಂ ತಥೈವ ಚ ।
ಕರಶುದ್ಧಿಂ ಪ್ರಕುರ್ವೀತ ಮೂಲಮಂತ್ರೇಣ ಸಾಧಕಃ ॥ ೮ ॥
ಏಕೈಕಂ ಚೈವ ವರ್ಣಂ ತು ಅಂಗುಲೀಷು ಪೃಥಕ್ ಪೃಥಕ್ ।
ಓಂಕಾರಂ ಪೃಥಿವೀ ಶುಕ್ಲಂ ವಾಮಪಾದೇ ತು ವಿನ್ಯಸೇತ್ ॥ ೯ ॥

---

ತ್ತಿರುವ, ರಕ್ತವರ್ಣಯುಕ್ತನಾದ ಕ್ಷಕಾರ ಎಂದರೆ 'ಕ್ಷ' ಎಂಬ ವರ್ಣದೇವತೆಯನ್ನು 'ರ' ಎಂಬ ವರ್ಣಸಹಿತವಾಗಿ ಹೃದಯದಲ್ಲಿ ಚಿಂತಿಸಬೇಕು. ಚಂದ್ರಮಂಡಲ ಮಧ್ಯದಲ್ಲಿರುವ, ಬಿಳುಪಾಗಿರುವ, ಭೂಮಂಡಲವನ್ನು ಅಮೃತವೃಷ್ಟಿಯಿಂದ ಮುಳುಗಿಸಿರುವ 'ಏ' ಎಂಬ ವರ್ಣದೇವತೆಯನ್ನು ಶಿರಸ್ಸಿನಲ್ಲಿ ಚಿಂತಿಸಬೇಕು. ಈರೀತಿಯಾಗಿ ಪಾಪಗಳನ್ನು ಕಳೆದುಕೊಂಡ ಬಳಿಕ ಅವನು ದಿವ್ಯದೇಹವುಳ್ಳವನಾಗುವನು.

೭. ತರುವಾಯ ಜ್ಞಾನಿಯು ಅಷ್ಟಾಕ್ಷರ ಮಂತ್ರವನ್ನು ದೇಹ ಮತ್ತು ಅಂತರ್ಗತನಾದ ಆತ್ಮನಲ್ಲಿ ನ್ಯಾಸಮಾಡಬೇಕು :—ಎಡಗಾಲಿನಿಂದ ಪ್ರಾರಂಭಿಸಿ ಕ್ರಮವಾಗಿ ನ್ಯಾಸಮಾಡಬೇಕು.

೮. ಸಾಧಕನು ವಿಷ್ಣುವಿನ ಪಂಚಾಂಗಗಳನ್ನೂ, ಚತುರ್ವ್ಯೂಹ ರೂಪಗಳನ್ನೂ ಕ್ರಮವಾಗಿ ನ್ಯಾಸಮಾಡಬೇಕು. ಮೂಲಮಂತ್ರದಿಂದ ಕರಶುದ್ಧಿ ಮಾಡಿಕೊಳ್ಳಬೇಕು.

೯. ಬೆರಳುಗಳಲ್ಲಿ ಒಂದೊಂದರಲ್ಲಿ ಒಂದೊಂದು ವರ್ಣದಂತೆ ಎಂಟು ವರ್ಣಗಳನ್ನೂ ಪ್ರತ್ಯೇಕವಾಗಿ ನ್ಯಾಸಮಾಡಬೇಕು. ಪೃಥಿವೀಶುಕ್ಲವಾದ ಓಂಕಾರವನ್ನು ಎಡಗಾಲಿನಲ್ಲಿ ನ್ಯಾಸಮಾಡಬೇಕು.

ನಕಾರಸ್ತು ಭುವಃ ಶ್ಯಾಮೋ ದಕ್ಷಿಣೇ ತು ವ್ಯವಸ್ಥಿತಃ ।
ಮೋಕಾರಂ ಕಾಲಮೇವಾಹುರ್ವಾಮಕಟ್ಯಾಂ ನಿಧಾಪಯೇತ್ ॥ ೧೦ ॥

ನಾಕಾರಂ ಪೂರ್ವಬೀಜಂ ತು ದಕ್ಷಿಣಸ್ಯಾಂ ವ್ಯವಸ್ಥಿತಂ ।
ರಾಕಾರಸ್ತೇಜ ಇತ್ಯಾಹುರ್ನಾಭಿದೇಹೇ ವ್ಯವಸ್ಥಿತಃ ॥ ೧೧ ॥

ವಾಯುರ್ವ್ಯೋಯಂ ಯಕಾರಸ್ತು ವಾಮಸ್ಕಂಧೇ ಸಮಾಶ್ರಿತಃ ।
ಣಾಕಾರಸ್ಸರ್ವದಾ ಜ್ಞೇಯೋ ದಕ್ಷಿಣಾಂಸೇ ವ್ಯವಸ್ಥಿತಃ ॥ ೧೨ ॥

ಯಕಾರೋಯಂ ಶಿರಸ್ಥಶ್ಚ ಯತ್ರ ಲೋಕಾ ವ್ಯವಸ್ಥಿತಾಃ ।
ಓಂಕಾರಂ ಹೃದಯೇ ನ್ಯಸ್ಯ ವಿಕಾರಂ ವಾ ಶಿರಸ್ಯಥ ॥ ೧೩ ॥

ಷ್ಣಕಾರಂ ವೈ ಶಿಖಾಯಾಂ ತು ವೇಕಾರಂ ಕವಚೇ ನ್ಯಸೇತ್ ।
ನಕಾರಂ ನೇತ್ರಯೋಸ್ತು ಸ್ಯಾನ್ಮಕಾರಂ ಚಾಸ್ತ್ರನಿರೂಪಿತಂ ॥ ೧೪ ॥

---

೧೦. ನಕಾರವು ಶ್ಯಾಮವರ್ಣವುಳ್ಳದು. ಅದು ಬಲಗಾಲಿನಲ್ಲಿ ವ್ಯವಸ್ಥಿತವಾಗಿದೆ. ಮೋಕಾರವನ್ನು ಕಾಲವೆಂದು ಹೇಳುವರು. ಅದನ್ನು ಎಡನಡುವಿನಲ್ಲಿ ನ್ಯಾಸಮಾಡಬೇಕು.

೧೧. ನಾಕಾರವು ಪೂರ್ವಬೀಜವು. ಅದು ದಕ್ಷಿಣದಿಕ್ಕಿನಲ್ಲಿ ವ್ಯವಸ್ಥಿತವಾಗಿದೆ. ರಾಕಾರವನ್ನು ತೇಜಸ್ಸೆನ್ನುವರು. ಅದು ನಾಭಿಪ್ರದೇಶದಲ್ಲಿ ವ್ಯವಸ್ಥಿತವಾಗಿದೆ.

೧೨. ಯಕಾರವು ವಾಯುವ್ಯವು. ಅದು ಎಡಭುಜದಲ್ಲಿದೆ ಣಾಕಾರವು ಯಾವಾಗಲೂ ಬಲಭುಜದಲ್ಲಿರುವುದೆಂದು ತಿಳಿಯಬೇಕು.

೧೩-೧೪. ಯಕಾರವು ಲೋಕಗಳಿಗೆಲ್ಲಾ ಆಶ್ರಯವಾದ ಶಿರಸ್ಸಿನಲ್ಲಿದೆ. ಓಂಕಾರವನ್ನು ಅಥವಾ ವಿಕಾರವನ್ನು ಹೃದಯದಲ್ಲಿ ನ್ಯಾಸಮಾಡಿ ಬಳಿಕ ಷ್ಣಕಾರವನ್ನು ಶಿಖೆಯಲ್ಲಿಯೂ, ವೇಕಾರವನ್ನು ಕವಚದಲ್ಲಿಯೂ, ನೇತ್ರಗಳಲ್ಲಿ ನಕಾರವನ್ನೂ, ಮಕಾರವನ್ನು ಅಸ್ತ್ರವಾಗಿಯೂ ನ್ಯಾಸಮಾಡಬೇಕು.

ಲಲಾಟೇ ವಾಸುದೇವಸ್ತು ಶುಕ್ಲವರ್ಣಸ್ಸಮಾಸ್ಥಿತಃ ।
ರಕ್ತಸ್ಸಂಕರ್ಷಣಶ್ಚೈವ ಮುಖೇ ವಹ್ನ್ಯರ್ಕಸನ್ನಿಭಃ ॥ ၇೫ ॥

ಪ್ರದ್ಯುಮ್ನೋ ಹೃದಯೇ ಪೀತೋಽನಿರುದ್ಧೋ ಮೇಹನೇ ಸ್ಥಿತಃ ।
ಸರ್ವಾಂಗೇ ಸರ್ವಶಕ್ತಿಶ್ಚ ಚತುರ್ವ್ಯೂಹಾರ್ಚಿತೋ ಹರಿಃ ॥ ೧೬ ॥

ಮುಖಾಗ್ರೇಽವಸ್ಥಿತೋ ವಿಷ್ಣುಃ ಪೃಷ್ಠತಶ್ಚಾಪಿ ಕೇಶವಃ ।
ಗೋವಿಂದೋ ದಕ್ಷಿಣೇ ಪಾರ್ಶ್ವೇ ವಾಮೇ ತು ಮಧುಸೂದನಃ ॥ ೧೭ ॥

ಉಪರಿಷ್ಟಾತ್ತು ವೈಕುಂಠೋ ವಾರಾಹಃ ಪೃಥಿವೀತಲಂ ।
ಅವಾಂತರದಿಶೋ ಯಾಸ್ತು ತಾಸು ಸರ್ವಾಸು ಮಾಧವಃ ॥ ೧೮ ॥

ಗಚ್ಛತಸ್ತಿಷ್ಠತೋ ವಾಪಿ ಜಾಗ್ರತಃ ಸ್ವಪತೋಽಪಿ ವಾ ।
ನರಸಿಂಹಕೃತಾ ಗುಪ್ತಿರ್ವಾಸುದೇವಮಯೋ ಹ್ಯಹಂ ॥ ೧೯ ॥

---

೧೫-೧೬. ಹಣೆಯಲ್ಲಿ ಶುಕ್ಲರೂಪಿಯಾದ ವಾಸುದೇವನೂ, ಕೆಂಪಾಗಿರುವ ಸಂಕರ್ಷಣಮೂರ್ತಿಯು ಮುಖದಲ್ಲಿಯೂ, ಅಗ್ನಿಸೂರ್ಯರಂತೆ ಹೊಳೆಯುತ್ತಿರುವ ಪ್ರದ್ಯುಮ್ನನು ಹೃದಯದಲ್ಲಿಯೂ, ಹಳದಿಬಣ್ಣದ ಅನಿರುದ್ಧನು ಮೇಹನದಲ್ಲಿಯೂ ಹೀಗೆ ಸರ್ವಾಂಗಗಳಲ್ಲಿಯೂ ಸರ್ವಶಕ್ತನಾದ ಹರಿಯು ವಾಸುದೇವಾದಿ ಚತುರ್ವ್ಯೂಹನಾಗಿರುವನು.

೧೭-೧೮. ನನ್ನ ಮುಂದೆ ವಿಷ್ಣುವೂ, ಹಿಂದೆ ಕೇಶವನೂ, ಬಲಪಾರ್ಶ್ವದಲ್ಲಿ ಗೋವಿಂದನೂ, ಎಡಪಾರ್ಶ್ವದಲ್ಲಿ ಮಧುಸೂದನನೂ, ಮೇಲ್ಭಾಗದಲ್ಲಿ ವೈಕುಂಠನೂ, ಪೃಥಿವೀತಲದಲ್ಲಿ ವರಾಹನೂ, ಅವಾಂತರ ದಿಕ್ಕುಗಳಲ್ಲೆಲ್ಲಾ ಮಾಧವನೂ ಇರುವನು.

೧೯. ಸಂಚರಿಸುವಾಗ, ನಿಂತಿರುವಾಗ, ಎದ್ದಿರುವಾಗ, ಮಲಗಿರುವಾಗ, ಹೀಗೆ ಸರ್ವಾವಸ್ಥೆಗಳಲ್ಲಿಯೂ ನಾನು ನರಸಿಂಹನಿಂದಲೇ ರಕ್ಷಣೆಯನ್ನು ಪಡೆದು ವಾಸುದೇವಮಯನಾಗಿರುವೆನು.

ಏವಂ ವಿಷ್ಣುಮಯೋ ಭೂತ್ವಾ ತತಃ ಕರ್ಮ ಸಮಾರಭೇತ್ ।
ಯಥಾ ದೇಹೇ ತಥಾ ದೇವೇ ಸರ್ವತತ್ವಾನಿ ಯೋಜಯೇತ್ ॥ ೨೦ ॥

ಣಕಾರಾಂತಂ ಸಮುದ್ದಿಷ್ಟಂ ಸರ್ವವಿಘ್ನಹರಂ ಶುಭಂ ।
ತತ್ರಾರ್ಕಚಂದ್ರವಹ್ನೀನಾಂ ಮಂಡಲಾನಿ ವಿಚಿಂತಯೇತ್ ॥ ೨೧ ॥

ಪದ್ಮಮಧ್ಯೇ ನ್ಯಸೇದ್ವಿಷ್ಣುಂ ಭುವನಸ್ಯಾಂತರಸ್ಯ ತು ।
ತತೋ ವಿಚಿಂತ್ಯ ಹೃದಯೇ ಪ್ರಣವಂ ಜ್ಯೋತಿರುತ್ತಮಂ ॥ ೨೨ ॥

ಕರ್ಣಿಕಾಯಾಂ ಸಮಾಸೀನಂ ಜ್ಯೋತೀರೂಪಂ ಸನಾತನಂ ।
ಅಷ್ಟಾಕ್ಷರಂ ತತೋ ಮಂತ್ರಂ ನ್ಯಸೇಚ್ಚೈವ ಯಥಾಕ್ರಮಂ ॥ ೨೩ ॥

ತೇನ ವ್ಯಸ್ತಸಮಸ್ತೇನ ಪೂಜನಂ ಪರಮಂ ಸ್ಮೃತಂ ।
ದ್ವಾದಶಾಕ್ಷರಮಂತ್ರೇಣ ಯಜೇದ್ದೇವಂ ಸನಾತನಂ ॥ ೨೪ ॥

---

೨೦. ಈರೀತಿಯಾಗಿ ವಿಷ್ಣುಮಯನಾಗಿ ಅನಂತರ ಕರ್ಮವನ್ನಾರಂಭಿಸಬೇಕು. ದೇಹದಲ್ಲಿ ಅನುಸಂಧ್ಯಾನಮಾಡಿದಂತೆ ದೇವನಲ್ಲಿಯೂ ಸಕಲತತ್ವಗಳನ್ನೂ ನ್ಯಾಸಮಾಡಬೇಕು.

೨೧. ಣಕಾರಾಂತ ತತ್ವವು ಮಂಗಳಕರ ಮತ್ತು ಸಕಲ ಪಾಪನಾಶಕ ಎಂಬುದಾಗಿ ಉಕ್ತವಾಗಿದೆ. ಅದರಲ್ಲಿ ಸೂರ್ಯ, ಚಂದ್ರ ಮತ್ತು ಅಗ್ನಿಗಳ ಮಂಡಲಗಳನ್ನು ಚಿಂತಿಸಬೇಕು.

೨೨-೨೩. ಲೋಕಾಂತರದಲ್ಲಿನ ಪದ್ಮಮಧ್ಯದಲ್ಲಿ ವಿಷ್ಣುವನ್ನು ನ್ಯಾಸಮಾಡಬೇಕು. ಅನಂತರ ಕೋಶದಲ್ಲಿ ಸನ್ನಿಹಿತವಾಗಿರುವ, ಜ್ಯೋತಿಸ್ಸ್ವರೂಪವು, ಸನಾತನವು, ಉತ್ತಮವೂ ಆದ ಪ್ರಣವವೆಂಬ ಜ್ಯೋತಿಸ್ಸನ್ನು ಹೃದಯದಲ್ಲಿ ಚಿಂತಿಸಿ ಕ್ರಮವಾಗಿ ಅಷ್ಟಾಕ್ಷರ ಮಂತ್ರವನ್ನು ನ್ಯಾಸಮಾಡಬೇಕು.

೨೪. ಈರೀತಿ ವಿಸ್ತಾರ ಸಂಕ್ಷೇಪವಿಧಾನದಿಂದ ಪೂಜೆಯು ಉತ್ಕೃಷ್ಟವಾದುದೆಂದು ವಿಹಿತವಾಗಿದೆ. ದ್ವಾದಶಾಕ್ಷರ ಮಂತ್ರದಿಂದಲೂ, ಸನಾತನದೇವನನ್ನು ಆರಾಧಿಸಬೇಕು.

ತತೋವಧಾರ್ಯ ಹೃದಯೇ ಕರ್ಣಿಕಾಯಾಂ ಬಹಿರ್ನ್ಯಸೇತ್ |
ಚತುರ್ಭುಜಂ ಮಹಾಸತ್ವಂ ಸೂರ್ಯಕೋಟಿಸಮಪ್ರಭಂ || ೨೫ ||

ಚಿಂತಯಿತ್ವಾ ಮಹಾಯೋಗಂ ತತಶ್ಚಾವಾಹಯೇತ್ಕ್ರಮಾತ್ |
ಮೀನರೂಪಾವಹಶ್ಚೈವ ನರಸಿಂಹಶ್ಚ ವಾಮನಃ || ೨೬ ||

ಆಯಾಂತು ದೇವಾ ವರದಾ ಮಮ ನಾರಾಯಣೋಽಗ್ರತಃ |
ಸುಮೇರುಃ ಪಾದಪೀಠಂ ತೇ ಪದ್ಮಕಲ್ಪಿತಮಾಸನಂ || ೨೭ ||

ಸರ್ವತತ್ವಹಿತಾರ್ಥಾಯ ತಿಷ್ಠ ತ್ವಂ ಮಧುಸೂದನ |
ಪಾದ್ಯಂ ತೇ ಪಾದಯೋರ್ದೇವ ಪದ್ಮನಾಭ ಸನಾತನ || ೨೮ ||

ವಿಷ್ಣೋ ಕಮಲಪತ್ರಾಕ್ಷ ಗೃಹಾಣ ಮಧುಸೂದನ |
ಮಧುಪರ್ಕಂ ಮಹಾದೇವ ಬ್ರಹ್ಮಾದ್ಯೈಃ ಕಲ್ಪಿತಂ ಮಯಾ || ೨೯ ||

---

೨೫. ತರುವಾಯ ಚತುರ್ಭುಜನು, ಮಹಾಬಲಶಾಲಿಯು, ಕೋಟಿ ಸೂರ್ಯರಿಗೆ ಸಮಾನವಾದ ತೇಜಸ್ಸುಳ್ಳವನೂ ಆದ ವಿಷ್ಣುವನ್ನು ಹೃದಯಕೋಶದಲ್ಲಿ ಧರಿಸಿ ಬಹಿರ್ನ್ಯಾಸಮಾಡಬೇಕು.

೨೬-೨೭. ಮಹಾಯೋಗವನ್ನು ಚಿಂತಿಸಿದಮೇಲೆ ಕ್ರಮವಾಗಿ ಆವಾಹನೆ ಮಾಡಬೇಕು :—"ಮೀನರೂಪವನ್ನು ಧರಿಸಿದದೇವ, ನರಸಿಂಹ, ವಾಮನ, ನಾರಾಯಣ ಈ ದೇವತೆಗಳು ನನಗೆ ಸಾಕ್ಷಾತ್ತಾಗಿ ವರಪ್ರದರಾಗಿ ಬರಲಿ" ಎಂಬುದಾಗಿ ಆವಾಹನೆಮಾಡಬೇಕು. ಸುಮೇರುವಿನ ಪಾದಪೀಠವೇ ನಿನಗೆ ಪದ್ಮಕಲ್ಪಿತವಾದ ಆಸನವು.

೨೮. ಮಧುಸೂದನನೇ! ಸಕಲಪ್ರಾಣಿಗಳ ಹಿತಕ್ಕಾಗಿ ನೀನು ಇಲ್ಲಿ ಸನ್ನಿಹಿತನಾಗು! ಸನಾತನನಾದ ಪದ್ಮನಾಭದೇವನೇ! ನಿನ್ನ ಪಾದಗಳಿಗೆ ಪಾದ್ಯವನ್ನರ್ಪಿಸುವೆನು!

೨೯. ಕಮಲಪತ್ರದಂತೆ ನೇತ್ರಗಳುಳ್ಳ, ಮಧುವೆಂಬ ದೈತ್ಯಸಂಹಾರಕನಾದ, ಮಹಾದೇವನಾದ ವಿಷ್ಣುವೇ! ಬ್ರಹ್ಮಾದಿದೇವತೆಗಳಿಂದ ರಚಿತವಾದ ಮಧುಪರ್ಕವನ್ನು ಸಮರ್ಪಿಸಿರುವೆನು; ಅದನ್ನು ಸ್ವೀಕರಿಸು!

ನಿವೇದಿತಂ ಚ ಭಕ್ತ್ಯಾರ್ಘ್ಯಂ ಗೃಹಾಣ ಪುರುಷೋತ್ತಮ ।
ಮಂದಾಕಿನ್ಯಾಸ್ತತೋ ವಾರಿ ಸರ್ವಪಾಪಹರಂ ಶಿವಂ ॥ ೩೦ ॥

ಗೃಹಾಣಾಚಮನೀಯಂ ತ್ವಂ ಮಹಾಭಕ್ತ್ಯಾ ನಿವೇದಿತಂ ।
ತ್ವಮಾಪಃ ಪೃಥಿವೀ ಚೈವ ಜ್ಯೋತಿಸ್ತ್ವಂ ವಾಯುರೇವ ಚ ॥ ೩೧ ॥

ಲೋಕಸಂಧೃತಿಮಾತ್ರೇಣ ವಾರಿಣಾ ಸ್ನಾಪಯಾಮ್ಯಹಂ ।
ದೇವ ತತ್ತ್ವಸಮಾಯುಕ್ತೇ ಯಜ್ಞವರ್ಣಸಮನ್ವಿತೇ ॥ ೩೨ ॥

ಸ್ವರ್ಣವರ್ಣಪ್ರಭೇ ದೇವ ವಾಸಸೀ ಪ್ರತಿಗೃಹ್ಯತಾಂ ।
ಶರೀರಂ ಚ ನ ಜಾನಾಮಿ ಚೇಷ್ಟಾಂ ಚ ತವ ಕೇಶವ ॥ ೩೩ ॥

ಮಯಾ ನಿವೇದಿತಂ ಗಂಧಂ ಪ್ರತಿಗೃಹ್ಯ ವಿಲಿಪ್ಯತಾಂ ।
ಋಗ್ಯಜುಃಸಾಮಮಂತ್ರೇಣ ತ್ರಿವೃತಂ ಪದ್ಮಯೋನಿನಾ ॥ ೩೪ ॥

---

೩೦-೩೧. ಪುರುಷೋತ್ತಮನೇ! ಭಕ್ತಿಯಿಂದ ಅರ್ಘ್ಯಯನ್ನರ್ಪಿಸುವೆನು ; ಅದನ್ನು ಸ್ವೀಕರಿಸು! ಅನಂತರ ಸಕಲಪಾಪನಾಶಕವಾದ ಗಂಗೋದಕದಿಂದ ಆಚಮನೀಯವನ್ನು ಮಹಾಭಕ್ತಿಪುರಸ್ಸರವಾಗಿ ಕೊಡುವೆನು. ಅದನ್ನೂ ಸ್ವೀಕರಿಸು! ದೇವ! ನೀನೇ ಜಲ, ಪೃಥುವಿ, ತೇಜಸ್ಸು ಮತ್ತು ವಾಯುವು ಎಂದರೆ ಜಲಾದಿಭೂತ ಚತುಷ್ಟಯವೂ ನಿನ್ನಿಂದಬೇರೆ ಸ್ಪಷ್ಟವಾಗಿ ಲಕ್ಷಿತವಾಗುತ್ತಲಿದೆ. ಎಲ್ಲಾವಸ್ತುಗಳಲ್ಲಿಯೂ ನೀನೇ ಅಂತರ್ಗತನಾಗಿರುವೆಯೆಂದು ಭಾವ.

೩೨-೩೩. ಸ್ವಾಮಿಾ! ಲೋಕಧಾರಕವಾದ ಜಲದಿಂದ ನಿನಗೆ ಅಭಿಷೇಕ ಮಾಡುವೆನು. ದೇವಾ! ತತ್ತ್ವಸಮಾಯುಕ್ತವಾದ, ಯಜ್ಞವರ್ಣದಿಂದ ಕೂಡಿರುವ, ಬಂಗಾರದಬಣ್ಣದಂತೆ ಕಾಂತಿಯುಳ್ಳ, ಈ ಎರಡುವಸ್ತ್ರಗಳನ್ನೂ ಸ್ವೀಕರಿಸೋಣವಾಗಲಿ! ಕೇಶವಾ! ನಾನು ನಿನ್ನ ಶರೀರವನ್ನು ಮತ್ತು ಚೇಷ್ಟೆಯನ್ನೂ ಸಹ ಅರಿಯೆನು.

೩೪-೩೫. ಮಾಧವನೇ! ನಾನು ಅರ್ಪಿಸಿದ ಗಂಧವನ್ನು ಸ್ವೀಕರಿಸಿ ಲೇಪನ ಮಾಡಿಕೊಳ್ಳಬೇಕು! ಬ್ರಹ್ಮನು, ಋಕ್ಕು, ಯಜುರ್ವೇದ, ಸಾಮ

ಸಾವಿತ್ರೀ ಗ್ರಂಥಿಸಂಯುಕ್ತಮುಪವೀತಂ ತವಾರ್ಪ್ಯತೇ ।
ದಿವ್ಯರತ್ನಸಮಾಯುಕ್ತಾ ವಹ್ನಿಭಾನುಸಮಪ್ರಭಾಃ ॥ ೩೫ ॥

ಗಾತ್ರಾಣಿ ಶೋಭಯಿಷ್ಯಂತಿ ಅಲಂಕಾರಾಸ್ತು ಮಾಧವ ।
ಸೂರ್ಯಚಂದ್ರಮಸೋರ್ಜ್ಯೋತಿರ್ವಿದ್ಯುದಗ್ನ್ಯೋಸ್ತಥೈವ ಚ ॥ ೩೬ ॥

ತ್ವಮೇವ ಜ್ಯೋತಿಷಾಂ ದೇವ ದೀಪೋಯಂ ಪ್ರತಿಗೃಹ್ಯತಾಂ ।
ವನಸ್ಪತಿರಸೋ ದಿವ್ಯೋ ಗಂಧಾಢ್ಯಃ ಸುರಭಿಶ್ಚ ತೇ ॥ ೩೭ ॥

ಮಯಾ ನಿವೇದಿತೋ ಭಕ್ತ್ಯಾ ಧೂಪೋಯಂ ಪ್ರತಿಗೃಹ್ಯತಾಂ ।
ಅನ್ನಂ ಚತುರ್ವಿಧಂ ಸ್ವಾದು ರಸೈಃ ಷಡ್ಭಿಃ ಸಮನ್ವಿತಂ ॥ ೩೮ ॥

ಮಯಾ ನಿವೇದಿತಂ ಭಕ್ತ್ಯಾ ನೈವೇದ್ಯಂ ತವ ಕೇಶವ ।
ಪೂರ್ವೇ ದಲೇ ವಾಸುದೇವಂ ಯಾಮ್ಯೇ ಸಂಕರ್ಷಣಂ ನ್ಯಸೇತ್ ॥ ೩೯ ॥

---

ವೇದ ಇವುಗಳ ಮಂತ್ರದಿಂದ ಮೂರು ಎಳೆಗಳನ್ನು ಜೋಡಿಸಿ ಮಾಡಿರುವ, ಸಾವಿತ್ರೀಗ್ರಂಥಿ ಸಂಯುಕ್ತವಾದ ಯಜ್ಞೋಪವೀತವನ್ನು ನಿನಗೆ ಸಮರ್ಪಿಸುವೆನು !

೩೫-೩೭. ಲಕ್ಷ್ಮೀಪತಿಯೇ ! ಮನೋಹರ ರತ್ನಗಳಿಂದ ಕೂಡಿದ ಅಗ್ನಿ ಸೂರ್ಯರಂತೆ ಹೊಳೆಯುತ್ತಿರುವ ಆಭರಣಗಳು, ಶರೀರಗಳನ್ನು ಬೆಳಗುತ್ತವೆ. ಸೂರ್ಯ, ಚಂದ್ರ, ಮಿಂಚು, ಅಗ್ನಿ ಮುಂತಾದ ತೇಜಸ್ಸುಗಳಿಗೆಲ್ಲಾ ಪ್ರಕಾಶಶಕ್ತಿ ಪ್ರದನಾದ ದೇವಾ ! ಈ ದೀಪವನ್ನು ಸ್ವೀಕರಿಸು !

೩೭-೩೮. ವನಸ್ಪತಿ ರಸಯುಕ್ತವು, ಮನೋಹರವು, ಸುವಾಸನೆ ಯುಕ್ತವೂ ಆಗಿರುವ ಈ ಧೂಪವನ್ನು ನಾನು ಭಕ್ತಿಯಿಂದ ಅರ್ಪಿಸುವೆನು. ದೇವಾ! ಇದನ್ನು ಸ್ವೀಕರಿಸು !

೩೮-೩೯. ಆರು ರಸಗಳಿಂದ ಯುಕ್ತವು, ರುಚಿಕರವೂ ಆಗಿರುವ, ನಾಲ್ಕು ವಿಧವಾದ ಅನ್ನವನ್ನು ಭಕ್ತಿಯಿಂದ ನಿವೇದಿಸುತ್ತೇನೆ. ಕೇಶವಾ ! ಈ ನೈವೇದ್ಯ ವನ್ನು ಸ್ವೀಕರಿಸು !

ಪ್ರದ್ಯುಮ್ನಂ ಪಶ್ಚಿಮೇ ಕುರ್ಯಾದನಿರುದ್ಧಂ ತಥೋತ್ತರೇ ।
ವಾರಾಹಂ ಚ ತಥಾಗ್ನೇಯೇ ನರಸಿಂಹಂ ಚ ನೈರ್‌ಋತೇ ॥ ೪೦ ॥

ವಾಯವ್ಯಾಂ ಮಾಧವಂ ಚೈವ ತಥೈಶಾನೇ ತ್ರಿವಿಕ್ರಮಂ ।
ಯಥಾಷ್ಟಾಕ್ಷರದೇವಸ್ಯ ಗರುಡಂ ಪುರತೋ ನ್ಯಸೇತ್ ॥ ೪೧ ॥

ವಾಮಪಾರ್ಶ್ವೇ ತಥಾ ಚಕ್ರಂ ಶಂಖಂ ದಕ್ಷಿಣತೋ ನ್ಯಸೇತ್ ।
ತಥಾ ಮಹಾಗದಾಂ ಚೈವ ನ್ಯಸೇದ್ದೇವಸ್ಯ ದಕ್ಷಿಣೇ ॥ ೪೨ ॥

ತತಃ ಶಾರ್ಙ್ಗಧನುರ್ವಿದ್ಯಾಂ ನ್ಯಸೇದ್ದೇವಸ್ಯ ವಾಮತಃ ।
ದಕ್ಷಿಣೇ ಚೇಷುಧೀ ದಿವ್ಯೇ ಖಡ್ಗಂ ವಾಮೇ ಚ ವಿನ್ಯಸೇತ್ ॥ ೪೩ ॥

ಶ್ರಿಯಂ ದಕ್ಷಿಣತಃ ಸ್ಥಾಪ್ಯ ಪುಷ್ಟಿಮುತ್ತರತೋ ನ್ಯಸೇತ್ ।
ವನಮಾಲಾಂ ಚ ಪುರತಸ್ತತ್ರ ಶ್ರೀವತ್ಸಕೌಸ್ತುಭೌ ॥ ೪೪ ॥

ವಿನ್ಯಸೇದ್ಧೃದಯಾದೀನಿ ಪೂರ್ವಾದಿಷು ಚತುರ್ಷ್ವಪಿ ।
ತತೋಽಸ್ತ್ರಂ ದೇವದೇವಸ್ಯ ಕೋಣೇ ಚೈವ ತು ವಿನ್ಯಸೇತ್ ॥ ೪೫ ॥

---

೩೯-೪೧. ಪೂರ್ವಭಾಗದಲ್ಲಿ ವಾಸುದೇವ, ದಕ್ಷಿಣದಿಕ್ಕಿನಲ್ಲಿ ಸಂಕರ್ಷಣ, ಪಶ್ಚಿಮದಲ್ಲಿ ಪ್ರದ್ಯುಮ್ನ, ಉತ್ತರದಲ್ಲಿ ಅನಿರುದ್ಧ, ಆಗ್ನೇಯ ಮೂಲೆಯಲ್ಲಿ ವರಾಹ, ನೈಋತ್ಯದಲ್ಲಿ ನರಸಿಂಹ, ವಾಯುವ್ಯದಲ್ಲಿ ಮಾಧವ, ಈಶಾನ್ಯದಲ್ಲಿ ತ್ರಿವಿಕ್ರಮ ಈರೀತಿಯಾಗಿ ದೇವತೆಗಳನ್ನು ನ್ಯಾಸಮಾಡಬೇಕು. ಹಾಗೆಯೇ ಅಷ್ಟಾಕ್ಷರದೇವನಿಗೆ ಸುತ್ತಲೂ ಗರುಡನನ್ನು ನ್ಯಾಸಮಾಡಬೇಕು.

೪೨. ಆ ದೇವನ ಎಡಭಾಗದಲ್ಲಿ ಚಕ್ರ, ಬಲಭಾಗದಲ್ಲಿ ಶಂಖ, ಮಹಾಗದೆ ಇವುಗಳನ್ನೂ ನ್ಯಾಸಮಾಡಬೇಕು.

೪೩. ಅನಂತರ ಅಷ್ಟಾಕ್ಷರದೇವನ ಎಡಭಾಗದಲ್ಲಿ, ಶಾರ್ಙ್ಗಧನುಸ್ಸು, ವಿದ್ಯೆ ಇವುಗಳನ್ನೂ, ಬಲದಲ್ಲಿ ದಿವ್ಯವಾದ ಎರಡು ಬತ್ತಳಿಕೆಗಳನ್ನೂ, ಎಡದಲ್ಲಿ ಖಡ್ಗವನ್ನೂ ಸಹ ವಿನ್ಯಾಸಮಾಡಬೇಕು.

೪೪ ಬಲಭಾಗದಲ್ಲಿ ಶ್ರೀದೇವಿಯನ್ನು ಸ್ಥಾಪಿಸಿ, ಉತ್ತರದಲ್ಲಿ ಪುಷ್ಟಿ, ಮುಂದೆ ವನಮಾಲೆ, ಅಲ್ಲಿ ಶ್ರೀವತ್ಸ ಕೌಸ್ತುಭಗಳು ಇವನ್ನು ನ್ಯಾಸಮಾಡಬೇಕು.

೪೫. ಪೂರ್ವಮುಂತಾದ ನಾಲ್ಕು ದಿಕ್ಕುಗಳಲ್ಲಿ ಹೃದಯಾದಿಗಳನ್ನು ನ್ಯಾಸಮಾಡಬೇಕು. ಬಳಿಕ ದೇವದೇವನ ಆಗ್ನೇಯಾದಿ ವಿದಿಕ್ಕುಗಳಲ್ಲಿ ಅಸ್ತ್ರವನ್ನು ನ್ಯಾಸಮಾಡಬೇಕು.

ಇಂದ್ರಮಗ್ನಿಂ ಯಮಂ ಚೈವ ನಿರ್ಋತಿಂ ವರುಣಂ ತಥಾ ।
ವಾಯುಂ ಧನದಮೀಶಾನಮನಂತಂ ಬ್ರಹ್ಮಣಾ ಸಹ ॥ ೪೬ ॥

ಪೂಜಯೇತ್ತಾನ್ ಸ್ವಕೈರ್ಮಂತ್ರೈರಧಶ್ಚೋರ್ಧ್ವಂ ತಥೈವ ಚ ।
ಏವಂ ಸಂಪೂಜ್ಯ ದೇವೇಶಂ ಮಂಡಲಸ್ಥಂ ಜನಾರ್ದನಂ ॥ ೪೭ ॥

ಲಭೇದಭಿಮತಾನ್ ಕಾಮಾನ್ ನರೋ ನಾಸ್ತ್ಯತ್ರ ಸಂಶಯಃ ।
ಅನೇನೈವ ವಿಧಾನೇನ ಮಂಡಲಸ್ಥಂ ಜನಾರ್ದನಂ ॥ ೪೮ ॥

ಪೂಜಿತಂ ಯಸ್ತು ಪಶ್ಯೇತ್ತು ಸವಿಶೇದ್ವಿಷ್ಣುಮವ್ಯಯಂ ।
ಸಕೃದಸ್ಯರ್ಚಿತೋ ಯೇನ ವಿಧಿನಾನೇನ ಕೇಶವಃ ॥ ೪೯ ॥

ಜನ್ಮಮೃತ್ಯುಜರಾಸ್ತೀತ್ವಾ ವಿಷ್ಣೋಃ ಪದಮವಾಪ್ನುಯಾತ್ ।
ಯಃ ಸ್ಮರೇತ್ ಸತತಂ ಭಕ್ತ್ಯಾ ನಾರಾಯಣಮತಂದ್ರಿತಃ ॥ ೫೦ ॥

---

೪೬-೪೮. ಇಂದ್ರ, ಅಗ್ನಿ, ಯಮ, ನಿರ್ಋತಿ, ವರುಣ, ವಾಯು, ಕುಬೇರ, ಈಶಾನ ಎಂಬ ದಿಗ್ದೇವತೆಗಳನ್ನೂ, ಬ್ರಹ್ಮನಸಹಿತವಾಗಿ, ಅವರವರ ಮಂತ್ರದಿಂದ ಅಧೋಭಾಗ ಮತ್ತು ಊರ್ಧ್ವಭಾಗಗಳಲ್ಲಿಯೂ ಸಹ ಪೂಜಿಸಬೇಕು. ಈರೀತಿಯಾಗಿ ಮಂಡಲಸ್ಥಿತನಾದ ಜನಾರ್ದನ ದೇವೇಶನನ್ನು ಚೆನ್ನಾಗಿ ಪೂಜಿಸುವುದರಿಂದ ಮನುಷ್ಯನು ಇಷ್ಟಾರ್ಥಗಳನ್ನೆಲ್ಲಾ ಪಡೆಯುವನು. ಈ ವಿಷಯದಲ್ಲಿ ಸಂದೇಹವಿಲ್ಲ.

೪೮-೪೯. ಈ ವಿಧಾನದಿಂದ ಪೂಜೆಮಾಡಿದ, ಮಂಡಲಸ್ಥಿತನಾದ ಜನಾರ್ದನನನ್ನು ದರ್ಶನಮಾಡುವವನೂ ಸಹ ನಾಶರಹಿತನಾದ ವಿಷ್ಣುವನ್ನು ಹೊಂದುವನು.

೪೯-೫೦. ಈ ವಿದಾನದಿಂದ ಒಂತಾವರ್ತಿಯಾದರೂ ಕೇಶವನನ್ನು ಪೂಜಿಸುವವನು ಜನನ, ಮರಣ, ಮುಪ್ಪು ಇವುಗಳುಳ್ಳ ಸಂಸಾರವನ್ನು ದಾಟಿ ವಿಷ್ಣುಸ್ಥಾನವನ್ನು ಹೊಂದುವನು.

ಅನ್ವಪಂ ತಸ್ಯ ನಾಸಾಯ ಶ್ವೇತದ್ವಿಪಃ ಪ್ರಕೀರ್ತಿತಃ ।
ಓಂಕಾರಾದಿಸಮಾಯುಕ್ತಂ ನಮಸ್ಕಾರಂ ತದೀಯಕಂ ॥ ೫೧ ॥

ಸನಾಮ ಸರ್ವತತ್ತ್ವಾನಾಂ ಮಂತ್ರ ಇತ್ಯಭಿಧೀಯತೇ ।
ಅನೇನೈವ ವಿಧಾನೇನ ಗಂಧಪುಷ್ಪಂ ನಿವೇದಯೇತ್ ॥ ೫೨ ॥

ಏಕೈಕಸ್ಯ ಪ್ರಕುರ್ವೀತ ಯಥೋದ್ದಿಷ್ಟಂ ಕ್ರಮೇಣ ತು ।
ಮುದ್ರಾಸ್ತತೋ ನಿಬಧ್ನೀಯಾದ್ಯಥೋಕ್ತಿ ಕ್ರಮವೇದಿತಂ ॥ ೫೩ ॥

ಜಪಂ ಚೈವ ಪ್ರಕುರ್ವೀತ ಮೂಲಮಂತ್ರೇಣ ತತ್ತ್ವವಿತ್ ।
ಅಷ್ಟಾವಿಂಶತಿಮಷ್ಟೌ ವಾ ಶತಮಷ್ಟೋತ್ತರಂ ತಥಾ ॥ ೫೪ ॥

ಕಾಮ್ಯೇಷು ಚ ಯಥೋಕ್ತಂ ಸ್ಯಾದ್ಯಥಾಶಕ್ತಿ ಸಮಾಹಿತಃ ।
ಪದ್ಮಂ ಶ್ರೀವತ್ಸಶಂಖಂ ಚ ಗದಾಂ ಗರುಡಮೇವ ಚ ॥ ೫೫ ॥

---

೫೦-೫೧. ಯಾವಾಗಲೂ ಆಲಸ್ಯವಿಲ್ಲದೆ ಭಕ್ತಿಯಿಂದ ನಾರಾಯಣನನ್ನು ಸ್ಮರಿಸುವವನು ಶ್ವೇತದ್ವೀಪವಾಸಕ್ಕರ್ಹನೆಂದು ಉಕ್ತವಾಗಿದೆ.

೫೧-೫೨. ಓಂಕಾರ ಅನಂತರ "ನಮಃ" ಎಂಬಪದ, ಅದರಮುಂದೆ ಚತುರ್ಥ್ಯಂತವಾದ ಆಯಾಯ ದೇವತೆಗಳ ನಾಮಧೇಯ, ಇವುಗಳು ಸೇರಿ "ಓಂ ನಮೋ ನಾರಾಯಣಾಯ" ಇತ್ಯಾದಿ ರೂಪವಾದುದು ಮಂತ್ರವೆನಿಸುವುದು.

೫೨-೫೩. ಈ ವಿಧಾನದಿಂದಲೇ ಒಬ್ಬೊಬ್ಬ ದೇವತೆಗೂ ಹೇಳಿರುವ ಕ್ರಮದಿಂದ ಗಂಧಪುಷ್ಪಾದಿಗಳನ್ನು ಸಮರ್ಪಿಸಬೇಕು. ಅನಂತರ ವಿಧಾನದಲ್ಲಿ ಹೇಳಿರುವ ಪ್ರಕಾರವಾಗಿ ಮುದ್ರೆಗಳನ್ನು ವಿನ್ಯಾಸಮಾಡಿ ತೋರಿಸಬೇಕು.

೫೪. ತತ್ತ್ವಜ್ಞನು ಮೂಲಮಂತ್ರವನ್ನು ನೂರೆಂಟು ಅಥವಾ ಇಪ್ಪತ್ತೆಂಟು ಇಲ್ಲವೇ ಎಂಟಾವರ್ತಿಯಾದರೂ ಜಪಿಸಬೇಕು.

೫೫-೫೭. ಕಾಮ್ಯಗಳಲ್ಲಿ ಉಕ್ತಸಂಖ್ಯಾ ನಿಯಮವು. ಸಮಾಹಿತನು ತನ್ನ ಶಕ್ತಿಯಿದ್ದಷ್ಟು ಜಪಮಾಡಬೇಕು. ಪದ್ಮ, ಶ್ರೀವತ್ಸ, ಶಂಖ, ಗದಾ, ಗರುಡ,

ಚಕ್ರಂ ಖಡ್ಗಂ ಚ ಶಾರ್ಙ್ಗಂ ಚ ಅಷ್ಟೌ ಮುದ್ರಾಃ ಪ್ರಕೀರ್ತಿತಾಃ ।
ಗಚ್ಛ ಗಚ್ಛ ಪರಂ ಸ್ಥಾನಂ ಪುರಾಣಪುರುಷೋತ್ತಮ ॥ ೫೬ ॥

ಯನ್ನ ಬ್ರಹ್ಮಾದಯೋ ದೇವಾ ವಿಂದಂತಿ ಪರಮಂ ಪದಂ ॥ ೫೭ ॥

ಅರ್ಚನಂ ಯೇ ನ ಜಾನಂತಿ ಹರೇರ್ಮಂತ್ರೈರ್ಯಥೋದಿತಂ ।
ತೇ ತ್ವತ್ರ ಮೂಲಮಂತ್ರೇಣ ಪೂಜಯಂತ್ಯಚ್ಯುತಂ ಶುಭೇ ॥ ೫೮ ॥

ಇತಿ ಶ್ರೀನಾರದೀಯಮಹಾಪುರಾಣೋತ್ತರಭಾಗೇ
ವಸುಮೋಹಿನೀಸಂವಾದೇ ಪುರುಷೋತ್ತಮಮಾಹಾತ್ಮ್ಯೇ
ಸಪ್ತಪಂಚಾಶತ್ತಮೋಽಧ್ಯಾಯಃ

---

ಚಕ್ರ, ಖಡ್ಗ, ಶಾರ್ಙ್ಗ ಎಂಬುದಾಗಿ ಎಂಟು ಮುದ್ರೆಗಳು ಉಕ್ತವಾಗಿವೆ. ಕೊನೆಯಲ್ಲಿ "ಪುರಾಣಪುರುಷೋತ್ತಮ! ಬ್ರಹ್ಮಾದಿ ದೇವತೆಗಳೂ ಸಹ ತಿಳಿಯದಿರುವ ಪರಮಪದಕ್ಕೆ ದಯಮಾಡಿಸು" ಎಂಬುದಾಗಿ ವಿಸರ್ಜನೆ ಮಾಡಬೇಕು

೫೮. ಶುಭಳಾದ ಮೋಹಿನೀ! ಮಂತ್ರಗಳಿಂದ ಯಥೋಕ್ತವಾದ, ಹರಿಯ ಅರ್ಚನವಿಧಾನವನ್ನು ತಿಳಿಯದಿರುವವರು ಅಚ್ಯುತನನ್ನು ಮೂಲಮಂತ್ರದಿಂದ ಪೂಜಿಸುವರು.

ಇಂತು ಶ್ರೀನಾರದೀಯಪುರಾಣೋತ್ತರಭಾಗದಲ್ಲಿ ವಸುಮೋಹಿನೀ ಸಂವಾದ
ದೊಳು ಪುರುಷೋತ್ತಮ ಮಾಹಾತ್ಮ್ಯೆಯಲ್ಲಿ ಐವತ್ತೇಳನೆಯ
ಅಧ್ಯಾಯವು ಮುಗಿದುದು.



# ಅಷ್ಟಪಂಚಾಶತ್ತಮೋಽಧ್ಯಾಯಃ

## ವಸುರುವಾಚ

ಏವಂ ಸಂಪೂಜ್ಯ ವಿಧಿವದ್ಭಕ್ತ್ಯಾ ತಂ ಪುರುಷೋತ್ತಮಂ ।
ಪ್ರಣಮ್ಯ ಶಿರಸಾ ಪಶ್ಚಾತ್ ಸಾಗರಂ ಚ ಪ್ರಸಾದಯೇತ್ ॥ ೧ ॥

ಪ್ರಾಣಸ್ತ್ವಂ ಸರ್ವಭೂತಾನಾಂ ವಿಶ್ವಸ್ಮಿನ್ ಸರಿತಾಂ ಪತೇ ।
ತೀರ್ಥರಾಜ ನಮಸ್ತೇಽಸ್ತು ತ್ರಾಹಿ ಮಾಮಚ್ಯುತಪ್ರಿಯ ॥ ೨ ॥

ಸ್ನಾತ್ವೈವಂ ಸಾಗರೇ ಸಮ್ಯಕ್ ತಸ್ಮಿನ್ ಕ್ಷೇತ್ರವರೇ ಶುಭೇ ।
ತೀರೇ ಚಾಭ್ಯರ್ಚ್ಯ ವಿಧಿವನ್ನಾರಾಯಣಮನಾಮಯಂ ॥ ೩ ॥

ರಾಮಂ ಕೃಷ್ಣಂ ಸುಭದ್ರಾಂ ಚ ಪ್ರಣಿಪತ್ಯ ಚ ಸಾಗರಂ ।
ಶತಾನಾಮಶ್ವಮೇಧಾನಾಂ ಫಲಂ ಪ್ರಾಪ್ನೋತಿ ಮಾನವಃ ॥ ೪ ॥

---

## ಐವತ್ತೆಂಟನೆಯ ಅಧ್ಯಾಯ.

೧. ವಸುವು ಹೇಳಿದನು :— ಈರೀತಿ ವಿಧಿವತ್ತಾಗಿ ಭಕ್ತಿಯಿಂದ ಆ ಪುರುಷೋತ್ತಮನನ್ನು ಪೂಜಿಸಿ, ತಲೆಬಾಗಿ ನಮಸ್ಕರಿಸಿ ಬಳಿಕ ಸಾಗರದೇವತೆಯನ್ನು ಪ್ರಸನ್ನೀಕರಿಸಿಕೊಳ್ಳಬೇಕು.

೨. ಸರಿತ್ಪತಿಯೇ! ಜಗತ್ತಿನಲ್ಲಿ ನೀನೇ ಸಕಲಪ್ರಾಣಿಗಳಿಗೂ ಪ್ರಾಣಪ್ರದನು. ಅಚ್ಯುತನಿಗೆ ಪ್ರಿಯನಾದ ತೀರ್ಥರಾಜನೇ! ನಿನಗೆ ನಮಸ್ಕಾರ ಮಾಡುವೆನು! ನನ್ನನ್ನು ರಕ್ಷಿಸು!

೩-೪. ಈರೀತಿ ಪ್ರಾರ್ಥಿಸಿ ಸಾಗರದಲ್ಲಿ ಅವಗಾಹನೆ ಸ್ನಾನಮಾಡಿ ಮಂಗಳಕರವಾದ ಆ ಉತ್ತಮಕ್ಷೇತ್ರದಲ್ಲಿ ಸಮುದ್ರತೀರದಲ್ಲಿ ನಿರ್ದೋಷನಾದ ನಾರಾಯಣನನ್ನು ವಿಧಿವತ್ತಾಗಿ ಪೂಜಿಸಿ, ರಾಮ, ಕೃಷ್ಣ, ಸುಭದ್ರೆ ಮತ್ತು ಸಾಗರದೇವತೆಗಳನ್ನು ನಮಸ್ಕರಿಸಿದರೆ ಮನುಷ್ಯನು ನೂರು ಅಶ್ವಮೇಧ ಯಜ್ಞಗಳ ಫಲವನ್ನು ಹೊಂದುವನು.

ಸರ್ವಪಾಪವಿನಿರ್ಮುಕ್ತಃ ಸರ್ವದುಃಖವಿವರ್ಜಿತಃ |
ವೃಂದಾರಕಹರಿಃ ಶ್ರೀಮಾನ್ ರೂಪಯೌವನಗರ್ವಿತಃ || ೫ ||

ವಿಮಾನೇನಾರ್ಕವರ್ಣೇನ ದಿವ್ಯಗಂಧರ್ವನಾದಿನಾ |
ಕುಲೈಕವಿಂಶತಿಂ ಧೃತ್ವಾ ವಿಷ್ಣುಲೋಕಂ ಚ ಗಚ್ಛತಿ || ೬ ||

ಭುಕ್ತ್ವಾ ತತ್ರ ವರಾನ್ ಭೋಗಾನ್ ಕ್ರೀಡಿತ್ವಾ ಚ ಸುರೈಸ್ಸಹ |
ಚ್ಯುತಸ್ತಸ್ಮಾದಿಹಾಯಾತೋ ಬ್ರಾಹ್ಮಣೋ ಬ್ರಹ್ಮವಿತ್ತಮಃ || ೭ ||

ಯಶಸ್ವೀ ಮತಿಮಾಂಛ್ರೀಮಾನ್ ಸತ್ಯವಾದೀ ಜಿತೇಂದ್ರಿಯಃ |
ವೇದಶಾಸ್ತ್ರಾರ್ಥವಿದ್ವಿಪ್ರೋ ಭವೇತ್ಪಶ್ಚಾತ್ತು ವೈಷ್ಣವಃ || ೮ ||

ಯೋಗಂ ಚ ವೈಷ್ಣವಂ ಪ್ರಾಪ್ಯ ತತೋ ಮೋಕ್ಷಮವಾಪ್ನುಯಾತ್ |
ಗ್ರಹೋಪರಾಗೇ ಸಂಕ್ರಾಂತ್ಯಾಮಯನೇ ವಿಷುವೇ ತಥಾ || ೯ ||

---

೫-೬. ಅಷ್ಟೇ ಅಲ್ಲ; ಹೀಗೆ ಪೂಜಾದಿಗಳನ್ನು ಮಾಡಿದವನು ಸಕಲ ಪಾಪಗಳನ್ನೂ ಪರಿಹರಿಸಿಕೊಂಡು ದುಃಖವರ್ಜಿತನಾಗಿ, ಶ್ರೀಮಂತನು, ಸೌಂದರ್ಯ ಯೌವನಗಳಿಂದ ಮೆರೆಯುತ್ತ, ಮನೋಹರ ಗಂಧರ್ವಗಾನಯುಕ್ತವಾದ, ಸೂರ್ಯನಂತೆ ಹೊಳೆಯುವ ವಿಮಾನದಲ್ಲಿ ಇಪ್ಪತ್ತೊಂದು ಕುಲಗಳಸಹಿತವಾಗಿ ಕುಳಿತು ವಿಷ್ಣುಲೋಕಕ್ಕೆ ಹೋಗುವನು.

೭. ಅಲ್ಲಿ ಉತ್ಕೃಷ್ಟ ಭೋಗಗಳನ್ನನುಭವಿಸಿ, ದೇವತೆಗಳೊಡನೆ ವಿಹರಿಸಿ ನಿಯಮಿತಕಾಲವು ಮುಗಿದನಂತರ ಅಲ್ಲಿಂದಹೊರಟು ಇಲ್ಲಿ ಶ್ರೇಷ್ಠ ಬ್ರಹ್ಮಜ್ಞಾನಿಯಾದ ಬ್ರಾಹ್ಮಣನಾಗಿ ಹುಟ್ಟುವನು.

೮. ಅವನು ಯಶೋವಂತನು, ಬುದ್ಧಿವಂತನು, ಶ್ರೀಮಂತನು, ಸತ್ಯವಾದಿಯು, ಜಿತೇಂದ್ರಿಯನು ವೇದಶಾಸ್ತ್ರಾರ್ಥ ವೇತ್ತೃವೂ ಆಗಿ ವಿಷ್ಣುಭಕ್ತನಾಗುವನು.

೯-೧೧. ಹೀಗೆ ಆ ಬ್ರಾಹ್ಮಣನು ವೈಷ್ಣವಯೋಗವನ್ನು ಹೊಂದಿ ಅದರಿಂದ ಮೋಕ್ಷವನ್ನು ಪಡೆಯುವನು. ಸೂರ್ಯಚಂದ್ರಗ್ರಹಣ, ಸಂಕ್ರಾಂತಿ,

ಯುಗಾದಿಷು ಚ ಮನ್ವಾದೌ ವ್ಯತೀಪಾತೇ ದಿನಕ್ಷಯೇ ।
ಅಷಾಢ್ಯಾಂ ಚೈವ ಕಾರ್ತಿಕ್ಯಾಂ ಮಾಘ್ಯಾಂ ವಾ ಸುಶುಭೇ ತಿಥೌ॥ ೧೦ ॥

ಯೇ ತ್ವತ್ರ ದಾನಂ ವಿಪ್ರೇಭ್ಯಃ ಪ್ರಯಚ್ಛಂತಿ ಸುಮೇಧಸಃ ।
ಫಲಂ ಸಹಸ್ರಗುಣಿತಮನ್ಯತೀರ್ಥಾಲ್ಲಭಂತಿ ತೇ ॥ ೧೧ ॥

ಪಿತೄಣಾಂ ಯೇ ಪ್ರಯಚ್ಛಂತಿ ಪಿಂಡಂ ತತ್ರ ವಿಧಾನತಃ ।
ಅಕ್ಷಯಾಂ ಪಿತರಸ್ತೇಷಾಂ ತೃಪ್ತಿಂ ಸಂಪ್ರಾಪ್ನುವಂತಿ ವೈ ॥ ೧೨ ॥

ಏವಂ ಸ್ನಾನಫಲಂ ಸಮ್ಯಕ್ ಸಾಗರಸ್ಯ ಮಯೇರಿತಂ ।
ದಾನಸ್ಯ ಚ ಫಲಂ ದೇವಿ ಪಿಂಡದಾನಸ್ಯ ಚೈವ ಹಿ ॥ ೧೩ ॥

ಧರ್ಮಾರ್ಥಮೋಕ್ಷಫಲದಮಾಯುಃಕೀರ್ತಿಯಶಸ್ಕರಂ ।
ಭುಕ್ತಿಮುಕ್ತಿಪ್ರದಂ ನೄಣಾಂ ಧನ್ಯಂ ದುಃಸ್ವಪ್ನನಾಶನಂ ॥ ೧೪ ॥

---

ಅಯನ, ತುಲಾದಿ ಸಂಕ್ರಮಣ, ಯುಗಾದಿ, ಮನ್ವಾದಿ, ವ್ಯತೀಪಾತ, ಅಮಾವಾಸ್ಯೆ ಮತ್ತು ಆಷಾಢ, ಕಾರ್ತಿಕ, ಮಾಘಮಾಸಗಳಲ್ಲಿ ಶುಭತಿಥಿ ಈ ಪುಣ್ಯ ಕಾಲಗಳಲ್ಲಿ ಈ ಕ್ಷೇತ್ರದಲ್ಲಿ ಬ್ರಾಹ್ಮಣರಿಗೆ ದಾನಮಾಡುವ ಸಮೀಚೀನಜ್ಞಾನಿಗಳು ಇತರ ತೀರ್ಥಗಳಲ್ಲಿ ಮಾಡುವದಾನಕ್ಕಿಂತಲೂ ಸಾವಿರದಷ್ಟು ಹೆಚ್ಚು ಫಲವನ್ನು ಹೊಂದುವರು.

೧೨. ಆ ಕ್ಷೇತ್ರದಲ್ಲಿ ವಿಧಿವತ್ತಾಗಿ ಪಿತೃಗಳಿಗೆ ಪಿಂಡಪ್ರದಾನಮಾಡಿದರೆ ಪಿತೃಗಳು ಅಕ್ಷಯತೃಪ್ತಿಯನ್ನು ಹೊಂದುವರು.

೧೩. ಮೋಹಿನೀದೇವಿಯೇ ! ಈರೀತಿಯಾಗಿ ಸಮುದ್ರಸ್ನಾನ, ದಾನ, ಪಿಂಡಪ್ರದಾನ ಇವುಗಳಫಲವನ್ನು ನಿನಗೆ ವಿಸ್ತಾರವಾಗಿ ಹೇಳಿರುವೆನು.

೧೪-೧೫. ಧರ್ಮ, ಅರ್ಥ, ಮೋಕ್ಷಗಳೆಂಬ ಉತ್ತಮಫಲಗಳನ್ನು ಕೊಡುವಂತಹ, ಆಯುಸ್ಸು, ಕೀರ್ತಿ, ಯಶಸ್ಸು ಇವುಗಳನ್ನು ವೃದ್ಧಿಗೊಳಿಸುವ ಮನುಷ್ಯರಿಗೆ ಭೋಗಮೋಕ್ಷಪ್ರದನಾದ, ಧನ್ಯವಾದ, ದುಸ್ಸ್ವಪ್ನವನ್ನು ಪರಿಹರಿಸುವ, ಸಕಲ ಪಾಪಪರಿಹಾರಕವಾದ, ಪುಣ್ಯ ಮತ್ತು ಸಕಲೇಷ್ಟಾರ್ಥಗಳನ್ನೂ ಕೊಡುವ

**ಸರ್ವಪಾಪಹರಂ ಪುಣ್ಯಂ ಸರ್ವಕಾಮಫಲಪ್ರದಂ ।**
**ನಾಸ್ತಿಕಾಯ ನ ವಕ್ತವ್ಯಂ ಶಠಾಯ ಕೃಪಣಾಯ ಚ ॥ ೧೫ ॥**

**ತಾವದ್ಗರ್ಜಂತಿ ತೀರ್ಥಾನಿ ಮಾಹಾತ್ಮ್ಯೈಃ ಸ್ವೈಃ ಪೃಥಕ್ ಪೃಥಕ್ ।**
**ಯಾವನ್ನ ತೀರ್ಥರಾಜಸ್ಯ ಮಾಹಾತ್ಮ್ಯಂ ವರ್ಣ್ಯತೇ ದ್ವಿಜೈಃ ॥ ೧೬ ॥**

**ಪುಷ್ಕರಾದೀನಿ ತೀರ್ಥಾನಿ ಪ್ರಯಚ್ಛಂತಿ ಸ್ವಕಂ ಫಲಂ ।**
**ತೀರ್ಥರಾಜಸ್ತು ಪುಣ್ಯಾತ್ಮಾ ಸರ್ವತೀರ್ಥಫಲಪ್ರದಃ ॥ ೧೭ ॥**

**ಭೂತಲೇ ಯಾನಿ ತೀರ್ಥಾನಿ ಸರಿತಶ್ಚ ಸರಾಂಸಿ ಚ ।**
**ವಿಶಂತಿ ಸಾಗರೇ ತಾನಿ ತೇನ ಸ್ವೈ ಶ್ರೇಷ್ಠತಾಂ ಗತಃ ॥ ೧೮ ॥**

**ರಾಜಾ ಸಮಸ್ತತೀರ್ಥಾನಾಂ ಸಾಗರಃ ಸರಿತಾಂ ಪತಿಃ ।**
**ತಸ್ಮಾತ್ಸಮಸ್ತತೀರ್ಥೇಭ್ಯಃ ಶ್ರೇಷ್ಠೋಽಸೌ ಸರ್ವಕಾಮದಃ ॥ ೧೯ ॥**

---

ಈ ಕ್ಷೇತ್ರಮಹಾತ್ಮ್ಯೆಯನ್ನು ನಾಸ್ತಿಕನು, ದುಷ್ಟನು, ಲೋಭಿಯೂ ಆದ ದುರ್ಜನರಿಗೆ ಹೇಳಬಾರದು.

೧೬. ದ್ವಿಜರು ತೀರ್ಥೋತ್ತಮವಾದ ಕ್ಷೇತ್ರದ ಮಹಾತ್ಮ್ಯೆಯನ್ನು ಹೇಳದಿರುವವರೆಗೆ ಇತರ ತೀರ್ಥಗಳು ತಮ್ಮ ತಮ್ಮ ಮಹಾತ್ಮ್ಯೆಗಳನ್ನು ಪ್ರತ್ಯೇಕವಾಗಿ ಹೊಗಳಿಕೊಳ್ಳುವುವು.

೧೭. ಪುಷ್ಕರ ಮುಂತಾದ ತೀರ್ಥಗಳು ತಮ್ಮ ಫಲವನ್ನು ಮಾತ್ರ ಕೊಡುವುವು. ಉತ್ತಮವಾದ ಈ ತೀರ್ಥಸೇವನೆಯು ಸಕಲ ತೀರ್ಥಯಾತ್ರೆಗಳ ಫಲವನ್ನೂ ಕೊಡುತ್ತದೆ.

೧೮. ಭೂಮಂಡಲದಲ್ಲಿರುವ ತೀರ್ಥ, ನದಿ. ಸರೋವರ, ಇವೆಲ್ಲವೂ ಸಮುದ್ರದಲ್ಲಿಯೇ ಸೇರುವುದರಿಂದ ಸಾಗರವು ಎಲ್ಲಕ್ಕಿಂತಲೂ ಶ್ರೇಷ್ಠವಾಗಿದೆ.

೧೯. ಸಾಗರವು ಸಮಸ್ತತೀರ್ಥಗಳಿಗೂ ಅಧಿಪತಿಯು. ನದಿಗಳಿಗೆ ಸ್ವಾಮಿಯು. ಆದಕಾರಣ ಅದು ಸಕಲೇಷ್ಟದಾಯಕವು ಮತ್ತು ಸಮಸ್ತ ತೀರ್ಥಗಳಿಗಿಂತಲೂ ಉತ್ತಮವೂ ಆಗಿದೆ.

ತಮೋನಾಶಂ ಯಥಾಭ್ಯೇತಿ ಭಾಸ್ಕರೇಽಭ್ಯುದಿತೇ ಸತಿ |
ಕೋಟ್ಯೋ ನವನವತ್ಯಸ್ತು ಯತ್ರ ತೀರ್ಥಾನಿ ಸಂತಿ ವೈ || ೨೦ ||

ತಸ್ಮಾತ್ಸ್ನಾನಂ ಚ ದಾನಂ ಚ ಹೋಮಂ ಜಪ್ಯಂ ಸುರಾರ್ಚನಂ |
ಯತ್ಕಿಂಚಿತ್ ಕ್ರಿಯತೇ ತತ್ರ ತದಕ್ಷಯಮಿತೀರಿತಂ || ೨೧ ||

ಮೋಹಿನ್ಯುವಾಚ

ಸರ್ವೇಷು ತು ಸಮುದ್ರೇಷು ಕ್ಷಾರೋಽಯಂ ಸರಿತಾಂ ಪತಿಃ |
ಕಥಂ ಜಾತೋ ಗುರೋ ಬ್ರೂಹಿ ಸರ್ವಜ್ಞೋಽಸಿ ಯತೋ ದ್ವಿಜ || ೨೨ ||

ವಸುರುವಾಚ

ಶೃಣು ವಕ್ಷ್ಯಾಮಿ ಸುಭಗೇ ಕ್ಷಾರತ್ವಂ ಚಾಸ್ಯ ವಾರಿಧೇಃ |
ಯಥಾ ಪ್ರಾಪ್ತಃ ಪುರಾಸೀಚ್ಚ ಮಾತ್ರಾಸ್ಯ ಜಗತಾಮಪಿ || ೨೩ ||

---

೨೦-೨೧. ಸೂರ್ಯೋದಯವಾದರೆ ಕತ್ತಲು ಹೋಗುವಂತೆ ಈ ತೀರ್ಥ ಸೇವನೆಮಾಡಿದರೆ ಅಜ್ಞಾನಾಂಧಕಾರವು ಹೋಗುವುದು. ಸಾಗರದಲ್ಲಿ ತೊಂಬತ್ತೊಂಬತ್ತು ಕೋಟಿ ತೀರ್ಥಗಳು ಸನ್ನಿಹಿತವಾಗಿರುವುದರಿಂದ ಅಲ್ಲಿ ಸ್ನಾನ, ದಾನ, ಹೋಮ, ಜಪ, ದೇವಪೂಜೆ ಇವುಗಳನ್ನು ಸ್ವಲ್ಪವಾಗಿಮಾಡಿದರೂ ಅದು ಅಕ್ಷಯವಾಗುವುದೆಂದು ಉಕ್ತವಾಗಿದೆ.

೨೨. "ಗುರುವಾದ ದ್ವಿಜನೇ! ಸಕಲ ಸಮುದ್ರಗಳಲ್ಲಿ ಇದು ಕ್ಷಾರಸಮುದ್ರವಾಗಲು ಕಾರಣವೇನು? ಅದನ್ನು ನನಗೆ ವಿವರಿಸಿ ಹೇಳು. ನೀನು ಸರ್ವಜ್ಞನಾಗಿರುವೆ" ಎಂದು ಮೋಹಿನಿಯು ವಸುವನ್ನು ಕೇಳಿದಳು.

೨೩. ವಸುವು ಹೇಳುವನು :— ಸುಂದರಿಯೇ! ಸಮುದ್ರಗಳ ಉತ್ಪತ್ತಿ ಮತ್ತು ಜಗತ್ತಿಗೆ ಮಾತೆಯಾದ ದೇವಿಯಿಂದ ಈ ಸಮುದ್ರವು ಲವಣಮಯವಾದ ಬಗೆಯನ್ನು ಹೇಳುವೆನು ಕೇಳು :—

ಪುರಾ ಸೃಷ್ಟಿಕ್ರಮೇ ಜಾತಾಃ ಸಮುದ್ರಾಃ ಸಪ್ತ ಮೋಹಿನಿ ।
ರಾಧಿಕಾಗರ್ಭಸಂಭೂತಾ ದಿವ್ಯದೇಹಾಃ ಪೃಥಗ್ವಿಧಾಃ ॥ ೨೪ ॥

ಏಕದಾ ರಾಧಿಕಾನಾಥಃ ಕಾಂತಯಾ ಸಹ ಸಂಗತಃ ।
ಆಸ್ತೇ ವೃಂದಾವನೇ ಸಾಕ್ಷಾದ್ಗೋಪಗೋಪೀಗವಾಂ ಪತಿಃ ॥ ೨೫ ॥

ರಾಸಮಂಡಲಮಧ್ಯೇ ತು ಸುದೀಪ್ತೇ ಮಣಿಮಂಡಪೇ ।
ಸುಸ್ನಿಗ್ಧಯಾ ಸಮಾಯುಕ್ತಃ ಶೃಂಗಾರೇ ಕಾಂತಯಾ ತಯಾ ॥ ೨೬ ॥

ತೇ ಸಪ್ತ ಸಾಗರಾ ಬಾಲಾಃ ಸ್ತನ್ಯಪಾನಕೃತೇಕ್ಷಣಾಃ ।
ತತಸ್ತೇ ಸರ್ವತೋಽದೃಷ್ಟ್ವಾ ಮಾತರಂ ತಾಂ ಜಗತ್ಪ್ರಭುಂ ॥ ೨೭ ॥

ಕ್ಷುಧಾರ್ತಾಶ್ಚ ರುದಂತಸ್ತು ಆಸೇದುರ್ಮಣಿಮಂಡಪಂ ।
ತತ್ರ ಜಗ್ಮುಸ್ತು ತೇ ಸರ್ವೇ ಸ್ತನಪಾನಕೃತಕ್ಷಣಾಃ ॥ ೨೮ ॥

---

೨೪. ಮೋಹಿನೀ! ಪೂರ್ವದಲ್ಲಿ ಸೃಷ್ಟಿಮಾಡುವಾಗ ಏಳುಸಮುದ್ರಗಳು ಉತ್ಪನ್ನವಾದುವು. ಅವು ರಾಧಾದೇವಿಯ ಗರ್ಭದಲ್ಲಿ ಜನಿಸಿ ಮನೋಹರದೇಹವುಳ್ಳವುಗಳಾಗಿ ಒಂದೊಂದೂ ಒಂದೊಂದು ವಿಧವಾಗಿದ್ದುವು.

೨೫-೨೬. ಗೋಪಾಲಕರು, ಗೋಪಸ್ತ್ರೀಯರು, ಗೋವು ಇವುಗಳಿಗೆ ಪತಿಯಾದ ರಾಧಿಕಾನಾಥನು ಒಂದಾನೊಂದು ದಿನ ತನ್ನ ಕಾಂತೆಯಸಹಿತನಾಗಿ ವೃಂದಾವನದಲ್ಲಿ ರಾಸಮಂಡಲಮಧ್ಯದಲ್ಲಿ ವಿರಾಜಮಾನವಾದ ಮಣಿಮಂಟಪದಲ್ಲಿ ಅತ್ಯಂತ ಪ್ರೇಮಪಾತ್ರಳಾದ ಕಾಂತೆಯೊಡನೆ ಶೃಂಗಾರವಿಲಾಸದಲ್ಲಿ ಪ್ರಸಕ್ತನಾಗಿದ್ದನು.

೨೭-೨೮. ಬಾಲಕರಾದ ಆ ಏಳುಸಾಗರಗಳು ಸ್ತನ್ಯಪಾನಮಾಡುವ ಸಮಯವಾದುದರಿಂದ ತಾಯಿಯಾದ ಆ ಜಗನ್ಮಾತೆಯನ್ನು ಎಲ್ಲಾಕಡೆಯಲ್ಲಿಯೂ ನೋಡಿ ಕಾಣದೆ ಹಸಿವಿನಿಂದ ಬಳಲಿ ಅಳುತ್ತಾ ಮಣಿಮಂಟಪಕ್ಕೆ ಬಂದರು. ಅಲ್ಲಿ ಅವರೆಲ್ಲರೂ ಸ್ತನ್ಯಪಾನಮಾಡುವುದಕ್ಕಾಗಿ ತಾಯಿಯಬಳಿಗೆ ಹೋಗಲೆತ್ನಿಸಿದರು.

ಸರ್ವೇ ನಿವಾರಿತಾಶ್ಚಾಪಿ ದ್ವಾರಸ್ಥೈರ್ವಲ್ಲವೀಗಣೈಃ |
ವಿವಿಶುಶ್ಚ ಭೃಶಂ ಕ್ರುದ್ಧಾ ಬಾಲಕಾಸ್ತೇ ಸ್ತನಾರ್ಥಿನಃ || ೨೯ ||

ಉಪೇಕ್ಷಿತಾ ಗೋಪಿಕಾಭಿರ್ಮಾತುರುತ್ಸಂಗವರ್ತಿನಃ |
ತತಸ್ತು ಪ್ರರುದಂತೋ ವೈ ತೇ ಗತ್ವಾ ಮಣಿಮಂಡಪಂ || ೩೦ ||

ಉಚ್ಚೈಃ ಪ್ರಚುಕ್ರುಶುರ್ದೇವಿ ಮಾತಃ ಕ್ವಾಸೀತಿವಾದಿನಃ |
ಯದಾ ನಾಹ್ವಯತೇ ಮಾತಾ ಬಾಲಕಾಂಸ್ತಾಂಸ್ತನಾರ್ಥಿನಃ || ೩೧ ||

ತದಾ ಕನಿಷ್ಠಃ ಸರ್ವೇಷಾಂ ವಿವೇಶಾಯಂ ರತಿಸ್ಥಲಂ |
ತಂ ದೃಷ್ಟ್ವಾ ಸ್ವಸುತಂ ರಾಧಾ ಮುಗ್ಧಂ ಶೃಂಗಾರಭಂಗದಂ || ೩೨ ||

ಶಶಾಪ ಕ್ಷುಭಿತಾ ಭದ್ರೇ ಭೂರ್ಲೋಕಂ ಯಾತ ಮಾಚಿರಂ |
ಯತಃ ಶೃಂಗಾರಭಂಗಂ ತು ಮಮ ಕರ್ತುಂ ಸಮುದ್ಯತಾಃ || ೩೩ ||

---

೨೯. ಬಾಗಿಲಿನಲ್ಲಿದ್ದ ಗೋಪಿಯರ ಗಣದಿಂದ ತಡೆಯಲ್ಪಟ್ಟುದರಿಂದ ಸ್ತನ್ಯಾರ್ಥಿಗಳಾದ ಆ ಬಾಲಕರೆಲ್ಲರೂ ಬಹಳ ಕೋಪಗೊಂಡು ಮಂಟಪವನ್ನು ಪ್ರವೇಶಿಸಿದರು.

೩೦-೩೪. ಗೋಪಿಕಾಸ್ತ್ರೀಯರು ತಾಯಿಯ ತೊಡೆಯಮೇಲಿರಬೇಕಾದ ಬಾಲಕರೆಂದು ಉಪೇಕ್ಷೆಮಾಡಿ ಅವರನ್ನು ಒಳಗೆ ಬಿಟ್ಟರು. ತರುವಾಯ ಮಣಿ ಮಂಟಪಕ್ಕೆ ಹೋಗಿ ಅಳುತ್ತಾ ಅಮ್ಮಾ! ದೇವಿ! ಎಲ್ಲಿರುವೆ? ಎಂಬುದಾಗಿ ಗಟ್ಟಿಯಾಗಿ ಕೂಗಿಕೊಂಡರು. ಆದರೂ ಸ್ತನ್ಯಾರ್ಥಿಗಳಾದ ಆ ಬಾಲಕರನ್ನು ತಾಯಿಯು ಕರೆಯದಿರಲು ಅವರಲ್ಲೆಲ್ಲಾ ಚಿಕ್ಕವನಾದ ಸಾಗರನು ರಾಧಿಕಾ ದೇವಿಯ ರತಿಮಂದಿರಕ್ಕೇ ಪ್ರವೇಶಿಸಿದನು. ರಾಧೆಯು ಮುಗ್ಧರೂ, ತನ್ನ ಶೃಂಗಾರವಿಲಾಸಕ್ಕೆ ಭಂಗತಂದವರೂ ಆದ ಆ ತನ್ನ ಮಕ್ಕಳನ್ನು ನೋಡಿ "ಮಕ್ಕಳಿರಾ! ನೀವು ನನ್ನ ಶೃಂಗಾರವಿಲಾಸವನ್ನು ಭಂಗಪಡಿಸಲುದ್ಯುಕ್ತರಾದ ಕಾರಣ ಮಕ್ಕಳೇ! ನೀವು ಬೇಗ ಭೂಲೋಕಕ್ಕೆ ಹೋಗಿ ಅಲ್ಲಿ ಏಕಾಕಿಗಳಾಗಿರಿ" ಎಂಬುದಾಗಿ ಶಾಪಕೊಟ್ಟಳು.

ತತೋ ಯೊಯೆಂ ಭುವಂ ಗತ್ವಾ ಸ್ಥಾಸ್ಯಥೈಕಾಕಿನಃ ಸುತಾಃ ।
ತಚ್ಛ್ರುತ್ವಾ ವಚನಂ ಮಾತುರ್ಜಗದ್ಧಾತ್ರ್ಯಾ ವಿರಂಚಿಜೇ ॥ ೩೪ ॥

ಅತ್ಯುಚ್ಚೈಃ ರುರುದುಃ ಸರ್ವೇ ವಿಯೋಗಭಯಕಾತರಾಃ ।
ತತಃ ಪ್ರಸನ್ನೋ ಭಗವಾನ್ ಶ್ರೀಕೃಷ್ಣಃ ಪ್ರಣತಾರ್ತಿಹಾ ॥ ೩೫ ॥

ಮಾಭೈಷ್ಟ ಪುತ್ರಾಸ್ತಿಷ್ಠಾಮಿ ಸಮೀಪೇ ಭವತಾಮಹಂ ।
ದ್ರವರೂಪಾ ಭವಂತಸ್ತು ಪೃಥಗ್ರೂಪಚರಾಃ ಸದಾ ॥ ೩೬ ॥

ವರ್ತಧ್ವಂ ಕ್ಷಾರತಾಂ ಯಾತಃ ಕನಿಷ್ಠೋಽಭ್ಯಂತರೇ ಸ್ಥಿತಃ ।
ಏವಮುಕ್ತ್ವಾ ಜಗನ್ನಾಥೋ ಬಾಲಕಾನ್ವಿಸಸರ್ಜ ಹ ॥ ೩೭ ॥

ತೇಷಾಂ ತು ಸಾಂತ್ವನಾರ್ಥಾಯ ಸಮೀಪಸ್ಥಃ ಸದಾಭವತ್ ।
ಯಃ ಪ್ರವಿಷ್ಟೋ ರತಿಗೃಹಂ ಸ ಕ್ಷಾರೋದೋ ಬಭೂವ ಹ ॥ ೩೮ ॥

---

೩೪-೩೫. ಬ್ರಹ್ಮಕುಮಾರಿಯೇ! ಜಗದ್ಧಾತ್ರಿಯಾದ ತಾಯಿಯ ಆ ಮಾತನ್ನು ಕೇಳಿ ಮಕ್ಕಳೆಲ್ಲರೂ ವಿಯೋಗಭೀತಿಯಿಂದ ತತ್ತರಿಸುತ್ತ ಬಹು ಗಟ್ಟಿಯಾಗಿ ಅತ್ತರು.

೩೫-೩೭. ಅನಂತರ ಭಕ್ತರ ಮನೋವ್ಯಥೆಯನ್ನು ಪರಿಹರಿಸುವ ಶ್ರೀ ಕೃಷ್ಣ ಭಗವಂತನು ಪ್ರಸನ್ನನಾಗಿ "ಮಕ್ಕಳೇ! ಭಯಪಡಬೇಡಿರಿ! ನಾನು ನಿಮ್ಮ ಸಮೀಪದಲ್ಲಿಯೇ ಇರುವೆನು. ನೀವು ಬೇರೆ ದ್ರವರೂಪವನ್ನು ಹೊಂದಿ ಯಾವಾಗಲೂ ಆ ರೂಪದಿಂದ ಸಂಚರಿಸುತ್ತಿರಿ. ಕೇವಲ ಸಮೀಪದಲ್ಲಿದ್ದ ಕನಿಷ್ಠಪುತ್ರನು ಉಪ್ಪುನೀರಿನ ಸಮುದ್ರವಾಗಲಿ" ಎಂಬುದಾಗಿ ಹೇಳಿ ಬಾಲಕರನ್ನು ಜಗನ್ನಾಥನು ಕಳುಹಿಸಿದನು.

೩೮. ಅವರ ಸಮಾಧಾನಕ್ಕಾಗಿ ಭಗವಂತನು ಯಾವಾಗಲೂ ಅವರ ಸಮೀಪದಲ್ಲಿಯೇ ಇರುವನು. ಆ ಏಳುಮಕ್ಕಳುಗಳ ಪೈಕಿ ರತಿಮಂದಿರಕ್ಕೆ ಪ್ರವೇಶಮಾಡಿದ ಕನಿಷ್ಠಪುತ್ರನು ಉಪ್ಪುನೀರಿನ ಸಮುದ್ರವಾದನು.

ಅನ್ಯೇ ತು ದ್ರವರೂಪಾ ವೈ ಕ್ಷೀರೋದಾದ್ಯಾಃ ಪೃಥಕ್ ಸ್ಥಿತಾಃ ।

ಮೋಹಿನ್ಯುವಾಚ

ಕಾ ರಾಧಾ ಭವತಾ ಪ್ರೋಕ್ತಾ ಗುರೋ ಲೋಕಪ್ರಸೂಃ ಸತೀ ॥ ೩೯ ॥

ತಸ್ಯಾಸ್ತತ್ತ್ವಂ ಸಮಾಖ್ಯಾಹಿ ಶ್ರೋತುಂ ಕೌತೂಹಲಂ ಮಮ ।
ಪುರಾಣೇಷು ರಹಸ್ಯಂ ತು ರಾಧಾಮಾಧವವರ್ಣನಂ ॥ ೪೦ ॥

ಯತಃ ಸರ್ವಂ ಭವಾನ್ವೇತ್ತಿ ಯಾಥಾತಥ್ಯೇನ ಸುವ್ರತ ।

ವಸಿಷ್ಠ ಉವಾಚ

ತಚ್ಛ್ರುತ್ವಾ ಮೋಹಿನೀವಾಕ್ಯಂ ಭೂಪತಿಃ ಸ ವಸುರ್ಮಹಾನ್ ।
ಅತೀವ ಭಕ್ತ್ಯಾ ಗೋವಿಂದೇ ನಿಮಗ್ನಹೃದಯೋಽಭವತ್ ॥ ೪೧ ॥

ಪುಲಕಾಂಕಿತಸರ್ವಾಂಗಃ ಪ್ರಹೃಷ್ಟಹೃದಯೋ ಮುದಾ ।
ಉವಾಚ ಪ್ರೇಮಸಂಪನ್ನೋ ಮೋಹಿನೀಂ ದ್ವಿಜಸತ್ತಮಃ ॥ ೪೨ ॥

---

೩೯-೪೦. ಇತರ ಮಕ್ಕಳು ಬೇರೆಬೇರೆಯಾಗಿ ಕ್ಷೀರಸಮುದ್ರ ಮುಂತಾದುವುಗಳಾಗಿ ದ್ರವರೂಪದಿಂದಿರುವರು.

ಆಗ ಮೋಹಿನಿಯು "ಗುರುವೇ! ನೀನು ಹೇಳಿದ, ಲೋಕಸೃಷ್ಟಿಗೆ ಕಾರಣಳಾದ, ರಾಧೆಯೆಂಬ ಸಾಧ್ವೀಮಣಿ ಯಾರು? ಆ ದೇವಿಯ ಸ್ವರೂಪವನ್ನು ತಿಳಿಯಬೇಕೆಂದು ನನಗೆ ಕುತೂಹಲವಾಗಿದೆ. ಅವನ್ನು ವಿವರಿಸಿ ಹೇಳು. ಸುವ್ರತನೇ! ಪುರಾಣಗಳಲ್ಲಿ ಹೇಳಿರುವ ರಾಧಾ ಮಾಧವ ವರ್ಣನೆಯ ರಹಸ್ಯವನ್ನೆಲ್ಲಾ ನೀನು ತಿಳಿದಿರುವೆ" ಎಂದು ವಸುವನ್ನು ಕೇಳಿದಳು.

೪೧. ವಸಿಷ್ಠನು ಹೇಳಿದನು:—ಮೋಹಿನಿಯ ಆ ಮಾತನ್ನು ಕೇಳಿ ಭೂದೇವನೂ, ಮಹಾತ್ಮನೂ ಆದ ಆ ವಸುವು ಭಕ್ತ್ಯುದ್ರೇಕದಿಂದ ಗೋವಿಂದನಲ್ಲಿಯೇ ಮನಸ್ಸನ್ನು ಸ್ಥಿರವಾಗಿ ನಿಲ್ಲಿಸಿದನು.

೪೨. ಆಗ ದ್ವಿಜವರ್ಯನು ಸರ್ವಾಂಗಗಳಲ್ಲಿಯೂ ರೋಮಾಂಚವುಳ್ಳವನಾಗಿ ಮನಸ್ಸಿನ ಸಂತೋಷಾತಿಶಯದಿಂದ ಪ್ರೇಮದಿಂದ ಮೋಹಿನಿಯನ್ನು ಕುರಿತು ಮಾತನಾಡಿದನು.

ವಸುರುವಾಚ

ಶೃಣು ದೇವಿ ಪ್ರವಕ್ಷ್ಯಾಮಿ ರಹಸ್ಯಾತಿರಹಸ್ಯಕಂ ।
ಸುಗೋಪ್ಯಂ ಕೃಷ್ಣಚರಿತಂ ಬ್ರಹ್ಮೈಕತ್ವವಿಧಾಯಕಂ ॥ ೪೩ ॥

ಪ್ರಕೃತೇಃ ಪುರುಷಸ್ಯಾಪಿ ನಿಯಂತಾರಂ ವಿಧೇರ್ವಿಧಿಂ ।
ಸಂಹರ್ತಾರಂ ಚ ಸಂಹರ್ತುರ್ಭಗವಂತಂ ನತೋಽಸ್ಮ್ಯಹಂ ॥ ೪೪ ॥

ದೇವಿ ಸರ್ವೇಽವತಾರಾಸ್ತು ಬ್ರಹ್ಮಣಃ ಕೃಷ್ಣರೂಪಿಣಃ ।
ಅವತಾರೀ ಸ್ವಯಂ ಕೃಷ್ಣಃ ಸಗುಣೋ ನಿರ್ಗುಣಃ ಸ್ವಯಂ ॥ ೪೫ ॥

ಸ ಏವ ರಾಮಃ ಕೃಷ್ಣಶ್ಚ ವಸ್ತುತೋ ಗುಣತಃ ಪೃಥಕ್ ।
ಸರ್ವೇ ಪ್ರಾಕೃತಿಕಾ ಲೋಕಾ ಗೋಲೋಕೋ ನಿರ್ಗುಣಃ ಸ್ವಯಂ ॥೪೬॥

---

೪೩. ವಸುವು ಹೇಳಿದನು—ದೇವಿಯೇ! ರಹಸ್ಯಗಳಲ್ಲೆಲ್ಲಾ ಅತ್ಯಂತ ರಹಸ್ಯವು, ಬಹುಗೋಪನೀಯವು, ಕೃಷ್ಣನ ಅದ್ವಿತೀಯತೆ (ಸಮಾಭ್ಯಧಿಕರಾಹಿತ್ಯ) ಯನ್ನು ನಿರೂಪಿಸುವುದೂ ಆದ ಕೃಷ್ಣಚರಿತ್ರೆಯನ್ನು ಹೇಳುವೆನು ಕೇಳು.

೪೪. ಪ್ರಕೃತಿಗೂ ಪುರುಷನಿಗೂ ಸಹ ನಿಯಾಮಕನು, ಬ್ರಹ್ಮನನ್ನೂ ಸೃಷ್ಟಿಸಿದವನು, ಸಂಹಾರಕನಿಗೂ ಸಂಹಾರಕನೂ ಆದ ಭಗವಂತನನ್ನು ನಮಸ್ಕರಿಸುವೆನು!

೪೫. ದೇವಿಯೇ! ಭಗವಂತನರೂಪಗಳೆಲ್ಲವೂ ಕೃಷ್ಣರೂಪಿಯಾದ ಪರಬ್ರಹ್ಮನ ಅವತಾರಗಳು. ಕೃಷ್ಣನೇ ಸಾಕ್ಷಾನ್ಮೂಲರೂಪನು. ಅವನು ಅಪ್ರಾಕೃತಗುಣಶಾಲಿಯೂ, ಪ್ರಾಕೃತಗುಣರಹಿತನೂ ಆಗಿರುವನು.

೪೬. ವಾಸ್ತವಿಕವಾಗಿ ಆ ಕೃಷ್ಣನೇ ರಾಮನು. ವಿಶೇಷ ಶಕ್ತಿಯಿಂದ ಬೇರೆಯಾಗಿ ತೋರುವನು. ಎಲ್ಲಾ ಲೋಕಗಳೂ ಪ್ರಕೃತಿನಿರ್ಮಿತಗಳು. ಸಾಕ್ಷಾದ್ಗೋಲೋಕವು ಪ್ರಾಕೃತವಲ್ಲ.

ಗಾವಸ್ತೇಜೋಂಶವೋ ಭದ್ರೇ ವೇದವಿದ್ಭಿರ್ನಿರೂಪಿತಾಃ ।
ಬ್ರಹ್ಮವಿಷ್ಣುಶಿವಾದ್ಯಾಸ್ತು ಪ್ರಾಕೃತಾ ಗುಣನಿರ್ಮಿತಾಃ ॥ ೪೭ ॥

ತತ್ತೇಜಃ ಸರ್ವದಾ ದೇವಿ ನಿರ್ಗುಣಂ ಗುಣಕೃನ್ಮತಂ ।
ಗುಣಾಸ್ತದಂಶವೋ ಭದ್ರೇ ಸರ್ವೇ ವ್ಯಾಕೃತರೂಪಿಣಃ ॥ ೪೮ ॥

ವ್ಯಾಕೃತೋತ್ಪಾದಕಾ ಜ್ಞೇಯಾ ರಜಃಸತ್ತ್ವತಮೋಽಭಿಧಾಃ ।
ಅವ್ಯಾಕೃತಸ್ಯ ಪುಂಸೋ ಹಿ ಗುಣಾ ವಿಜ್ಞಾಪಕಾಃ ಶುಭೇ ॥ ೪೯ ॥

ದೇಹಭೂತಾಃ ಸ್ಮೃತಾಸ್ತಸ್ಯ ತಚ್ಛಕ್ತಿಃ ಪ್ರಕೃತಿರ್ಮತಾ ।
ಪ್ರಧಾನಂ ಪ್ರಕೃತಿಂ ಪ್ರಾಹುಃ ಕಾರ್ಯಕಾರಣರೂಪಿಣೀಂ ॥ ೫೦ ॥

ಸಾಕ್ಷಿಣಂ ಪುರುಷಂ ಪ್ರಾಹುರ್ನಿರ್ಗುಣಂ ತು ಸನಾತನಂ ।
ಪುರುಷೋ ವೀರ್ಯಮಾಧತ್ತೆ ಪ್ರಕೃತ್ಯಾಂ ಚ ತತೋ ಗುಣಾಃ ॥ ೫೧ ॥

---

೪೭. ಶೋಭನೇ! ತೇಜಸ್ಸಿನ ಕಿರಣಗಳೇ ಗೋವುಗಳು ಎಂದು ವೇದ ಜ್ಞಾನಿಗಳು ನಿರೂಪಿಸಿರುವರು. ಬ್ರಹ್ಮಾದಿಗಳು ಪ್ರಾಕೃತಗಳಾದ ಗುಣಗಳಿಂದ ನಿರ್ಮಿತರಾದವರು.

೪೮. ದೇವಿಯೇ! ಆ ತೇಜಸ್ಸು ಯಾವಾಗಲೂ ನಿರ್ಗುಣವು, ಗುಣಕಾರಿಯು ಎಂದು ಹೇಳಿದೆ. ಭದ್ರೆ! ಗುಣಗಳೆಲ್ಲವೂ ಅದರ ವಿಕಾರವಾದ ಕಿರಣಗಳು.

೪೯. ಶೋಭನೇ! ರಜಸ್ಸು, ಸತ್ವ, ತಮಸ್ಸು ಎಂಬ ಗುಣಗಳು ಅವ್ಯಾಕೃತಪುರುಷನು ಮಾಡುವ ವ್ಯಾಕೃತಸೃಷ್ಟಿಗೆ ಸಹಕಾರಿಗಳಾಗಿವೆಯೆಂದು ತಿಳಿಯಬೇಕು.

೫೦. ಅವು ಆ ಪುರುಷನಿಗೆ ದೇಹಗಳಾಗಿವೆ. ಪ್ರಕೃತಿಯು ಅವನ ಶಕ್ತಿಯು. ಕಾರ್ಯಕಾರಣರೂಪವಾದ ಆ ಪ್ರಕೃತಿಯನ್ನು ಪ್ರಧಾನವೆಂದು ಹೇಳುವರು.

೫೧. ಸನಾತನನಾದ ನಿರ್ಗುಣಪುರುಷನನ್ನು ಸಾಕ್ಷಿಯೆಂದು ಹೇಳುವರು. ಪುರುಷನು ಪ್ರಕೃತಿಯಲ್ಲಿ ವೀರ್ಯಾಧಾನ ಮಾಡಿದನು. ಬಳಿಕ ಸತ್ವಾದಿ ಗುಣಗಳು ಉತ್ಪನ್ನವಾದುವು.

ಸತ್ವಾದ್ಯಾ ಹ್ಯಭವಂಸ್ತೇಭ್ಯೋ ಮಹತ್ತತ್ವಂ ಸಮುದ್ಗತಂ ।
ಪುರುಷಸ್ಯೇಚ್ಛಯಾ ತತ್ತು ನ್ಯಾಕೃತಂ ಸಮಭೂದಹಂ ॥ ೫೨ ॥

ತತ್ತ್ರಿಧಾ ಸಮಭೂದ್ಭದ್ರೇ ದ್ರವ್ಯಜ್ಞಾನಕ್ರಿಯಾತ್ಮಕಂ ।
ವೈಕಾರಿಕಸ್ತೈಜಸಶ್ಚ ತಾಮಸಶ್ಚೇತ್ಯಹಂ ತ್ರಿಧಾ ॥ ೫೩ ॥
ವೈಕಾರಿಕಾನ್ಮನೋ ಜಜ್ಞೇ ದೇವಾ ವೈಕಾರಿಕಾ ದಶ ॥ ೫೪ ॥

ದಿಗ್ವಾತಾರ್ಕಪ್ರಚೇತೋಽಶ್ವಿಬ್ರಹ್ಮೇಂದ್ರೋಪೇಂದ್ರಮಿತ್ರಕಾಃ ।
ತೈಜಸಾನೀಂದ್ರಿಯಾಣ್ಯಾಹುರ್ಜ್ಞಾನಕರ್ಮಮಯಾನಿ ಚ ॥ ೫೫ ॥

ಶ್ರೋತ್ರತ್ವಗ್ಘ್ರಾಣದೃಗ್ಜಿಹ್ವಾ ಜ್ಞಾನೇಂದ್ರಿಯರೂಪಕಾಃ ।
ಕರ್ಮೇಂದ್ರಿಯಾಣಿ ಸುಭಗೇ ವಾಗ್ದೋರ್ಮೇಢ್ರಾಂಘ್ರಿಪಾಯವಃ ॥ ೫೬ ॥

ಶಬ್ದಸ್ತು ತಾಮಸಾಜ್ಜಜ್ಞೇ ತಸ್ಮಾದಾಕಾಶ ಏವ ಚ ।
ಆಕಾಶಾದಭವತ್ಸ್ಪರ್ಶಸ್ತಸ್ಮಾದ್ವಾಯುರಭೂತ್ಸತಿ ॥ ೫೭ ॥

---

೫೨. ಅವುಗಳ ದೆಸೆಯಿಂದ ಮಹತ್ತತ್ವವು ಹುಟ್ಟಿತು. ಆದು ಪುರುಷನ ಇಚ್ಛೆಯಿಂದ ವಿಕಾರಹೊಂದಿ ಅಹಂಕಾರತತ್ವವಾಯಿತು.

೫೩. ಭದ್ರೆ ! ದ್ರವ್ಯ ಜ್ಞಾನಕ್ರಿಯಾತ್ಮಕವಾದ ಆ ಅಹಂಕಾರತತ್ವವು ವೈಕಾರಿಕ, ತೈಜಸ, ತಾಮಸ ಎಂಬುದಾಗಿ ಮೂರುವಿಧವಾಯಿತು.

೫೪-೫೫. ವೈಕಾರಿಕಾಹಂಕಾರದಿಂದ ಮನಸ್ಸು ಹುಟ್ಟಿತು. ದಿಗ್ದೇವತೆ, ವಾಯು, ಸೂರ್ಯ, ಪ್ರಚೇತಸ್ಸು, ಅಶ್ವಿನೀದೇವತೆಗಳಿಬ್ಬರು, ಬ್ರಹ್ಮ, ಇಂದ್ರ, ಉಪೇಂದ್ರ, ಮಿತ್ರ ಎಂಬ ಹತ್ತು ದೇವತೆಗಳು ವೈಕಾರಿಕರೆನಿಸುವರು. ಜ್ಞಾನೇಂದ್ರಿಯ ಮತ್ತು ಕರ್ಮೇಂದ್ರಿಯಗಳನ್ನು ತೈಜಸಗಳೆನ್ನುವರು.

೫೬. ಸುಂದರಿಯೇ! ಶ್ರೋತ್ರ, ತ್ವಕ್ಕು, ಘ್ರಾಣ, ನೇತ್ರ, ಜಿಹ್ವೆ ಇವು ಐದೂ ಜ್ಞಾನೇಂದ್ರಿಯಗಳು. ವಾಕ್ಕು, ಪಾಣಿ, ಉಪಸ್ಥ, ಪಾದ, ಪಾಯು ಇವು ಐದೂ ಕರ್ಮೇಂದ್ರಿಯಗಳು.

೫೭. ಶಬ್ದತನ್ಮಾತ್ರವು ತಾಮಸಾಹಂಕಾರದಿಂದಲೂ, ಅದರಿಂದ ಆಕಾಶವೂ, ಆಕಾಶದಿಂದ ಸ್ಪರ್ಶತನ್ಮಾತ್ರವೂ, ಅದರಿಂದ ವಾಯುವೂ ಹುಟ್ಟಿದುವು.

ವಾಯೋರಭೂತ್ತತೋ ರೂಪಂ ತಸ್ಮಾತ್ತೇಜೋ ವ್ಯಜಾಯತ ।
ತೇಜಸಸ್ತು ರಸಸ್ತಸ್ಮಾದಾಪಃ ಸಮುಭವನ್ಸತಿ ॥ ೫೮ ॥

ಅದ್ಭ್ಯೋ ಗಂಧಃ ಸಮುತ್ಪನ್ನೋ ಗಂಧಾತ್ ಕ್ಷಿತಿರಜಾಯತ ।
ಚರಾಚರಸ್ಯ ನಿಷ್ಠಾ ತು ಭೂಮಾವೇವ ಪ್ರದೃಶ್ಯತೇ ॥ ೫೯ ॥

ಆಕಾಶಾದಿಷು ತತ್ತ್ವೇಷು ಏಕದ್ವಿತ್ರಿಚತುರ್ಗುಣಾಃ ।
ಭೂಮೌ ಪಂಚಗುಣಾಃ ಪ್ರೋಕ್ತಾ ವಿಶೇಷಸ್ತು ತತಃ ಕ್ಷಿತಿಃ ॥ ೬೦ ॥

ಕಾಲಮಾಯಾಂಶಲಿಂಗೇಭ್ಯ ಏತೇಭ್ಯೋಽಂಡಮಚೇತನಂ ।
ಸಮುಭೂಚ್ಚೇತನಂ ಜಾತಂ ದರೇಣ ವಿಶತಾ ಸತಿ ॥ ೬೧ ॥

---

೫೮. ವಾಯುವಿನಿಂದ ರೂಪವೂ, ಅದರಿಂದ ತೇಜಸ್ಸೂ, ಅದರಿಂದ ರಸತನ್ಮಾತ್ರವೂ, ಅದರಿಂದ ಜಲವೂ ಹುಟ್ಟಿದುವು.

೫೯. ಜಲದಿಂದ ಗಂಧವು ಹುಟ್ಟಿತು. ಗಂಧದಿಂದ ಪೃಥಿವಿಯು ಹುಟ್ಟಿತು. ಹೀಗೆ ತಾಮಸಾಹಂಕಾರದಿಂದ ಶಬ್ದಾದಿತನ್ಮಾತ್ರ, ಅವುಗಳಿಂದ ಆಕಾಶಾದಿ ಪಂಚಭೂತಗಳೂ ಹುಟ್ಟಿದುವು. ಸ್ಥಿರಚರಾತ್ಮಕವಾದ ಸಕಲ ವಸ್ತುಗಳಿಗೂ ಭೂಮಿಯಲ್ಲಿ ಸ್ಥಿತಿಯು ಕಂಡುಬರುತ್ತದೆ.

೬೦. ಆಕಾಶದಲ್ಲಿ ಒಂದುಗುಣವು, ವಾಯುವಿನಲ್ಲಿ ಎರಡು, ತೇಜಸ್ಸಿನಲ್ಲಿ ಮೂರು, ಜಲದಲ್ಲಿ ನಾಲ್ಕು, ಪೃಥುವಿಯಲ್ಲಿ ಐದು ಈರೀತಿ ವಿಶೇಷಗುಣಗಳಿರುತ್ತವೆ.

೬೧. ಕಾಲ ಮಾಯಾಂಶಲಿಂಗಗಳ ದೆಸೆಯಿಂದ ಅಚೇತನವಾದ ಬ್ರಹ್ಮಾಂಡವು ಹುಟ್ಟಿತು. ಅದರ ಒಳಭಾಗದ ರಂಧ್ರದಲ್ಲಿ ಚೇತನವು ಉತ್ಪನ್ನವಾಯಿತು.

ತಸ್ಮಾದಂಡಾದ್ವಿರಾಡ್‌ಜಜ್ಞೇ ಸೋಽಶಯಿಷ್ಟ ಜಲಾಂತರೇ |
ಮುಖಾದೀನ್ಯಸ್ಯ ಜಾತಾನಿ ವಿರಾಜೋಽವಯವಾ ಅಪಿ || ೬೨ ||

ವಚನಾದೇಶ್ಚ ಸಿದ್ಧ್ಯರ್ಥಂ ಸಲಿಲಸ್ಥಸ್ಯ ಭಾಮಿನಿ |
ತಸ್ಯ ನಾಭ್ಯಾಮಭೂತ್ಪದ್ಮಂ ಸಹಸ್ರಾರ್ಕೋರುದೀಧಿತಿಃ || ೬೩ ||

ತಸ್ಮಿನ್ ಸ್ವಯಂಭೂಃ ಸಮಭೂಲ್ಲೋಕಾನಾಂ ಪ್ರಪಿತಾಮಹಃ |
ತೇನ ತಪ್ತ್ವಾ ತಪಸ್ತೀವ್ರಂ ಪುಂಸೋಽನುಜ್ಞಾಮವಾಪ್ಯ ಚ || ೬೪ ||

ಲೋಕಾಶ್ಚ ಲೋಕಪಾಲಾಶ್ಚ ಕಲ್ಪಿತಾ ಬ್ರಹ್ಮಣಾ ಸತಿ |
ಕಟ್ಯಾದಿಭಿರಧಃ ಸಪ್ತ ಸಪ್ತೋರ್ಧ್ವಂ ಜಘನಾದಿಭಿಃ || ೬೫ ||

ಚತುರ್ದಶಭಿರೇಭಿಸ್ತು ಲೋಕೈರ್ಬ್ರಹ್ಮಾಂಡಮೀರಿತಂ |
ತಸ್ಮಿನ್ ಸಸರ್ಜ ಭೂತಾನಿ ಸ್ಥಾವರಾಣಿ ಚರಾಣಿ ಚ || ೬೬ ||

---

೬೨-೬೪. ಅಂಡದಿಂದ ವಿರಾಟ್ಪುರುಷನು ಆವಿರ್ಭವಿಸಿದನು. ಅವನು ನೀರಿನೊಳಗೆ ಮಲಗಿದನು. ಹೀಗೆ ನೀರಿನಲ್ಲಿದ್ದ ಈ ವಿರಾಟ್ಪುರುಷನಿಗೆ ಮಾತನಾಡುವುದೇ ಮುಂತಾದ ಕೆಲಸಗಳಿಗಾಗಿ ಮುಖಗಳೂ, ಅವಯವಗಳೂ ಹುಟ್ಟಿದವು. ಅನಂತರ ಅವನ ನಾಭಿಕಮಲದಲ್ಲಿ ಪದ್ಮವು ಹುಟ್ಟಿತು. ಆ ತಾವರೆಯಲ್ಲಿ ಲೋಕಗಳಿಗೆ ಪ್ರಪಿತಾಮಹನಾದ ಸ್ವಯಂಭು ಎಂದರೆ ಬ್ರಹ್ಮನು ಸಾವಿರಾರು ಸೂರ್ಯರಂತೆ ಉತ್ಕೃಷ್ಟಪ್ರಕಾಶವುಳ್ಳವನಾಗಿ ಹುಟ್ಟಿದನು.

೬೪-೬೬. ಸಾಧ್ವಿಯೇ! ಆ ಬ್ರಹ್ಮನು ಉಗ್ರವಾದ ತಪಸ್ಸುಮಾಡಿ, ವಿರಾಟ್ಪುರುಷನ ಆಜ್ಞೆಯನ್ನು ಪಡೆದು ಲೋಕಗಳು, ಲೋಕಪಾಲಕರು ಇವರನ್ನೆಲ್ಲಾ ಸೃಷ್ಟಿಸಿದನು. ನಡುವಿನಿಂದ ಕೆಳಭಾಗದಲ್ಲಿ ಏಳು, ಜಘನಾದಿಗಳಿಂದ ಮೇಲ್ಭಾಗದಲ್ಲಿ ಏಳು ಈರೀತಿ ಹದಿನಾಲ್ಕು ಲೋಕಗಳುಸೇರಿ ಬ್ರಹ್ಮಾಂಡವೆನಿಸಿದೆ. ಆ ಲೋಕಗಳಲ್ಲಿ ಬ್ರಹ್ಮನು ಸ್ಥಾವರಜಂಗಮ ಪ್ರಾಣಿಗಳನ್ನು ಸೃಷ್ಟಿಸಿದನು.

ಬ್ರಹ್ಮಣೋ ಮನಸೋ ಜಾತಾಶ್ಚತ್ವಾರಃ ಸನಕಾದಯಃ ।
ದೇಹಾದ್ಭಾವಾದಯೋ ದೇವಿ ಯೈರಿದಂ ವರ್ಧಿತಂ ಜಗತ್ ॥ ೬೭ ॥

ಇತಿ ಶ್ರೀನಾರದೀಯಪುರಾಣೋತ್ತರಭಾಗೇ ಮೋಹಿನೀವಸುಸಂವಾದೇ
ಪುರುಷೋತ್ತಮಮಾಹಾತ್ಮ್ಯೇ ಬ್ರಹ್ಮಾಂಡೋತ್ಪತ್ತಿವರ್ಣನಂ
ನಾಮಾಷ್ಟಪಂಚಾಶತ್ತಮೋಽಧ್ಯಾಯಃ

---

೬೭. ದೇವಿಯೇ! ಬ್ರಹ್ಮನಮನಸ್ಸಿನಿಂದ ಸನಕ, ಸನಂದನ, ಸನತ್ಕುಮಾರ, ಸನಾತನ ಎಂಬ ನಾಲ್ಕು ಮುನಿಗಳು ಹುಟ್ಟಿದರು. ಈ ಜಗತ್ತಿನಲ್ಲಿ ತುಂಬಿರುವ ಪದಾರ್ಥಗಳು ಬ್ರಹ್ಮನ ದೇಹದಿಂದ ಹುಟ್ಟಿದುವು.

ಇಂತು ಶ್ರೀನಾರದೀಯಪುರಾಣೋತ್ತರಭಾಗದ ಮೋಹಿನೀ ವಸುಸಂವಾದದೊಳು
ಪುರುಷೋತ್ತಮ ಮಾಹಾತ್ಮ್ಯೆಯಲ್ಲಿ ಬ್ರಹ್ಮಾಂಡೋತ್ಪತ್ತಿ ವರ್ಣನೆಯೆಂಬ
ಐವತ್ತೆಂಟನೆಯ ಅಧ್ಯಾಯವು ಮುಗಿದುದು.

---

# ಏಕೋನಷಷ್ಟಿತಮೋಽಧ್ಯಾಯಃ



**ವಸುರುವಾಚ**

**ಯೋಽಸೌ ನಿರಂಜನೋ ದೇವಶ್ಚಿತ್ಸ್ವರೂಪೀ ಜನಾರ್ದನಃ ।**
**ಜ್ಯೋತೀರೂಪೋ ಮಹಾಭಾಗೇ ಕೃಷ್ಣಸ್ತಲ್ಲಕ್ಷಣಂ ಶೃಣು ॥ ೧ ॥**

**ಗೋಲೋಕೇ ಸ ವಿಭುರ್ನಿತ್ಯಂ ಜ್ಯೋತಿರಭ್ಯಂತರೇ ಸ್ಥಿತಃ ।**
**ಏಕ ಏವ ಪರಂ ಬ್ರಹ್ಮ ದೃಶ್ಯಾದೃಶ್ಯಸ್ವರೂಪಧೃಕ್ ॥ ೨ ॥**

**ತಸ್ಮಿನ್ ಲೋಕೇ ತು ಗಾವೋ ಹಿ ಗೋಪಾ ಗೋಪ್ಯಶ್ಚ ಮೋಹಿನಿ ।**
**ವೃಂದಾವನಂ ಪೂರ್ವತಶ್ಚ ಶತಶೃಂಗಸ್ತಥಾ ಸರಿತ್ ॥ ೩ ॥**

**ವಿರಜಾ ನಾಮ ವೃಕ್ಷಾಶ್ಚ ಪಕ್ಷಿಣಶ್ಚ ಪೃಥಗ್ವಿಧಾಃ ।**
**ಯಾವತ್ಕಾಲಂ ನು ಪ್ರಕೃತಿರ್ಜಾಗರ್ತಿ ವಿಧಿನಂದಿನಿ ॥ ೪ ॥**

---

**ಐವತ್ತೊಂಬತ್ತನೆಯ ಅಧ್ಯಾಯ**

೧. ವಸುವು ಹೇಳಿದನು:—ಧನ್ಯಳಾದ ಮೋಹಿನಿಯೇ! ನಿರ್ದೋಷನು, ಜ್ಞಾನಸ್ವರೂಪನು, ಜನಾರ್ದನನು, ತೇಜೋಮಯನೂ ಆಗಿರುವ ಕೃಷ್ಣನ ಸ್ವರೂಪವನ್ನು ವಿವರಿಸುವೆನು ಕೇಳು.

೨. ಆ ಸ್ವಾಮಿಯು ಯಾವಾಗಲೂ ಗೋಲೋಕದಲ್ಲಿ ಜ್ಯೋತಿರ್ಮಧ್ಯದಲ್ಲಿರುವನು. ಅವನು ಕೆಲವೆಡೆಗಳಲ್ಲಿ ದೃಶ್ಯಸ್ವರೂಪನಾಗಿಯೂ ಬೇರೆ ಸ್ಥಳಗಳಲ್ಲಿ ಅದೃಶ್ಯಸ್ವರೂಪನಾಗಿಯೂ ಇರುವ ಅದ್ವಿತೀಯನಾದ ಪರಬ್ರಹ್ಮನು.

೩-೪. ಮೋಹಿನಿಯೇ! ಆ ಲೋಕದಲ್ಲಿ ಗೋವು, ಗೋಪಾಲಕರು, ಗೋಪಿಕಾಸ್ತ್ರೀಯರು, ವೃಂದಾವನ, ಪೂರ್ವದಲ್ಲಿ ಶತಶೃಂಗಪರ್ವತ, ವಿರಾಜನದಿ, ವೃಕ್ಷ, ನಾನಾವಿಧ ಪಕ್ಷಿಗಳು, ಇವುಗಳೆಲ್ಲವೂ ಇವೆ. ವಿಧಿಪುತ್ರಿಯೇ! ಪ್ರಕೃತಿಯು ಜಾಗರೂಕವಾಗಿರುವವರೆಗೂ ಗೋಲೋಕದಲ್ಲಿ ಸ್ವಾಮಿಯು ದೃಶ್ಯನಾ

ತಾವತ್ಕಾಲಂ ತು ಗೋಲೋಕೇ ದೃಶ್ಯ ಏವ ವಿಭುಃ ಸ್ಥಿತಃ |
ಲಯೇ ಸುಪ್ತಾ ಗವಾದ್ಯಾಸ್ತು ನ ಜಾನಂತಿ ವಿಭುಂ ಪರಂ || ೫ ||

ಜ್ಯೋತಿಃಸಮೂಹಾಂತರತಃ ಕಮನೀಯವಪುರ್ಧರಃ |
ಕಿಶೋರೋ ಜಲದಶ್ಯಾಮಃ ಪೀತಕೌಶಾಂಬರಾವೃತಃ || ೬ ||

ದ್ವಿಭುಜೋ ಮುರಲೀಹಸ್ತಃ ಕಿರೀಟಾದಿವಿಭೂಷಿತಃ |
ಆಸ್ತೇ ಕೈವಲ್ಯನಾಥಸ್ತು ರಾಧಾವಕ್ಷಸ್ಥಲೋಜ್ವಲಃ || ೭ ||

ಪ್ರಾಣಾಧಿಕಪ್ರಿಯತಮಾ ಸಾ ರಾಧಾ ರಾಧಿತೋ ಯಯಾ |
ಸುವರ್ಣವರ್ಣಾ ದೇವೀ ಸಾ ಚಿದ್ರೂಪಾ ಪ್ರಕೃತೇಃ ಪರಾ || ೮ ||

ತಯೋರ್ದೇಹಸ್ಥಯೋರ್ನಾಸ್ತಿ ಭೇದೋ ನಿತ್ಯಸ್ವರೂಪಯೋಃ |
ಧಾವಲ್ಯದುಗ್ಧಯೋರ್ಯದ್ವತ್ಪೃಥಿವೀಗಂಧಯೋರ್ಯಥಾ || ೯ ||

---

ಗಿಯೇ ಇರುವನು- ಪ್ರಲಯಕಾಲದಲ್ಲಿ ಗೋವುಮುಂತಾದುವು ಮಲಗಿರುವುವು ಎಂದರೆ ನಿರ್ವ್ಯಾಪಾರವಾಗಿ ಸೂಕ್ಷ್ಮರೂಪದಿಂದ ಭಗವಂತನ ಉದರದಲ್ಲಿ ಅಡಗಿರುವುವು. ಆಗ ಅವು ಸ್ವಾಮಿಯನ್ನು ತಿಳಿಯಲಾರವು.

೬-೭. ಜ್ಯೋತಿರ್ಮಂಡಲದ ಮಧ್ಯದಲ್ಲಿ ಮನೋಹರ ಶರೀರಧಾರಿಯು, ಬಾಲಕನು, ಮೇಘಶ್ಯಾಮನು, ಹಳದಿಯ ಪೀತಾಂಬರವನ್ನುಟ್ಟಿರುವವನು, ಎರಡುಭುಜಗಳುಳ್ಳವನು, ಕೈಯಲ್ಲಿ ಕೊಳಲನ್ನು ಹಿಡಿದಿರುವವನು, ಕಿರೀಟ ಮುಂತಾದ ಆಭರಣಗಳಿಂದಲಂಕೃತನು, ವಕ್ಷಃಸ್ಥಳದಲ್ಲಿ ರಾಧಾದೇವಿಯಿಂದ ವಿರಾಜಿಸುತ್ತಿರುವವನೂ ಆದ ಕೈವಲ್ಯನಾಥನಿರುವನು.

೮. ಪ್ರಾಣಕ್ಕಿಂತಲೂ ಅತ್ಯಧಿಕ ಪ್ರೇಮಾಸ್ಪದಳು, ಬಂಗಾರದಂತೆ ಬಣ್ಣವುಳ್ಳವಳು, ಪ್ರಕೃತಿದೇವಿಯಿಂದ ಆರಾಧಿಸಲ್ಪಡುವವಳೂ ಆದ ಆ ರಾಧಾದೇವಿಯು ಚಿದ್ರೂಪಳು ಮತ್ತು ಪ್ರಕೃತ್ಯತೀತಳೂ ಆಗಿರುವಳು.

೯. ನಿತ್ಯಸ್ವರೂಪರಾದ, ದೇಹದಲ್ಲಿರುವ ಅವರಿಬ್ಬರಿಗೆ ಕ್ಷೀರ ಮತ್ತು ಅದರ ಶುಕ್ಲರೂಪ, ಪೃಥುವಿಯು ಮತ್ತು ಅದರ ಗಂಧ ಇವುಗಳಂತೆ ಭೇದವಿಲ್ಲ.

ತತ್ಕಾರಣಂ ಕಾರಣಾನಾಂ ನಿರ್ದೇಷ್ಟುಂ ನೈವ ಶಕ್ಯತೇ ।
ವೇದಾನಿರ್ವಚನೀಯಂ ಯತ್ತದ್ವಕ್ತುಂ ನೈವ ಶಕ್ಯತೇ ॥ ೧೦ ॥

ಜ್ಯೋತಿರಂತರತಃ ಪ್ರೋಕ್ತಂ ಯದ್ರೂಪಂ ಶ್ಯಾಮಸುಂದರಂ ।
ಶಿವೇನ ದೃಷ್ಟಂ ತದ್ರೂಪಂ ಕದಾಚಿದ್ಧ್ಯಾನಗೋಚರಂ ॥ ೧೧ ॥

ತತಃ ಪ್ರಭೃತಿ ಜಾನಂತಿ ಗೋಲೋಕಾಖ್ಯಾನಮೀಪ್ಸಿತಂ ।
ನಾರದಾದ್ಯಾ ವಿಧಿಸುತೇ ಸನಕಾದ್ಯಾಶ್ಚ ಯೋಗಿನಃ ॥ ೧೨ ॥

ಶ್ರುತಂ ಧ್ಯಾಯಂತಿ ತಂ ಸರ್ವೇ ನ ತೈರ್ದೃಷ್ಟಂ ಕದಾಚನ ।
ಸಾಕ್ಷಾದ್ದ್ರಷ್ಟುಂ ತು ತಪತೇ ಶಿವೋದ್ಯಾಪಿ ಸನಾತನಂ ॥ ೧೩ ॥

ನೈವ ಪಶ್ಯತಿ ತದ್ರೂಪಂ ಧ್ಯಾಯತಿ ಧ್ಯಾನಗೋಚರಂ ।
ಕದಾಚಿತ್ಕ್ರೀಡತೋರ್ದೇವಿ ರಾಧಾಮಾಧವಯೋರ್ವಪುಃ ॥ ೧೪ ॥

---

೧೦-೧೧. ಜ್ಯೋತಿರ್ಮಂಡಲದ ಮಧ್ಯದಲ್ಲಿದೆಯೆಂದು ಉಕ್ತನಾಗಿರುವ ಶ್ಯಾಮಸುಂದರರೂಪನು ಕಾರಣವಾದ ಪ್ರಕೃತ್ಯಾದಿಗಳಿಗೆಲ್ಲಾ ಕಾರಣನು. ಅವನನ್ನು ನಿರ್ದೇಶಿಸುವುದಕ್ಕೂ ಶಕ್ಯವಾಗುವುದಿಲ್ಲ ಆದಕಾರಣ ಅವನ ಸ್ವರೂಪವನ್ನು ಸಂಪೂರ್ಣವಾಗಿ ವೇದವೂ ಸಹ ನಿರ್ವಚನಮಾಡಿ ಹೇಳಲಾರದು. ಒಂದಾನೊಂದು ಕಾಲದಲ್ಲಿ ಆ ರೂಪವು ಶಿವನಿಂದ ಧ್ಯಾನಿಸಲ್ಪಟ್ಟು ಅವನಿಗೆ ಗೋಚರವಾಯಿತು.

೧೨. ಬ್ರಹ್ಮನಂದನನೇ! ಆಗಿನಿಂದಲೂ ನಾರದಾದಿಗಳು ಮತ್ತು ಸನಕಾದಿಯೋಗಿಗಳೂ ಸಹ ಇಷ್ಟವಾದ ಗೋಲೋಕಾಖ್ಯಾನವನ್ನು ತಿಳಿದರು.

೧೩. ಅವರೆಲ್ಲರೂ ಗೋಲೋಕಾಖ್ಯಾನವನ್ನು ಶ್ರವಣಮಾಡಿ ಧ್ಯಾನಿಸುತ್ತಿರುವರು. ಆದರೂ ಅವರು ಅದನ್ನು ಯಾವಾಗಲೂ ದರ್ಶನಮಾಡಿಲ್ಲ. ಶಿವನು ಈಗಲೂ ಆ ಸನಾತನದೇವನನ್ನು ಸಾಕ್ಷಾತ್ತಾಗಿ ನೋಡಲು ಯತ್ನಿಸುತ್ತಿರುವನು.

೧೪-೧೫. ಅವನು ಧ್ಯಾನಗೋಚರವಾದ ಆ ರೂಪವನ್ನು ಧ್ಯಾನಿಸುತ್ತಿರುವನು ; ನೋಡುವುದಿಲ್ಲ. ಒಂದಾನೊಂದು ದಿನ ರಾಧಾ ಮಾಧವರು ವಿಹ

ದ್ವಿಧಾಭೂತಮಭೂತ್ತತ್ರ ವಾಮಾಂಗಂ ತು ಚತುರ್ಭುಜಂ ।
ಸಮಾನರೂಪಾವಯವಂ ಸಮಾನಾಂಬರಭೂಷಣಂ ॥ ೧೫ ॥

ತದ್ವದ್ರಾಧಾಸ್ವರೂಪಂ ಚ ದ್ವಿಧಾರೂಪಮಭೂತ್ಸತಿ ।
ತಾಭ್ಯಾಂ ದೃಷ್ಟಂ ತತ್ಸ್ವರೂಪಂ ಸಾಕ್ಷಾತ್ತಾವಪಿ ತತ್ಸಮೌ ॥ ೧೬ ॥

ಚತುರ್ಭುಜಂ ತು ಯದ್ರೂಪಂ ಲಕ್ಷ್ಮೀಕಾಂತಂ ಮನೋಹರಂ ।
ತದ್ದೃಷ್ಟಂ ತು ಶಿವಾದ್ಯೈಶ್ಚ ಭಕ್ತವೃಂದೈರನೇಕಶಃ ॥ ೧೭ ॥

ಸಕೃತ್ತು ಬ್ರಹ್ಮಣಾ ದೃಷ್ಟಂ ದೇವಿರೂಪಂ ಚತುರ್ಭುಜಂ ।
ಸೃಷ್ಟಿಕಾರ್ಯಪ್ರಮುಗ್ಧೇನ ದರ್ಶಿತಂ ಕೃಪಯಾ ಸ್ವಯಂ ॥ ೧೮ ॥

ಲಕ್ಷ್ಮ್ಯಾ ಸನತ್ಕುಮಾರಾಯ ವರ್ಣಿತಂ ವಿಧಿನಂದಿನಿ ।
ವಿಷ್ವಕ್ಸೇನಾಯ ತೂದ್ದಿಷ್ಟಂ ಸ್ವರೂಪಂ ತತ್ಸಮೂರ್ತಯೇ ॥ ೧೯ ॥

---

ರಿಸುತ್ತಿರುವಾಗ ಅವರ ಶರೀರವು ಎರಡುವಿಧವಾಯಿತು. ಅದರಲ್ಲಿ ಎಡಭಾಗದ ಅವಯವವು ನಾಲ್ಕುಭುಜಗಳುಳ್ಳುದಾಯಿತು. ಎರಡೂ ಸಮಾನವಾದ ರೂಪ ಅವಯವ, ವಸ್ತ್ರ, ಅಲಂಕಾರ, ಇವುಗಳುಳ್ಳುದಾಯಿತು

೧೬. ಸಾಧ್ವಿಯೇ! ಅದರಂತೆಯೇ ರಾಧಾದೇವಿಯ ಸ್ವರೂಪವೂ ಎರಡಾಯಿತು. ಹಾಗೆ ಎರಡನೆಯದಾಗಿ ಕಂಡ ತಮಗೆ ಸಮಾನವಾಗಿರುವ ಆ ಎರಡುರೂಪಗಳನ್ನೂ ಅವರಿಬ್ಬರೂ ನೋಡಿದರು.

೧೭. ಮನೋಹರವಾದ, ಚತುರ್ಭುಜಗಳುಳ್ಳ ರೂಪವೇ ಲಕ್ಷ್ಮೀಕಾಂತನ ಸ್ವರೂಪವು. ಅದು ಶಿವ ಮುಂತಾದ ಅನೇಕ ಭಕ್ತಸಮೂಹಗಳಿಂದ ದೃಷ್ಟವಾಯಿತು.

೧೮. ದೇವಿಯೇ! ಸೃಷ್ಟಿಕಾರ್ಯದಲ್ಲಿ ವ್ಯಾಪೃತನಾದ ಬ್ರಹ್ಮನು ಆ ದೇವನ ದಯೆಯಿಂದ ಒಂದಾವರ್ತಿ ಚತುರ್ಭುಜಗಳುಳ್ಳ ರೂಪವನ್ನು ನೋಡಿದನು.

೧೯. ಬ್ರಹ್ಮನಂದನೇ! ಈ ಸ್ವರೂಪಾಖ್ಯಾನವು ಲಕ್ಷ್ಮೀದೇವಿಯಿಂದ ಸನತ್ಕುಮಾರನಿಗೂ, ನಾರಾಯಣನಿಂದ ತತ್ಸಮೂರ್ತಿಯಾದ ವಿಷ್ವಕ್ಸೇನನಿಗೂ ಹೇಳಲ್ಪಟ್ಟಿತು.

ನಾರಾಯಣೇನ ವಿಧಿಜೇ ತತೋ ಧ್ಯಾಯಂತಿ ಸರ್ವಶಃ |
ಧರ್ಮಪುತ್ರೇಣ ದೇವೇಶಿ ನಾರದಾಯ ಸಮೀರಿತಂ ॥ ೨೦ ॥

ಗೋಲೋಕವರ್ಣನಂ ಸರ್ವಂ ರಾಧಾಕೃಷ್ಣಮಯಂ ತಥಾ |
ಯಾ ತು ರಾಧಾ ವಿಧಿಸುತೇ ದೇವೀ ದೇವವರಾರ್ಚಿತಾ ॥ ೨೧ ॥

ಸಾ ಸ್ವಯಂ ಶಿವರೂಪಾಭೂತ್ಕೌತುಕೇನ ವರಾನನೇ |
ತದ್ದೃಷ್ಟ್ವಾ ಸಹಸಾಶ್ಚರ್ಯಂ ಕೃಷ್ಣೋ ಯೋಗೇಶ್ವರೇಶ್ವರಃ ॥ ೨೨ ॥

ಮೂಲಪ್ರಕೃತಿರೂಪಂ ತು ದಧ್ರೇ ತತ್ಸಮಯೋಚಿತಂ |
ವಿಪರೀತಂ ವಪುರ್ಧೃತ್ವಾ ವಾಸುದೇವೋ ಮುದಾನ್ವಿತಃ ॥ ೨೩ ॥

ಧ್ಯಾಯೇದಹರ್ನಿಶಂ ದೇವಂ ದುರ್ಗಾರೂಪಧರಂ ಹರಿಂ |
ಯಾ ರಾಧಾ ಸೈವ ಲಕ್ಷ್ಮೀಸ್ತು ಸಾವಿತ್ರೀ ಚ ಸರಸ್ವತೀ ॥ ೨೪ ॥

---

೨೦. ಬ್ರಹ್ಮಕುಮಾರೀ ! ಹಾಗೆ ಸಂಪ್ರದಾಯ ಪರಂಪರೆಯಿಂದ ಸರ್ವರೂ ಈ ಸ್ವರೂಪವನ್ನು ತಿಳಿದು ಧ್ಯಾನಿಸುತ್ತಿರುವರು. ದೇವೇಶೀ ! ಧರ್ಮ ಪುತ್ರನು ಇದನ್ನು ನಾರದನಿಗೆ ಹೇಳಿದನು.

೨೧-೨೨. ಗೋಲೋಕ ವರ್ಣನೆಯೆಲ್ಲವೂ ರಾಧಾಕೃಷ್ಣಮಯವು. ವಿಧಿ ಸುತೇ ! ದೇವಶ್ರೇಷ್ಠರಿಂದ ಪೂಜಿತಳಾದ ರಾಧಾದೇವಿಯು ತಾನೇ ಕುತೂಹಲ ತಿಂದ ಶಿವರೂಪಿಯಾದಳು.

೨೨-೨೪. ಯೋಗೇಶ್ವರೇಶ್ವರನಾದ ಕೃಷ್ಣನು ಆಶ್ಚರ್ಯಕರವಾದ ಅದನ್ನು ನೋಡಿ ತಕ್ಷಣದಲ್ಲಿ ಸಮಯೋಚಿತವಾದ ಮೂಲಪ್ರಕೃತಿ ರೂಪವನ್ನು ತಾಳಿದನು. ವಾಸುದೇವನು ವಿಪರೀತ ಶರೀರವನ್ನು ಧರಿಸಿ ಸಂತೋಷಯುಕ್ತ ನಾಗಿ ದುರ್ಗಾರೂಪವನ್ನು ತಾಳಿರುವ ಹರಿಯನ್ನು ಹಗಲಿರಳೂ ಧ್ಯಾನಿಸುವನು.

೨೪-೨೫. ರಾಧೆಯೇ ಲಕ್ಷ್ಮೀ, ಸಾವಿತ್ರೀ, ಸರಸ್ವತೀ, ಗಂಗಾ ಎಂಬು ದಾಗಿ ಉಕ್ತಳಾಗಿರುವಳು. ಈ ಐದು ನಾಮಗಳ ಮುಖ್ಯಾರ್ಥವೂ ಒಂದೇ ಆಗಿದೆ;

ಗಂಗಾ ಚ ಬ್ರಹ್ಮತನಯೇ ನೈವ ಭೇದೋಽಸ್ತಿ ವಸ್ತುತಃ ।
ಪಂಚಧಾ ಸಾ ಸ್ಥಿತಾ ವಿದ್ಯಾ ಕಾಮಧೇನುಸ್ವರೂಪಿಣೀ || ೨೫ ||

ಯಃ ಕೃಷ್ಣೋ ರಾಧಿಕಾನಾಥಃ ಸ ಲಕ್ಷ್ಮೀಶಃ ಪ್ರಕೀರ್ತಿತಃ ।
ಸ ಏವ ಬ್ರಹ್ಮರೂಪಶ್ಚ ಧರ್ಮೋ ನಾರಾಯಣಸ್ತಥಾ || ೨೬ ||

ಏವಂ ತು ಪಂಚಧಾ ರೂಪಮಾಸ್ಥಿತೋ ಭಗವಾನಜಃ ।
ಕಾರ್ಯಕಾರಣರೂಪೋಽಸೌ ಧ್ಯಾಯಂತಿ ಜಗತೀತಲೇ || ೨೭ ||

ತೇನ ವೈ ಪ್ರೇಮಸಂಬದ್ಧೋ ವಿಷಯೀ ಯಃ ಶಿವಃ ಸ ತು ।
ರಾಧೇಶಂ ರಾಧಿಕಾರೂಪಂ ಸ್ವಯಂ ಸಚ್ಚಿತ್ಸುಖಾತ್ಮಕಂ || ೨೮ ||

ದೇವತೇಜಃಸಮುದ್ಭೂತಾ ಮೂಲಪ್ರಕೃತಿರೀಶ್ವರೀ ।
ಕೃಷ್ಣರೂಪಾ ಮಹಾಭಾಗೇ ದೈತ್ಯಸಂಹಾರಕಾರಿಣೀ || ೨೯ ||

---

ಭೇದವಿಲ್ಲ. ಬ್ರಹ್ಮತನಯೇ! ಕಾಮಧೇನು ಸ್ವರೂಪಿಣಿಯಾದ ಆ ವಿದ್ಯಾ ದೇವಿಯು ಐದು ವಿಧವಾಗಿರುವಳು.

೨೬–೨೭. ರಾಧಾಕಾಂತನು ಕೃಷ್ಣ, ಲಕ್ಷ್ಮೀಶ, ಬ್ರಹ್ಮ, ಧರ್ಮ, ನಾರಾಯಣ ಎಂಬುದಾಗಿ ಐದುವಿಧ ರೂಪವನ್ನು ತಾಳಿರುವನು. ಉತ್ಪತ್ತಿಯಿಲ್ಲದ ಈ ಭಗವಂತನನ್ನು ಜಗತ್ತಿನಲ್ಲಿ ಕಾರ್ಯಕಾರಣರೂಪನೆಂದು ಧ್ಯಾನಿಸುತ್ತಾರೆ.

೨೮. ಆವನ ಪ್ರೇಮಸಂಬದ್ಧ ವಿಷಯಿಯೇ ಶಿವನು. ರಾಧೇಶನೂ, ರಾಧಿಕಾರೂಪವೂ ಸಾಕ್ಷಾತ್ಸಚ್ಚಿದಾನಂದಾತ್ಮಕವು.

೨೯. ಧನ್ಯಳೇ! ದೇವತೇಜಸ್ಸಿನಿಂದ ಹುಟ್ಟಿದವಳು, ಈಶ್ವರಿಯು, ಕೃಷ್ಣರೂಪಳೂ ಆದ ಮೂಲಪ್ರಕೃತಿಯೇ ದೈತ್ಯಸಂಹಾರ ಮಾಡುವಳು.

ಸತೀ ದಕ್ಷಸುತಾ ಭೂತ್ವಾ ವಿಷಯೇಶಂ ಶಿವಂ ಶ್ರಿತಾ ।
ಭರ್ತುರ್ವಿನಿಂದನಂ ಶ್ರುತ್ವಾ ಸತೀ ತ್ಯಕ್ತ್ವಾ ಕಲೇವರಂ ॥ ೩೦ ॥

ಜಜ್ಞೇ ಹಿಮವತಃ ಕ್ಷೇತ್ರೇ ಮೇನಾಯಾಂ ಪುನರೇವ ಚ ।
ತತಸ್ತಪ್ತ್ವಾ ತಪೋ ಭದ್ರೇ ಶಿವಂ ಪ್ರಾಪ ಶಿವಪ್ರದಾ ॥ ೩೧ ॥

ವಸ್ತುತಃ ಕೃಷ್ಣರಾಧಾಸೌ ಶಿವಮೋಹನತತ್ಪರಾ ।
ಜಗದಂಬಾಸ್ವರೂಪಾ ಚ ಯತೋ ಮಾಯಾ ಸ್ವಯಂ ವಿಭುಃ ॥ ೩೨ ॥

ಅತ ಏವ ಬ್ರಹ್ಮಸುತೇ ಸ್ಕಂದೋ ಗಣಪತಿಸ್ತಥಾ ।
ಸ್ವಯಂ ಕೃಷ್ಣೋ ಗಣಪತಿಃ ಸ್ವಯಂ ಸ್ಕಂದಃ ಶಿವೋ ಭವತ್ ॥ ೩೩ ॥

ಶಿವಮೇವಂ ವದಂತ್ಯೇಕೇ ರಾಧಾರೂಪಂ ಸಮಾಶ್ರಿತಂ ।
ಕೃಷ್ಣವಕ್ಷಃಸ್ಥಲಃ ಸ್ಥಾನಂ ತಯೋರ್ಭೇದೋ ನ ಲಕ್ಷ್ಯತೇ ॥ ೩೪ ॥

---

೩೦. ಸತೀದೇವಿಯು ದಕ್ಷಪ್ರಜಾಪತಿಯುಮಗಳಾಗಿ ಹುಟ್ಟಿ, ವಿಷಯೇಶನಾದ ಈಶ್ವರನನ್ನು ವರಿಸಿದಳು. ಆ ಸತಿಯು ಪತಿನಿಂದೆಯನ್ನು ಕೇಳಿ ಸಹಿಸಲಾರದೆ ಶರೀರವನ್ನು ಪರಿತ್ಯಾಗಮಾಡಿದಳು. (ಮೃತಳಾದಳು).

೩೧. ಆ ದಕ್ಷಸುತೆಯು ಹಿಮವಂತನ ಹೆಂಡತಿಯಾದ ಮೇನೆಯಲ್ಲಿ ಪುನಃ ಹುಟ್ಟಿದಳು. ಅನಂತರ ಶುಭಪ್ರದಳಾದ ದೇವಿಯು ತಪಸ್ಸನ್ನು ಮಾಡಿ ಶಿವನನ್ನು ಹೊಂದಿದಳು.

೩೨. ವಾಸ್ತವಿಕವಾಗಿ ಈ ಕೃಷ್ಣರಾಧೆಯು ಶಿವಮೋಹನತತ್ಪರಳು. ಮಾಯೆಯು ಸ್ವತಃ ಸಮರ್ಥಳಾದಕಾರಣ ಜಗನ್ಮಾತೆಯಸ್ವರೂಪಳೂ ಆಗಿರುವಳು.

೩೩. ಬ್ರಹ್ಮಸುತೇ ! ಆದುದರಿಂದಲೇ ಸ್ಕಂದ ಮತ್ತು ಗಣಪತಿಯರಲ್ಲಿ ಗಣಪತಿಯು ಕೃಷ್ಣಾಂಶನು, ಸ್ಕಂದನು ಶಿವಾಂಶನೂ ಆಗಿರುವರು.

೩೪. ಕೃಷ್ಣನ ವಕ್ಷಃಸ್ಥಲವನ್ನಾಶ್ರಯಿಸಿರುವ ರಾಧಾರೂಪವನ್ನು ಶಿವನೆಂಬುದಾಗಿ ಕೆಲವರು ಹೇಳುವರು. ಅವುಗಳಿಗೆ ಭೇದವು ಗೊತ್ತಾಗುವುದಿಲ್ಲ.

ಕೃಷ್ಣೋ ವಾ ಮೂಲಪ್ರಕೃತಿಃ ಶಿವೋ ವಾ ರಾಧಿಕಾ ಸ್ವಯಂ |
ಏಕಂ ವಾ ಮಿಥುನಂ ವಾಪಿ ನ ಕೇನಾಪೀತಿ ನಿಶ್ಚಿತಂ || ೩೫ ||

ಅನಿರ್ದೇಶ್ಯಂ ತು ಯದ್ವಸ್ತು ತನ್ನಿರ್ದೇಷ್ಟುಂ ನ ಚ ಕ್ಷಮಂ |
ಉಪಲಕ್ಷಣಮೇತದ್ಧಿ ಯನ್ನಿದೇಶನಮೈಶ್ವರಂ || ೩೬ ||

ಶಾಸ್ತ್ರಂ ವೇದಾಶ್ಚ ಸುಭಗೇ ವರ್ಣಯಂತಿ ಯದೀಶ್ವರಂ |
ತತ್ಸರ್ವಂ ಪ್ರಾಕೃತಂ ವಿದ್ಧಿ ನಿರ್ದೇಷ್ಟುಂ ಶಕ್ಯಮೇವ ಚ || ೩೭ ||

ಅನಿರ್ದೇಶ್ಯಂ ತು ಯದ್ದೇವಿ ತನ್ನೇತೀತಿ ನಿಷಿಧ್ಯತೇ |
ನಿಷೇಧಶೇಷಃ ಸ ವಿಭುಃ ಕೀರ್ತಿತಃ ಶರಣಾಗತೈಃ || ೩೮ ||

---

೩೫. ಕೃಷ್ಣ, ಮೂಲಪ್ರಕೃತಿ, ಶಿವ, ಸಾಕ್ಷಾದ್ರಾಧಿಕಾದೇವಿ ಒಂದು ಅಥವಾ ಎರಡು ಎಂಬುದಾವುದೂ ಯಾರಿಂದಲೂ ನಿಶ್ಚಯಿಸಲ್ಪಟ್ಟಿಲ್ಲ.

೩೬. ಇಂತಹುದೇ ಎಂದು ಸಂಪೂರ್ಣವಾಗಿ ನಿರ್ದೇಶಿಸಿ ಹೇಳಲು ಸಾಧ್ಯವಲ್ಲದ ಆ ವಸ್ತುವನ್ನು ನಿರ್ದೇಶಿಸಲು ಯಾವನು ಸಮರ್ಥನಾದಾನು ? ಅಷ್ಟೇ ಅಲ್ಲ, ಅವನ ಆಜ್ಞಾ ಶಕ್ತ್ಯಾದಿರೂಪ ಐಶ್ವರ್ಯವೂ ಸಹ ಇಷ್ಟೇ ಎಂದು ನಿರ್ದೇಶಿಸಲು ಶಕ್ಯವಾದುದಲ್ಲ.

೩೭. ಸುಂದರಿಯೇ ! ವೇದಶಾಸ್ತ್ರಗಳು ನಿರ್ಧರಿಸಿ ವರ್ಣಿಸಿರುವ ಐಶ್ವರ್ಯವೆಲ್ಲವೂ ಪ್ರಾಕೃತವೆಂದು ತಿಳಿ. ಅದನ್ನು ನಿರ್ಧರಿಸಿ ಹೇಳಲು ಶಕ್ಯವಾಗುವುದು.

೩೮. ದೇವಿಯೇ ! ನಿರ್ಧರಿಸಿ ಹೇಳಲಸಾಧ್ಯವಾದುದನ್ನು ವೇದಶಾಸ್ತ್ರಗಳು 'ನ' ಎಂಬುದಾಗಿ ನಿಷೇಧಿಸುತ್ತೇವೆ. ಹಾಗೆ ನಿಷೇಧಿಸಲ್ಪಟ್ಟವನು ಸ್ವಾಮಿಯೆಂದು ಶರಣಾಗತರಿಂದ ಉಕ್ತವಾಗಿದೆ.

ಶಾಸ್ತ್ರಂ ನಿಯಾಮಕಂ ಭದ್ರೇ ಸರ್ವೇಷಾಂ ಕರ್ಮಣಾಂ ಭವೇತ್ ।
ಕರ್ಮೀ ತು ಜೀವಃ ಕಥಿತ ಈಶ್ವರಾಂಶೋ ವಿಭುಃ ಸ್ವಯಂ ॥ ೩೯ ॥

ಪ್ರಕೃತೇಸ್ತು ಪರೋ ನಿತ್ಯೋ ಮಾಯಯಾ ಮೋಹಿತಃ ಶುಭೇ ।
ಯಸ್ತು ಸಾಕ್ಷೀ ಸ್ವಯಂ ಪೂರ್ಣಃ ಸಹಾಽನುಶಯಿತಾ ಸ್ಥಿತಃ ॥ ೪೦ ॥

ನ ವೇತ್ತಿ ತಂ ಚಾನುಶಯೀ ವೇದಾನುಶಯಿನಂ ಸ ತು ।
ಶಂಖಚಕ್ರಗದಾಪದ್ಮೈರಲಂಕೃತಭುಜದ್ವಯಾಃ ॥ ೪೧ ॥

ಪ್ರಪನ್ನಾಸ್ತೇ ತು ವಿಜ್ಞೇಯಾಃ ದ್ವಿವಿಧಾ ವಿಧಿಸಂದಿನಿ ।
ಆರ್ತದೃಪ್ತವಿಭೇದೇನ ತತ್ರಾರ್ತಾ ಅಸಹಾ ಮತಾಃ ॥ ೪೨ ॥

ದೃಪ್ತಾ ಜನ್ಮಾಂತರಸಹಾ ನಿರ್ಭಯಾಃ ಸದಸಜ್ಜನಾಃ ।
ಯೇ ಪ್ರಪನ್ನಾ ಮಹಾಲಕ್ಷ್ಮ್ಯಾಂ ಸಖಿಭಾವಂ ಸಮಾಶ್ರಿತಾಃ ॥ ೪೩ ॥

---

೩೯-೪೦. ಭದ್ರೇ! ಸಕಲ ಕರ್ಮಗಳಿಗೂ ಶಾಸ್ತ್ರವೇ ನಿಯಾಮಕವು. ಜೀವನು ಕರ್ಮಿಯೂ, ಈಶ್ವರನ ಪ್ರತಿಬಿಂಬನೂ, ಮಾಯೆಯಿಂದ ಮೋಹಿತನೂ ಆಗಿರುವನು. ಸ್ವಾಮಿಯಾದರೋ ಪ್ರಕೃತ್ಯತೀತನೂ, ನಿತ್ಯನೂ ಆಗಿರುವನು. ಯಾವನು ಸಾಕ್ಷಿಯೋ ಅವನು ಸ್ವಯಂ ಪೂರ್ಣನು; ಜೀವನೊಡನೆ ಶರೀರ ದಲ್ಲಿರುವನು.

೪೧-೪೩. ಅವನನ್ನು ಜೀವನು ತಿಳಿಯುವುದಿಲ್ಲ. ಅವನಾದರೋ ಜೀವನನ್ನು ತಿಳಿದಿರುವನು. ಬ್ರಹ್ಮಕುಮಾರಿಯೇ! ಶಂಖ, ಚಕ್ರ, ಗದಾ, ಪದ್ಮ ಇವುಗಳ ಚಿಹ್ನೆಗಳಿಂದ ಎರಡು ಭುಜಗಳನ್ನೂ ಅಲಂಕರಿಸಿಕೊಂಡಿರುವವರು ಪ್ರಪನ್ನರೆನಿಸುವರು. ಆ ಪ್ರಪನ್ನರು ಆರ್ತ, ದೃಪ್ತ ಎಂಬ ಪ್ರಭೇದದಿಂದ ಎರಡು ವಿಧವಾಗಿರುವರು. ಅವರಲ್ಲಿ ಆರ್ತರು ಅಸಹರೂ, ದೃಪ್ತರು ಜನ್ಮಾಂತರ ಸಹರು, ಭಯರಹಿತರೂ ಆಗಿರುವರು. ಹೀಗೆ ಮಹಾಲಕ್ಷ್ಮಿಯಲ್ಲಿ ಪ್ರಪನ್ನರಾದ ಸದ ಸಜ್ಜನರು ಸಖಿಭಾವವನ್ನಾಶ್ರಯಿಸಿರುವರು.

ತೇಷಾಂ ಮಂತ್ರಂ ಪ್ರವಕ್ಷ್ಯಾಮಿ ಪ್ರಯತಿಂ ವಿಧಿಬೋಧಿತಂ ।
ಗೋಪೀಜನಪದಸ್ಯಾಂತೇ ವಲ್ಲಭೇತಿ ಸಮುಚ್ಚರೇತ್ ॥ ೪೪ ॥

ಚರಣಾನ್ ಶರಣಂ ಪಶ್ಚಾತ್ಪ್ರಪದ್ಯೇ ಪದಮೀರಯೇತ್ ।
ಷೋಡಶಾರ್ಣೋ ಮಂತ್ರರಾಜಃ ಸಾಕ್ಷಾಲ್ಲಕ್ಷ್ಮ್ಯಾ ಪ್ರಕಾಶಿತಃ ॥ ೪೫ ॥

ಪೂರ್ವಂ ಸನತ್ಕುಮಾರಾಯ ಶಂಭವೇ ತದನಂತರಂ ।
ಸಖಿಭಾವಂ ಸಮಾಶ್ರಿತ್ಯ ಗೋಪಿಕಾವೃಂದಮಧ್ಯಗಂ ॥ ೪೬ ॥

ಆತ್ಮಾನಂ ಚಿಂತಯೇದ್ಭದ್ರೇ ರಾಧಾಮಾಧವಸಂಜ್ಞಕಂ ।
ಗುರುಷ್ವೀಶ್ವರಭಾವೇನ ವರ್ತೇತ ಪ್ರಣತಃ ಸದಾ ॥ ೪೭ ॥

---

೪೪-೪೭. ವಿಧಿಬೊಧಿತವಾದ ಕೃಷ್ಣಮಂತ್ರವನ್ನು ಹೇಳುವೆನು :— "ಗೋಪೀಜನವಲ್ಲಭ ಚರಣಾನ್ ಶರಣಂ ಪ್ರಪದ್ಯೇ" ಎಂಬ ಹದಿನಾರು ಅಕ್ಷರಗಳನ್ನೊಳಗೊಂಡ ಈ ಮಂತ್ರವು ಮಂತ್ರಗಳಲ್ಲೆಲ್ಲಾ ಉತ್ತಮವಾದುದು.

ಈ ಮಂತ್ರವು ಮೊದಲು ಲಕ್ಷ್ಮೀದೇವಿಯಿಂದ ಸಾಕ್ಷಾತ್ತಾಗಿ ಸನತ್ಕುಮಾರನಿಗೂ, ಅನಂತರ ಶಂಭುವಿಗೂ, ಉಪದೇಶಿಸಲ್ಪಟ್ಟಿತು.

ಭದ್ರೇ! ಅನಂತರ ಗೋಪಿಕಾಸ್ತ್ರೀಯರ ಸಮೂಹಮಧ್ಯದಲ್ಲಿರುವ ರಾಧಾಮಾಧವನಾಮಕನಾದ ಪರಮಾತ್ಮನನ್ನು ಭಕ್ತಿಯಿಂದ ಧ್ಯಾನಿಸಬೇಕು. ಗುರುಗಳಲ್ಲಿಯೂ ಸಹ ಯಾವಾಗಲೂ ಸ್ವಾಮಿಭಾವನೆಯಿಂದ ವಿನೀತನಾಗಿ ನಡೆದುಕೊಳ್ಳಬೇಕು.

೪೮. ವಿಷ್ಣುಭಕ್ತರ ವಿಷಯದಲ್ಲಿಯೂ ಅಂತಹ ಭಾವನೆಯಿಂದಲೇ

ವೈಷ್ಣವೇಷು ಚ ಸತ್ಕೃತ್ಯ ತಥಾ ಸಮತಯಾನ್ಯತಃ ।
ದಿವಾನಿಶಂ ಚಿಂತನಂ ಚ ಸ್ವಾಮಿನೋಃ ಪ್ರೇಮಬಂಧನಾತ್ ।
ಕುರ್ಯಾತ್ಸರ್ವೇಷ್ವಪಿ ಸದಾ ಯಾತ್ರಾಪರ್ವಮಹೋತ್ಸವಾನ್ ॥ ೪೮ ॥

ಇತಿ ಶ್ರೀನಾರದೀಯಮಹಾಪುರಾಣೋತ್ತರಭಾಗೇ ವಸುಮೋಹಿನೀ
ಸಂವಾದೇ ಪುರುಷೋತ್ತಮಮಾಹಾತ್ಮ್ಯಂ ನಾಮ
ಏಕೋನಷಷ್ಟಿತಮೋಽಧ್ಯಾಯಃ

---

ಸತ್ಕರಿಸಿ ನಡೆದುಕೊಳ್ಳಬೇಕು. ಸ್ವಾಮಿಯರಾದ ರಾಧಾಮಾಧವರಲ್ಲಿ ಸ್ಥಿರಭಕ್ತಿಯನ್ನಿಟ್ಟು ಸರ್ವತ್ರ ಸನ್ನಿಹಿತರಾಗಿರುವ ಅವರನ್ನು ಹಗಲಿರುಳೂ ಧ್ಯಾನಿಸಬೇಕು. ಯಾವಾಗಲೂ ಆ ಸ್ವಾಮಿಯ ಯಾತ್ರೆ, ಉತ್ಸವ ಮುಂತಾದುವುಗಳನ್ನು ಮಾಡುತ್ತಿರಬೇಕು.

ಇಂತು ಶ್ರೀನಾರದೀಯ ಪುರಾಣೋತ್ತರಭಾಗದಲ್ಲಿ ವಸು ಮೋಹಿನೀ
ಸಂವಾದದೊಳು ಪುರುಷೋತ್ತಮ ಮಾಹಾತ್ಮ್ಯೆಯೆಂಬ
ಐವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.



## ಷಷ್ಟಿತಮೋಽಧ್ಯಾಯಃ

---

**ವಸುರುವಾಚ**

**ತತೋ ಗಚ್ಛೇದ್ದ್ವಿಧಿಸುತೇ ತೀರ್ಥಂ ಯಜ್ಞಾಂಗ ಸಂಭವಂ |**
**ಇಂದ್ರದ್ಯುಮ್ನಸರೋ ನಾಮ ಯತ್ರಾಸ್ತೇ ಪಾವನಂ ಶುಭಂ ||೧||**

**ತತ್ರ ಗತ್ವಾ ಶುಚಿರ್ವಿದ್ವಾನಾಚಮ್ಯ ಮನಸಾ ಹರಿಂ |**
**ಧ್ಯಾತ್ವೋಪಸ್ಥಾಯ ಚ ವಿಭುಂ ಮಂತ್ರಮೇನಮುದೀರಯೇತ್ ||೨||**

**ಅಶ್ವಮೇಧಾಂಗಸಂಭೂತ ತೀರ್ಥ ಸರ್ವಾಘನಾಶನ |**
**ಸ್ನಾನಂ ತ್ವಯಿ ಕರೋಮ್ಯದ್ಯ ಪಾಪಂ ಹರ ನಮೋಽಸ್ತು ತೇ ||೩||**

---

## ಅರವತ್ತನೆಯ ಅಧ್ಯಾಯ

೧ ವಸುವು ಹೇಳಿದನು:—ಬ್ರಹ್ಮಕುಮಾರೀ! ಅನಂತರ ಯಜ್ಞನಾಮಕಹರಿಯ ಅಂಗದಿಂದುತ್ಪನ್ನವು, ಪರಿಶುದ್ಧವು, ಮಂಗಳಕರವೂ ಆದ ಇಂದ್ರದ್ಯುಮ್ನಸರಸ್ಸೆಂಬ ತೀರ್ಥವಿರುವೆಡೆಗೆ ಹೋಗಬೇಕು.

೨. ಜ್ಞಾನಿಯು ಅಲ್ಲಿಗೆ ಹೋಗಿ ಆಚಮನಮಾಡಿ ಪರಿಶುದ್ಧನಾಗಿ ಮನಸ್ಸಿನಲ್ಲಿ ವ್ಯಾಪ್ತನಾದ ಹರಿಯನ್ನು ಧ್ಯಾನಿಸಿ, ಎದ್ದುನಿಂತು ಈ ಮಂತ್ರವನ್ನು ಹೇಳಬೇಕು.

೩. ಮಂತ್ರಾರ್ಥ :—“ಅಶ್ವಮೇಧದ ಅಂಗದಿಂದ ಹುಟ್ಟಿದ, ಸಕಲ ಪಾಪಗಳನ್ನೂ ಪರಿಹರಿಸುವ ತೀರ್ಥವೇ! ನಿನಗೆ ನಮಸ್ಕಾರಮಾಡುವೆನು. ಈಗ ನಿನ್ನಲ್ಲಿ ಸ್ನಾನಮಾಡುವೆನು. ಪಾಪವನ್ನು ಪರಿಹರಿಸು”

ಏವಮುಚ್ಚಾರ್ಯ ವಿಧಿವತ್ ಸ್ನಾತ್ವಾ ದೇವಾನ್ ಋಷೀನ್ ಪಿತೄನ್ |
ತಿಲೋದಕೇನ ಸಾನ್ಯಾಂಶ್ಚ ಸಂತರ್ಪ್ಯಾಚಮ್ಯ ವಾಗ್ಯತಃ || ೪ ||

ದತ್ವಾ ಪಿತೄಣಾಂ ಪಿಂಡಾಂಶ್ಚ ಸಂಪೂಜ್ಯ ಪುರುಷೋತ್ತಮಂ |
ದಶಾಶ್ವಮೇಧಿಕಂ ಸಮ್ಯಕ್ಫಲಂ ಪ್ರಾಪ್ನೋತಿ ಮಾನವಃ || ೫ ||

ಸಪ್ತಾವರಾನ್ ಸಪ್ತ ಪರಾನ್ ವಂಶಾನುದ್ಧೃತ್ಯ ದೇವವತ್ |
ಕಾಮಗೇನ ವಿಮಾನೇನ ವಿಷ್ಣುಲೋಕಂ ಸ ಗಚ್ಛತಿ || ೬ ||

ಭುಕ್ತ್ವಾ ತತ್ರ ವರಾನ್ ಭೋಗಾನ್ ಯಾವಚ್ಚಂದ್ರಾರ್ಕತಾರಕಂ |
ಚ್ಯುತಸ್ತಸ್ಮಾದಿಹಾಯಾತೋ ಮೋಕ್ಷಂ ಚ ಲಭತೇ ಧ್ರುವಂ || ೭ ||

ಏವಂ ಕೃತ್ವಾ ಪಂಚತೀರ್ಥೀಮೇಕಾದಶ್ಯಾಮುಪೋಷಿತಃ |
ಜ್ಯೇಷ್ಠಶುಕ್ಲೇ ಪಂಚದಶ್ಯಾಂ ಯಃ ಪಶ್ಯೇತ್ಪುರುಷೋತ್ತಮಂ || ೮ ||

---

೪-೫. ಈ ಮಂತ್ರವನ್ನು ಹೇಳಿ ವಿಧಿವತ್ತಾಗಿ ಸ್ನಾನಮಾಡಿ, ದೇವ, ಋಷಿ, ಪಿತೃ ಇತರರು ಇವರೆಲ್ಲರಿಗೂ ತಿಲೋದಕದಿಂದ ತರ್ಪಣಕೊಟ್ಟು, ಆಚಮನಮಾಡಿ, ಮೌನದಿಂದ ಪಿತೃಗಳಿಗೆ ಪಿಂಡಪ್ರದಾನಮಾಡಿ ಪುರುಷೋತ್ತಮನನ್ನು ಪೂಜಿಸಿದರೆ ಮನುಷ್ಯನು ಹತ್ತು ಅಶ್ವಮೇಧಯಜ್ಞಗಳ ಫಲವನ್ನು ಪಡೆಯುವನು.

೬. ಅಷ್ಟೇ ಅಲ್ಲ; ಅವನು ತನ್ನ ಹಿಂದುಮುಂದಿನ ಏಳು ಕುಲಗಳನ್ನು ಉದ್ಧಾರಮಾಡಿ ದೇವತೆಯಂತೆ ಸ್ವೇಚ್ಛಾಚಾರಿಯಾದ ವಿಮಾನಮಾರ್ಗವಾಗಿ ವಿಷ್ಣುಲೋಕಕ್ಕೆ ಹೋಗುವನು.

೭ ಅಲ್ಲಿ ಚಂದ್ರ ಸೂರ್ಯ ನಕ್ಷತ್ರಗಳಿರುವವರೆಗೂ ಉತ್ತಮಭೋಗಗಳನ್ನನುಭವಿಸಿ, ಅಲ್ಲಿಂದ ಹೊರಟು ಇಲ್ಲಿಗೆ ಬಂದು ಖಂಡಿತವಾಗಿಯೂ ಮೋಕ್ಷವನ್ನು ಹೊಂದುವನು.

೮-೯. ಈರೀತಿ ಪಂಚತೀರ್ಥವಿಧಿಯನ್ನಾಚರಿಸಿ, ಏಕಾದಶಿಯ ದಿನ ಉಪವಾಸಮಾಡಿ, ಜ್ಯೇಷ್ಠ ಶುಕ್ಲ ಪೂರ್ಣಿಮಾದಿನದಲ್ಲಿ ಪುರುಷೋತ್ತಮ

ಸ ಪೂರ್ವೋಕ್ತಫಲಂ ಪ್ರಾಪ್ಯ ಕ್ರೀಡಿತ್ವಾ ಚಾಚ್ಯುತಾಲಯೇ ।
ಪ್ರಯಾತಿ ಪರಮಂ ಸ್ಥಾನಂ ಯಸ್ಮಾನ್ನಾವರ್ತತೇ ಪುನಃ ॥ ೯ ॥

ಪೃಥಿವ್ಯಾಂ ಯಾನಿ ತೀರ್ಥಾನಿ ಸರಿತಶ್ಚ ಸರಾಂಸಿ ಚ ।
ಪುಷ್ಕರಿಣ್ಯಸ್ತಡಾಗಾನಿ ವಾಪ್ಯಃ ಕೂಪಾಸ್ತಥಾ ಹ್ರದಾಃ ॥ ೧೦ ॥

ನಾನಾನದ್ಯಃ ಸಮುದ್ರಾಶ್ಚ ಸಪ್ತಾಹಂ ಪುರುಷೋತ್ತಮೇ ।
ಜ್ಯೇಷ್ಠಶುಕ್ಲದಶಮ್ಯಾದಿ ಪ್ರತ್ಯಕ್ಷಂ ಯಾಂತಿ ಸರ್ವದಾ ॥ ೧೧ ॥

ಸ್ನಾನದಾನಾದಿಕಂ ಯಸ್ಮಾದ್ದೇವತಾಪ್ರೇಕ್ಷಣೇ ಸತಿ ।
ನೃಭಿರ್ಯತ್ಕ್ರಿಯತೇ ತತ್ರ ತತ್ಸರ್ವಂ ಚಾಕ್ಷಯಂ ಭವೇತ್ ॥ ೧೨ ॥

ಜ್ಯೇಷ್ಠಮಾಸೇ ತು ದಶಮೀ ಶುಕ್ಲಪಕ್ಷಸ್ಯ ಮೋಹಿನಿ ।
ಹರತೇ ದಶ ಪಾಪಾನಿ ತಸ್ಮಾದ್ದಶಹರಾ ಸ್ಮೃತಾ ॥ ೧೩ ॥

---

ಸ್ವಾಮಿಯ ದರ್ಶನ ಮಾಡುವವನು ಹಿಂದೆ ಹೇಳಿದ ಫಲವನ್ನು ಹೊಂದಿ, ಅಚ್ಯುತನ ಮಂದಿರದಲ್ಲಿ ವಿಹರಿಸಿ, ಪುನರಾವರ್ತಿಯಿಲ್ಲದ (ಹಿಂದಿರುಗದ) ಉತ್ತಮಸ್ಥಾನವನ್ನು ಹೊಂದುವನು.

೧೦-೧೨. ಭೂಮಂಡಲದಲ್ಲಿರುವ ತೀರ್ಥ, ನದಿ, ಸರೋವರ, ಪುಷ್ಕರಿಣಿ, ಕೆರೆ, ವಾಪೀ, ಕೂಪ, ಮಡುವು, ನಾನಾನದಿಗಳು, ಸಮುದ್ರ ಇವೆಲ್ಲವೂ ಜ್ಯೇಷ್ಠಶುಕ್ಲ ದಶಮಿಯಿಂದ ಏಳು ದಿನಗಳು ಪುರುಷೋತ್ತಮತೀರ್ಥದಲ್ಲಿ ಸಾಕ್ಷಾತ್ತಾಗಿ ಬಂದು ನೆಲೆಸುವುವು. ಆಗ ಆ ಕ್ಷೇತ್ರದಲ್ಲಿ ಸ್ನಾನದಾನಾದಿಗಳು, ದೇವತಾದರ್ಶನ ಇವನ್ನು ಮಾಡಿದರೆ ಅವು ಅಕ್ಷಯವಾಗುವುವು ಎಂದರೆ ಶಾಶ್ವತ ಫಲವನ್ನು ಕೊಡುವುವು.

೧೩. ಮೋಹಿನೀ! ಜ್ಯೇಷ್ಠಶುಕ್ಲ ದಶಮಿಯು ಹತ್ತು ಪಾಪಗಳನ್ನು ಪರಿಹರಿಸುವುದರಿಂದ ಅದು ದಶಹರದಶಮಿಯೆಂದು ಉಕ್ತವಾಗಿದೆ.

ಯಸ್ತಸ್ಯಾಂ ಹಲಿನಂ ಕೃಷ್ಣಂ ಪಶ್ಯೇದ್ಭದ್ರಾಂ ಚ ಸುವ್ರತಃ |
ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕಂ ವ್ರಜೇನ್ನರಃ || ೧೪ ||

ನರೋ ದೋಲಾಗತಂ ದೃಷ್ಟ್ವಾ ಗೋವಿಂದಂ ಪುರುಷೋತ್ತಮಂ |
ಫಾಲ್ಗುನ್ಯಾಂ ಸಂಯತೋ ಭೂತ್ವಾ ಗೋವಿಂದಸ್ಯ ಪುರಂ ವ್ರಜೇತ್ ||೧೫||

ವಿಷುವೇ ದಿವಸೇ ಪ್ರಾಪ್ತೇ ಪಂಚತೀರ್ಥವಿಧಾನತಃ |
ದೃಷ್ಟ್ವಾ ಸಂಕರ್ಷಣಂ ಕೃಷ್ಣಂ ಸುಭದ್ರಾಂ ಚ ಸುಲೋಚನೇ || ೧೬ ||

ನರಃ ಸಮಸ್ತಯಜ್ಞಾನಾಂ ಫಲಂ ಪ್ರಾಪ್ನೋತಿ ದುರ್ಲಭಂ |
ವಿಮುಕ್ತಃ ಸರ್ವಪಾಪೇಭ್ಯೋ ವಿಷ್ಣುಲೋಕಂ ಚ ಗಚ್ಛತಿ || ೧೭ ||

ಯಃ ಪಶ್ಯತಿ ತೃತೀಯಾಯಾಂ ಕೃಷ್ಣಂ ಚಂದನರೂಷಿತಂ |
ವೈಶಾಖಸ್ಯ ಸಿತೇ ಪಕ್ಷೇ ಸ ಯಾತ್ಯಚ್ಯುತಮಂದಿರಂ || ೧೮ ||

---

೧೪. ಆದಿನದಲ್ಲಿ ಬಲರಾಮ, ಕೃಷ್ಣ, ಸುಭದ್ರಾದೇವಿ ಇವರ ದರ್ಶನ ಮಾಡುವ ಸುವ್ರತಿಯಾದ ಮನುಷ್ಯನು ಸಕಲ ಪಾಪಗಳನ್ನೂ ಕಳೆದುಕೊಂಡು ವಿಷ್ಣುಲೋಕಕ್ಕೆ ಹೋಗುವನು.

೧೫. ಫಾಲ್ಗುಣ ಶುಕ್ಲ ಪೂರ್ಣಿಮೆಯ ದಿನದಲ್ಲಿ ಜಿತೇಂದ್ರಿಯನಾಗಿ ಮನುಷ್ಯನು ಪಲ್ಲಕ್ಕಿಯಲ್ಲಿರುವ ವೇದವೇದ್ಯನಾದ ಪುರುಷೋತ್ತಮನನ್ನು ದರ್ಶನಮಾಡಿದರೆ ಗೋವಿಂದನ ಪಟ್ಟಣವಾದ ವೈಕುಂಠಕ್ಕೆ ಹೋಗುವನು.

೧೬-೧೭. ವಿಷುವ ಪರ್ವದಿವಸವು ಬಂದಾಗ ಪಂಚತೀರ್ಥವಿಧಾನದಿಂದ ಬಲರಾಮ, ಕೃಷ್ಣ ಮತ್ತು ಸುಭದ್ರೆಯರನ್ನು ನೋಡಿದ ಮನುಷ್ಯನು ಹೊಂದಲ ಶ್ಯಕವಾದ, ಸಮಸ್ತ ಯಜ್ಞಗಳ ಫಲವನ್ನೂ ಹೊಂದುವನು. ಮತ್ತು ಸರ್ವ ಪಾಪ ವಿಮೋಚನೆಯಾಗಿ ವಿಷ್ಣುಲೋಕಕ್ಕೂ ಹೋಗುವನು.

೧೮. ವೈಶಾಖ ಶುಕ್ಲಪಕ್ಷದ ತದಿಗೆಯ ದಿನದಲ್ಲಿ ಗಂಧದಿಂದ ಲೇಪಿಸಲ್ಪಟ್ಟ ಕೃಷ್ಣನ ಸಂದರ್ಶನ ಮಾಡುವವನು ಅಚ್ಯುತನ ಮಂದಿರ ಎಂದರೆ ವೈಕುಂಠಕ್ಕೆ ಹೋಗುವನು.

ಯದಾ ಭವೇನ್ಮಹಾಜ್ಯೈಷ್ಠೀ ರಾಶಿನಕ್ಷತ್ರಯೋಗತಃ ।
ಪ್ರಯತ್ನೇನ ತದಾ ಮರ್ತ್ಯೋ ಗಂತವ್ಯಂ ಪುರುಷೋತ್ತಮಂ ॥ ೧೯ ॥

ಕೃಷ್ಣಂ ದೃಷ್ಟ್ವಾ ಮಹಾಜ್ಯೈಷ್ಠ್ಯಾಂ ರಾಮಂ ಭದ್ರಾಂ ಚ ಮೋಹಿನಿ ।
ನರೋ ದ್ವಾದಶಯಾತ್ರಾಣಾಂ ಫಲಂ ಪ್ರಾಪ್ನೋತಿ ಚಾಧಿಕಂ ॥ ೨೦ ॥

ಪ್ರಯಾಗೇ ಚ ಕುರುಕ್ಷೇತ್ರೇ ನೈಮಿಷೇ ಪುಷ್ಕರೇ ಗಯೇ ।
ಗಂಗಾದ್ವಾರೇ ಚ ಕುಬ್ಜಾಮ್ರೇ ಗಂಗಾಸಾಗರಸಂಗಮೇ ॥ ೨೧ ॥

ಕೋಕಾಮುಖೇ ಸೂಕರೇ ಚ ಮಥುರಾಯಾಂ ಮರುಸ್ಥಲೇ ।
ಶಾಲಗ್ರಾಮೇ ವಾಯುತೀರ್ಥೇ ಮಂದರೇ ಸಿಂಧುಸಾಗರೇ ॥ ೨೨ ॥

ಪಿಂಡಾರಕೇ ಚಿತ್ರಕೂಟೇ ಪ್ರಭಾಸೇ ಕನಖಲೇ ತಥಾ ।
ಶಂಖೋದ್ಧಾರೇ ದ್ವಾರಕಾಯಾಂ ತಥಾ ಬದರಿಕಾಶ್ರಮೇ ॥ ೨೩ ॥

---

೧೯. ರಾಶಿನಕ್ಷತ್ರಯೋಗದಿಂದ ಮಹಾಜ್ಯೈಷ್ಠಿಯು ಬಂದಾಗ ಮನುಷ್ಯನು ಪ್ರಯತ್ನಪೂರ್ವಕವಾಗಿ ಪುರುಷೋತ್ತಮಕ್ಷೇತ್ರ ಯಾತ್ರೆಮಾಡಬೇಕು.

೨೦. ಮೋಹಿನೀ! ಮಹಾಜ್ಯೈಷ್ಠಿಯ ಪರ್ವದಿನದಲ್ಲಿ ಕೃಷ್ಣ, ರಾಮ, ಸುಭದ್ರೆ ಇವರ ದರ್ಶನಮಾಡಿದರೆ ಮನುಷ್ಯನು ಹನ್ನೆರಡು ಯಾತ್ರೆಗಳ ಫಲಕ್ಕಿಂತಲೂ ಹೆಚ್ಚು ಫಲವನ್ನು ಹೊಂದುವನು.

೨೧-೩೨. ಮೋಹಿನೀ! ಪ್ರಯಾಗ, ಕುರುಕ್ಷೇತ್ರ, ನೈಮಿಷಾರಣ್ಯ, ಪುಷ್ಕರಕ್ಷೇತ್ರ, ಗಯೆ, ಹರಿದ್ವಾರ, ಕುಬ್ಜಾಮ್ರ, ಗಂಗಾಸಾಗರಸಂಗಮ, ಕೋಕಾಮುಖ, ಸೂಕರ, ಮಥುರೆ ಮರುಸ್ಥಲ, ಶಾಲಗ್ರಾಮ, ವಾಯುತೀರ್ಥ, ಮಂದರ ಪರ್ವತ, ಸಿಂಧುಸಾಗರ, ಪಿಂಡಾರಕ, ಚಿತ್ರಕೂಟ, ಪ್ರಭಾಸ, ಕನಖಲ, ಶಂಖೋದ್ಧಾರ, ದ್ವಾರಕಾ, ಬದರಿಕಾಶ್ರಮ, ಲೋಹಕೂಟ, ಸಕಲಪಾಪ ಹರಿ

ಲೋಹಕೋಟೇ ಚಾಶ್ವತೀರ್ಥೇ ಸರ್ವಪಾಪಪ್ರಮೋಚನೇ ।
ಕರ್ದಮಾಲೇ ಕೋಟಿತೀರ್ಥೇ ತಥಾ ಚಾಮರಕಂಟಕೇ ॥ ೨೪ ॥

ಲೋಲಾರ್ಕೇ ಜಂಬುಮಾರ್ಗೇ ಚ ಸೋಮತೀರ್ಥೇ ಪೃಥೂದಕೇ ।
ಉತ್ಪಲಾವರ್ತಕೇ ಚೈವ ಪೃಥತುಂಗೇ ಸಕುಬ್ಜಕೇ ॥ ೨೫ ॥

ಏಕಾಮ್ರಕೇ ಚ ಕೇದಾರೇ ಕಾಶ್ಯಾಂ ವಾ ವಿರಜೇ ಸತಿ ।
ಕಾಲಂಜರೇ ಚ ಗೋಕರ್ಣೇ ಶ್ರೀಶೈಲೇ ಗಂಧಮಾದನೇ ॥ ೨೬ ॥

ಮಹೇಂದ್ರೇ ಮಲಯೇ ವಿಂಧ್ಯೇ ಪಾರಿಯಾತ್ರೇ ಹಿಮಾಹ್ವಯೇ ।
ಸಹ್ಯೇ ಚ ಶುಕ್ತಿಮತಿ ಚ ಗೋಮಂತೇ ಚಾರ್ಬುದೇ ತಥಾ ॥ ೨೭ ॥

ಗಂಗಾಯಾಂ ಚ ಮಹಾಭಾಗೇ ಯತ್ಪುಣ್ಯಂ ಯಾಮುನೇಷು ಚ ।
ಸಾರಸ್ವತೇಷು ಗೋಮತ್ಯಾಂ ಬ್ರಹ್ಮಪುತ್ರೇಷು ಸಪ್ತಸು ॥ ೨೮ ॥

ಗೋದಾವರೀ ಭೀಮರಥೀ ತುಂಗಭದ್ರಾ ಚ ನರ್ಮದಾ ।
ತಾಪೀ ಪಯೋಷ್ಣೀ ಕಾವೇರೀ ಕ್ಷಿಪ್ರಾ ಚರ್ಮಣ್ವತೀ ತಥಾ ॥ ೨೯ ॥

---

ಹಾರಕವಾದ ಅಶ್ವತೀರ್ಥ, ಕರ್ದಮಾಲ, ಕೋಟಿತೀರ್ಥ, ಚಾಮರಕಂಟಕ, ಲೋಲಾರ್ಕ, ಜಂಬುಮಾರ್ಗ, ಸೋಮತೀರ್ಥ, ಪೃಥೂದಕ, ಉತ್ಪಲಾವರ್ತಕ, ಪೃಥತುಂಗ, ಕುಬ್ಜಕ, ಏಕಾಮ್ರಕ, ಕೇದಾರ, ಕಾಶೀ, ವಿರಜ, ಕಲಂಜರ, ಗೋಕರ್ಣ, ಶ್ರೀಶೈಲ, ಗಂಧಮಾದನ, ಮಹೇಂದ್ರ, ಮಲಯ, ವಿಂಧ್ಯ, ಪಾರಿಯಾತ್ರ, ಹಿಮಾಲಯ, ಸಹ್ಯಾದ್ರಿ, ಶುಕ್ತಿ ಮತ್ತು ಗೋಮಂತ ಈ ಕ್ಷೇತ್ರಗಳೂ, ಗಂಗಾ, ಯಮುನಾ, ಸರಸ್ವತೀ, ಗೋಮತೀ, ಸಪ್ತ ಬ್ರಹ್ಮಪುತ್ರಗಳು, ಗೋದಾವರೀ, ಭೀಮರಥೀ, ತುಂಗಭದ್ರಾ, ನರ್ಮದಾ, ತಪತೀ, ಪಯೋಷ್ಣೀ, ಕಾವೇರೀ,

ವಿತಸ್ತಾ ಚಂದ್ರಭಾಗಾ ಚ ಶತದ್ರುರ್ಬಾಹುದಾ ತಥಾ ।
ಋಷಿಕುಲ್ಯಾ ಮರುದ್ವೃಧಾ ವಿಪಾಶಾ ಚ ದೃಷದ್ವತೀ ॥ ೩೦ ॥

ಸರಯೂರ್ನಾಕಗಂಗಾ ಚ ಗಂಡಕೀ ಚ ಮಹಾನದೀ ।
ಕೌಶಿಕೀ ಕರತೋಯಾ ಚ ತ್ರಿಸ್ರೋತಾ ಮಧುವಾಹಿನೀ ॥ ೩೧ ॥

ಮಹಾನದೀ ವೈತರಣೀ ಯಾಶ್ಚಾನ್ಯಾ ನಾನುಕೀರ್ತಿತಾಃ ।
ತಾಸ್ಸರ್ವಾ ನ ಸಮಾಃ ಪ್ರೋಕ್ತಾಃ ಕೃಷ್ಣಸಂದರ್ಶನಸ್ಯ ಚ ॥ ೩೨ ॥

ಯತ್ಫಲಂ ಸ್ನಾನದಾನೇನ ರಾಹುಗ್ರಸ್ತೇ ದಿವಾಕರೇ ।
ತತ್ಫಲಂ ಕೃಷ್ಣಮಾಲೋಕ್ಯ ಮಹಾಜ್ಯೈಷ್ಠ್ಯಾಂ ಲಭೇನ್ನರಃ ॥ ೩೩ ॥

ತಸ್ಮಾತ್ಸರ್ವಪ್ರಯತ್ನೇನ ಗಂತವ್ಯಂ ಪುರುಷೋತ್ತಮಂ ।
ಮಹಾಜ್ಯೈಷ್ಠ್ಯಾಂ ವಿಧಿಸುತೇ ಸರ್ವಕಾಮಫಲೇಪ್ಸುಭಿಃ ॥ ೩೪ ॥

---

ಕ್ಷಿಪ್ರಾ, ಚರ್ಮಣ್ವತೀ, ವಿತಸ್ತಾ, ಚಂದ್ರಭಾಗ, ಶತದ್ರು, ಬಾಹುದಾ, ಋಷಿಕುಲ್ಯಾ, ಮರುದ್ವೃಧಾ, ವಿಪಾಶಾ, ದೃಷದ್ವತೀ, ಸರಯೂ, ನಾಕಗಂಗಾ, ಗಂಡಕೀ, ಕೌಶಿಕೀ, ಕರತೋಯೆ, ತ್ರಿಸ್ರೋತಾ, ಮಧುವಾಹಿನೀ ಮತ್ತು ವೈತರಣೀ ಎಂಬ ಮಹಾನದಿಗಳೂ ಮತ್ತು ನಿರ್ದೇಶಿಸದಿರುವ ಇತರ ತೀರ್ಥಕ್ಷೇತ್ರಗಳು ಇವೆಲ್ಲವೂ ಪುರುಷೋತ್ತಮಕ್ಷೇತ್ರದಲ್ಲಿನ ಕೃಷ್ಣಸಂದರ್ಶನಕ್ಕೆ ಸಮವಾಗಲಾರವು ಎಂದು ಉಕ್ತವಾಗಿದೆ.

೩೩. ಸೂರ್ಯಗ್ರಹಣ ಪರ್ವಕಾಲದಲ್ಲಿ ಮಾಡುವ ಸ್ನಾನದಾನಾದಿಗಳಿಂದ ಬರುವ ಫಲವನ್ನು ಮಹಾಜ್ಯೈಷ್ಠಿಯ ದಿನದಲ್ಲಿ ಕೃಷ್ಣಸಂದರ್ಶನಮಾಡುವುದರಿಂದಲೇ ಮನುಷ್ಯನು ಪಡೆಯುವನು.

೩೪. ವಿಧಿನಂದನನೇ! ಮಹಾಫಲಪ್ರದವಾಗಿರುವಕಾರಣ ಸಕಲ ಕಾಮಗಳನ್ನೂ ಬಯಸುವವರೆಲ್ಲರೂ ಮಹಾಜ್ಯೈಷ್ಠೀ ಪುಣ್ಯದಿನದಲ್ಲಿ ಸರ್ವಪ್ರಯತ್ನದಿಂದಲೂ ಪುರುಷೋತ್ತಮಕ್ಷೇತ್ರಕ್ಕೆ ಹೋಗಬೇಕು.

ದೃಷ್ಟ್ವಾ ರಾಮಂ ಮಹಾಜ್ಯೈಷ್ಠ್ಯಾಂ ಕೃಷ್ಣಂ ಚಾಪಿ ಸುಭದ್ರಯಾ ।
ವಿಷ್ಣುಲೋಕಂ ನರೋ ಯಾತಿ ಸಮುದ್ಧೃತ್ಯ ಕುಲಂ ಶತಂ ॥ ೩೫ ॥

ಭುಕ್ತ್ವಾ ತತ್ರ ವರಾನ್ಭೋಗಾನ್ಯಾವದಾಭೂತಸಂಪ್ಲವಂ ।
ಪುಣ್ಯಕ್ಷಯಾದಿಹಾಗತ್ಯ ಚತುರ್ವೇದೀ ದ್ವಿಜೋ ಭವೇತ್ ॥ ೩೬ ॥

ಸ್ವಧರ್ಮನಿರತಃ ಶಾಂತಃ ಕೃಷ್ಣಭಕ್ತೋ ಜಿತೇಂದ್ರಿಯಃ ।
ವೈಷ್ಣವಂ ಯೋಗಮಾಸ್ಥಾಯ ತತೋ ಮೋಕ್ಷಮವಾಪ್ನುಯಾತ್ ॥ ೩೭ ॥

ಮಾಸಿ ಜ್ಯೇಷ್ಠೇ ಚ ಸಂಪ್ರಾಪ್ತೇ ನಕ್ಷತ್ರೇ ಚೇಂದ್ರದೈವತೇ ।
ಪೌರ್ಣಮಾಸ್ಯಾಂ ತದಾ ಸ್ನಾನಂ ಪ್ರಶಸ್ತಂ ಸಾಗರಾಂಭಸಿ ॥ ೩೮ ॥

---

೩೫. ಮಹಾಜ್ಯೈಷ್ಠಿಯ ಪುಣ್ಯದಿನದಲ್ಲಿ ಬಲರಾಮ, ಕೃಷ್ಣ, ಸುಭದ್ರೆ ಇವರ ದರ್ಶನಮಾಡಿದ ಮನುಷ್ಯನು ನೂರುಕುಲಗಳನ್ನುದ್ಧರಿಸಿ ವಿಷ್ಣು ಲೋಕಕ್ಕೆ ಹೋಗುವನು.

೩೬. ಅಲ್ಲಿ ಭೂತಪ್ರಳಯವಾಗುವವರೆಗೂ ಉತ್ತಮ ಭೋಗಗಳನ್ನು ಅನುಭವಿಸಿ ಪುಣ್ಯಕ್ಷಯವಾದಮೇಲೆ ಇಲ್ಲಿಗೆ ಬಂದು ಚತುರ್ವೇದಾಧ್ಯಯನ ಸಂಪನ್ನನಾದ ದ್ವಿಜನಾಗಿ ಹುಟ್ಟುವನು.

೩೭. ಅವನು ಸ್ವಧರ್ಮಾನುಷ್ಠಾನತತ್ಪರನು, ಶಾಂತನು, ಕೃಷ್ಣಭಕ್ತನು, ಜಿತೇಂದ್ರಿಯನೂ ಆಗಿ ವೈಷ್ಣವ ಯೋಗಸಿದ್ಧಿಯನ್ನು ಪಡೆದು ಅದರಿಂದ ಮೋಕ್ಷವನ್ನು ಹೊಂದುವನು.

೩೮. ಜ್ಯೇಷ್ಠಮಾಸ ಪೂರ್ಣಿಮಾದಿನದಲ್ಲಿ ಇಂದ್ರದೇವತಾಕವಾದ ನಕ್ಷತ್ರವು ಬಂದಾಗ ಸಮುದ್ರೋದಕದಲ್ಲಿ ಸ್ನಾನವು ಪ್ರಶಸ್ತವಾದುದು.

ಸರ್ವತೀರ್ಥಮಯಃ ಕೂಪಸ್ತದಾಸ್ತೇ ಸಜಲಃ ಶುಚಿಃ ।
ತಥಾ ಭೋಗವತೀ ತತ್ರ ಪ್ರತ್ಯಕ್ಷಾ ಭವತಿ ಧ್ರುವಂ ॥ ೩೯ ॥

ತಸ್ಮಾಜ್ಜ್ಯೈಷ್ಠ್ಯಾಂ ಸಮುದ್ಧೃತ್ಯ ಹೇಮಾದಿಕಲಶೈರ್ಜಲಂ ।
ಕೃಷ್ಣರಾಮಾಭಿಷೇಕಾರ್ಥಂ ಸುಭದ್ರಾಯಾಶ್ಚ ಮೋಹಿನಿ ॥ ೪೦ ॥

ಕೃತ್ವಾ ಸುಶೋಭನಂ ಮಂಚಂ ಪತಾಕಾಭಿರಲಂಕೃತಂ ।
ಸುದೃಢಂ ಸುಖಸಂಚಾರಂ ವಸ್ತ್ರೈಃ ಪುಷ್ಪೈರಲಂಕೃತಂ ॥ ೪೧ ॥

ವಿಸ್ತೀರ್ಣಂ ಧೂಪಿತಂ ಧೂಪೈಃ ಸ್ನಾನಾರ್ಥಂ ರಾಮಕೃಷ್ಣಯೋಃ ।
ಪೀತವಸ್ತ್ರಪರಿಚ್ಛನ್ನಂ ಮುಕ್ತಾಹಾರಾವಲಂಬಿತಂ ॥ ೪೨ ॥

ತತ್ರ ನಾನಾವಿಧೈರ್ವಾದ್ಯೈಃ ಕೃಷ್ಣಂ ನೀಲಾಂಬರಂ ಸತಿ ।
ಮಂಚೇ ಸಂಸ್ಥಾಪ್ಯ ಭದ್ರಾಂ ಚ ಜಯಮಂಗಲನಿಸ್ವನೈಃ ॥ ೪೩ ॥

---

೩೯. ಆಗ ಸಕಲ ತೀರ್ಥಮಯವಾದ ಕೂಪವು ನೀರಿನಿಂದ ತುಂಬಿ ಶುಚಿಯಾಗಿರುವುದು. ಆಗ ಅಲ್ಲಿ ಭೋಗವತೀನದಿಯು ಖಂಡಿತವಾಗಿಯೂ ಪ್ರತ್ಯಕ್ಷಳಾಗುವಳು.

೪೦. ಆದಕಾರಣ ಮೋಹಿನೀ! ಮಹಾಜ್ಯೈಷ್ಠಿಯ ದಿನದಲ್ಲಿ ಕೃಷ್ಣ ರಾಮ ಸುಭದ್ರೆಯರ ಅಭಿಷೇಕಾರ್ಥವಾಗಿ ಬಂಗಾರದ ಕಲಶಗಳಿಂದ ಆ ನೀರನ್ನು ತೆಗೆದುಕೊಂಡುಬರಬೇಕು.

೪೧-೪೩. ಅತ್ಯಂತ ಶೋಭನವು, ಪತಾಕೆಗಳಿಂದಲಂಕೃತವು, ಗಟ್ಟಿಯಾಗಿರುವುದು, ಸುಖವಾಗಿ ತಿರುಗುತ್ತಿರುವುದು, ವಸ್ತ್ರಪುಷ್ಪಗಳಿಂದ ಅಲಂಕರಿಸಲ್ಪಟ್ಟಿರುವುದೂ ಆಗಿರುವ ವಿಶಾಲವಾದ ಮಂಚವನ್ನು ಮಾಡಿ ಧೂಪಹಾಕಿ, ಪೀತಾಂಬರವನ್ನು ಧರಿಸಿರುವ, ಮುತ್ತಿನಹಾರವನ್ನು ಹಾಕಿಕೊಂಡಿರುವ ಶ್ರೀ ಕೃಷ್ಣ, ನೀಲ ವಸ್ತ್ರವನ್ನುಟ್ಟಿರುವ ಬಲರಾಮ, ಸುಭದ್ರಾದೇವಿ ಇವರುಗಳನ್ನು ನಾನಾವಿಧ ವಾದ್ಯ ಮತ್ತು ಜಯಮಂಗಳ ಧ್ವನಿಗಳಿಂದ ಸ್ನಾನಕ್ಕೋಸ್ಕರವಾಗಿ ಕರೆತಂದು ಮಂಚದಮೇಲೆ ಕೂಡಿಸಬೇಕು.

ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈಃ ಶೂದ್ರೈಶ್ಚಾನ್ಯೈಶ್ಚ ಮೋಹಿನಿ ।
ಅನೇಕಶತಸಾಹಸ್ರೈರ್ವೃತಂ ಸ್ತ್ರೀಪುರುಷೈಸ್ತಥಾ ॥ ೪೪ ॥

ಗೃಹಸ್ಥಾಃ ಸ್ನಾತಕಾಶ್ಚೈವ ಯತಯೋ ಬ್ರಹ್ಮಚಾರಿಣಃ ।
ಸ್ನಾಪಯಂತಿ ತದಾ ಕೃಷ್ಣಂ ಮಂಚಸ್ಥಂ ಸಹಲಾಯುಧಂ ॥ ೪೫ ॥

ತಥಾ ಸಮಸ್ತತೀರ್ಥಾನಿ ಪೂರ್ವೋಕ್ತಾನಿ ಚ ಸುಂದರಿ ।
ತೋದಕೈಃ ಪುಷ್ಪಮಿಶ್ರೈಶ್ಚ ಸ್ನಾಪಯಂತಿ ಪೃಥಕ್ ಪೃಥಕ್ ॥ ೪೬ ॥

ಪಶ್ಚಾತ್ಪಟಹಸಂಘೋಷೈರ್ಭೇರೀಮುರಜನಿಃಸ್ವನೈಃ ।
ಕಾಹಲೈಸ್ತಾಲಶಬ್ದೈಶ್ಚ ಮೃದಂಗೈರ್ಝರ್ಝರೈಸ್ತಥಾ ॥ ೪೭ ॥

ಅನ್ಯೈಶ್ಚ ವಿವಿಧೈರ್ವಾದ್ಯೈರ್ಘಂಟಾಸ್ವನವಿಮಿಶ್ರಿತೈಃ ।
ಸ್ತ್ರೀಣಾಂ ಮಂಗಳಶಬ್ದೈಶ್ಚ ಸ್ತುತಿಶಬ್ದೈರ್ಮನೋರಮೈಃ ॥ ೪೮ ॥

---

೪೪-೪೫. ಮೋಹಿನೀ ! ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಇತರ ಜಾತಿಯವರು, ನೂರಾರು ಸಾವಿರ ಸ್ತ್ರೀಪುರುಷರು ಇವರುಗಳ ಸಹಿತವಾಗಿ ಗೃಹಸ್ಥರು, ಸ್ನಾತಕರು, ಯತಿಗಳು, ಬ್ರಹ್ಮಚಾರಿಗಳೂ ಸಹ ಆಗ ಮಂಚದಲ್ಲಿ ವಿರಾಜಿಸುತ್ತಿರುವ ಕೃಷ್ಣ, ಬಲರಾಮ, ಸುಭದ್ರೆಯರಿಗೆ ಆ ಕಲಶೋದಕಗಳಿಂದ ಸ್ನಾನಮಾಡಿಸುವರು.

೪೬. ಸುಂದರೀ ! ಹಾಗೆಯೇ ಹಿಂದೆ ಹೇಳಿರುವ ಸಮಸ್ತತೀರ್ಥಗಳ ಜಲದಿಂದ ಪುಷ್ಪ ಸುಗಂಧಗಳೊಡನೆ ಪ್ರತ್ಯೇಕ ಪ್ರತ್ಯೇಕವಾಗಿ ಅಭಿಷೇಕ ಮಾಡುವರು.

೪೭-೪೯. ಅನಂತರ ಪಟಹಧ್ವನಿ, ನಗಾರಿ, ಮರ್ದಳೆಗಳ ಧ್ವನಿ, ಕಹಳೆ, ತಾಳ, ಮೃದಂಗ, ಝುರ್ಝರ, ಇನ್ನೂ ಇತರ ನಾನಾವಿಧ ವಾದ್ಯ, ಘಂಟೆ ಇವುಗಳ ಘೋಷ, ಸ್ತ್ರೀಯರ ಮಂಗಳಶಬ್ದ, ಮನೋಹರ ಸ್ತೋತ್ರ

ಜಯಶಬ್ದೈಸ್ತಥಾ ಸ್ತೋತ್ರೈರ್ವೀಣಾವೇಣುನಿನಾದಿತೈಃ |
ಶ್ರೂಯತೇ ಸುಮಹಾನ್ ಶಬ್ದಃ ಸಾಗರಸ್ಯೇವ ಗರ್ಜತಃ || ೪೯ ||

ಮುನೀನಾಂ ವೇದಘೋಷೈಶ್ಚ ಮಂತ್ರಘೋಷೈಸ್ತಥಾಪರೈಃ |
ನಾನಾಸ್ತೋತ್ರರವೈಃ ಪುಣ್ಯೈಃ ಸಾಮಗಾನೋಪಬೃಂಹಿತೈಃ || ೫೦ ||

ಶ್ಯಾಮಾವದಾತ ವೇಶ್ಯಾಭಿಃ ಪೀತರಕ್ತಾಂಶುಕೈಸ್ತಥಾ |
ಚಾಮರೈ ರತ್ನದಂಡೈಶ್ಚ ವೀಜ್ಯೇತೇ ರಾಮಕೇಶವೌ || ೫೧ ||

ಯಕ್ಷವಿದ್ಯಾಧರೈಃ ಸಿದ್ಧೈರ್ದೇವಗಂಧರ್ವಚಾರಣೈಃ |
ಆದಿತ್ಯಾ ವಸವೋ ರುದ್ರಾಃ ಸಾಧ್ಯಾ ವಿಶ್ವೇ ಮರುದ್ಗಣಾಃ || ೫೨ ||

ಲೋಕಪಾಲಾಸ್ತಥಾನ್ಯೇ ಚ ಸ್ತುವಂತಿ ಪುರುಷೋತ್ತಮಂ |
ನಮಸ್ತೇ ದೇವದೇವೇಶ ಪುರಾಣಪುರುಷೋತ್ತಮ |

---

ಪಾಠ, ಜಯಶಬ್ದ, ವೀಣಾವೇಣುಧ್ವನಿಗಳಿಂದ ನುಡಿಸಿದ ಸ್ತೋತ್ರ ಇವುಗಳ ಮಹಾಶಬ್ದವು ಸಾಗರಗರ್ಜನೆಯಂತೆ ಕೇಳಿಸುತ್ತದೆ.

೫೦. ಮುನಿಗಳ ವೇದಘೋಷ, ಇತರರ ಮಂತ್ರಘೋಷ, ಸಾಮಗಾನಗಳಿಂದ ಪೂರ್ಣವಾದ ಪುಣ್ಯಕರವಾದ ನಾನಾಸ್ತೋತ್ರಪಾಠ ಇವುಗಳೆಲ್ಲಾ ನಡೆಯುತ್ತಿರುವುವು.

೫೧. ಶ್ಯಾಮವರ್ಣದ ವೇಶ್ಯೆಯರು ಹಳದೀವಸ್ತ್ರವನ್ನೂ, ಗೌರವರ್ಣದ ವೇಶ್ಯಾಸ್ತ್ರೀಯರು ಕೆಂಪುಬಟ್ಟೆಯನ್ನೂ ಉಟ್ಟುಕೊಂಡು, ರತ್ನದಂಡಯುಕ್ತ ಚಾಮರಗಳಿಂದ ರಾಮಕೃಷ್ಣರಿಗೆ ಬೀಸುತ್ತಿರುವರು.

೫೨-೫೩. ಯಕ್ಷ, ವಿದ್ಯಾಧರ, ಸಿದ್ಧ, ದೇವ, ಗಂಧರ್ವ, ಚಾರಣ ಇವರ ಸಹಿತವಾಗಿ ಆದಿತ್ಯ, ವಸು, ರುದ್ರ, ಸಾಧ್ಯ, ವಿಶ್ವೇದೇವತೆಗಳು, ಮರುದ್ಗಣಗಳು, ಲೋಕಪಾಲಕರು. ಮತ್ತು ಇತರರೂ ಸಹ ಪುರುಷೋತ್ತಮನನ್ನು ಈರೀತಿ ಸ್ತುತಿಸುತ್ತಾರೆ.

ಸರ್ಗಸ್ಥಿತ್ಯಂತಕೃದ್ದೇವ ಲೋಕನಾಥ ಜಗತ್ಪತೇ ।
ತ್ರೈಲೋಕ್ಯಶರಣಂ ದೇವಂ ಬ್ರಹ್ಮಣ್ಯಂ ಮೋಕ್ಷಕಾರಣಂ ॥ ೫೪ ॥

ತಂ ನಮಸ್ಯಾಮಹೇ ಭಕ್ತ್ಯಾ ಸರ್ವಕಾಮಫಲಪ್ರದಂ ।
ಸ್ತುತ್ವೈವಂ ವಿಬುಧಾಃ ಕೃಷ್ಣಂ ರಾಮಂ ಚೈವ ಮಹಾಬಲಂ ॥ ೫೫ ॥

ಸುಭದ್ರಾಂ ಚಾಪಿ ವಿಧಿಜೇ ತದಾಕಾಶೇ ವ್ಯವಸ್ಥಿತಾಃ ।
ಗಾಯಂತಿ ದೇವಗಂಧರ್ವಾ ನೃತ್ಯಂತ್ಯಪ್ಸರಸಸ್ತಥಾ ॥ ೫೬ ॥

ದೇವತೂರ್ಯಾಣಿ ವಾದ್ಯಂತೇ ವಾತಾ ವಾಂತಿ ಸುಶೀತಲಾಃ ।
ಪುಷ್ಪಮಿಶ್ರಂ ತದಾ ಮೇಘಾ ವರ್ಷಂತ್ಯಾಕಾಶಗೋಚರಾಃ ॥ ೫೭ ॥

ಜಯಶಬ್ದಂ ಚ ಕುರ್ವಂತಿ ಮುನಯಃ ಸಿದ್ಧಚಾರಣಾಃ ।
ಶಕ್ರಾದ್ಯಾ ವಿಬುಧಾಸ್ಸರ್ವೇ ಋಷಯಃ ಪಿತರಸ್ತಥಾ ॥ ೫೮ ॥

---

೫೩-೫೪. ಪುರಾಣಪುರುಷೋತ್ತಮನು, ಸೃಷ್ಟಿಸ್ಥಿತಿಸಂಹಾರಕರ್ತನು, ಲೋಕನಾಥನು, ಜಗದೊಡೆಯನೂ ಆದ ದೇವದೇವನೇ! ನಿನಗೆ ನಮಸ್ಕಾರವ ಮಾಡುವೆವು! ಲೋಕತ್ರಯರಕ್ಷಕನು, ಬ್ರಹ್ಮಣ್ಯದೇವನು, ಮೋಕ್ಷದಾಯಕನು, ಸಕಲೇಷ್ಟಪ್ರದನೂ ಆದ ಆ ಪುರುಷೋತ್ತಮನನ್ನು ಭಕ್ತಿಯಿಂದ ನಮಸ್ಕರಿಸುವೆವು.

೫೫-೫೭. ಈರೀತಿಯಾಗಿ ದೇವತೆಗಳು ಕೃಷ್ಣ, ಬಲರಾಮ, ಸುಭದ್ರಾದೇವಿ ಇವರನ್ನು ಸ್ತೋತ್ರಮಾಡುವರು. ಆಗ ಅಂತರಿಕ್ಷದಲ್ಲಿ ದೇವಗಂಧರ್ವರು ಗಾನಮಾಡುತ್ತಿರುವರು. ಅಪ್ಸರಸ್ತ್ರೀಯರು ನರ್ತನಮಾಡುವರು. ದೇವವಾದ್ಯಗಳು ಬಾರಿಸಲ್ಪಡುವುವು. ಗಾಳಿಯು ತಣ್ಣಗೆ ಬೀಸುವುದು. ಆಕಾಶದಲ್ಲಿರುವ ಮೇಘಗಳು ಪುಷ್ಪಮಿಶ್ರವಾಗಿ ಮಳೆಗರೆಯುವುವು.

೫೮-೫೯. ಮುನಿಗಳು, ಸಿದ್ಧರು, ಚಾರಣರು, ಇಂದ್ರಾದಿ ದೇವತೆಗಳು, ಸಕಲ ಋಷಿಗಳು, ಪಿತೃಗಳು, ಪ್ರಜಾಪತಿಗಳು, ನಾಗರು ಮತ್ತು ಸ್ವರ್ಗವಾಸಿಗಳಾದ ಇತರರೂ ಸಹ ಜಯಧ್ವನಿಯನ್ನು ಮಾಡುವರು.

ಪ್ರಜಾನಾಂ ಪತಯೋ ನಾಗಾ ಯೇ ಚಾನ್ಯೇ ಸ್ವರ್ಗವಾಸಿನಃ ।
ತತೋ ಮಂಗಳಸಂಭಾರೈರ್ವಿಧಿಮಂತ್ರಪುರಸ್ಕೃತಂ ॥ ೫೯ ॥

ಅಭಿಷೇಚನಿಕಂ ದ್ರವ್ಯಂ ಗೃಹೀತ್ವಾ ದೇವತಾಗಣಾಃ ।
ಇಂದ್ರವಿಷ್ಣೂ ಮಹಾವೀರ್ಯೌ ಸೂರ್ಯಾಚಂದ್ರಮಸೌ ತಥಾ ॥ ೬೦ ॥

ಧಾತಾ ಚೈವ ವಿಧಾತಾ ಚ ತಥಾ ಚೈವಾನಿಲಾನಲೌ ।
ಪೂಷಾ ಭಗೋರ್ಯಮಾ ತ್ವಷ್ಟಾ ವಿವಸ್ವಾನಂಶುಮಾಂಸ್ತಥಾ ॥ ೬೧ ॥

ರುದ್ರಾಶ್ವಿಸಹಿತೋ ಧೀಮಾನ್ಮಿತ್ರೇಣ ವರುಣೇನ ಚ ।
ರುದ್ರೈರ್ವಸುಭಿರಾದಿತ್ಯೈರ್ವಾಲಖಿಲ್ಯೈರ್ಮರೀಚಿಜೈಃ ॥ ೬೨ ॥

ಭೃಗುಭಿಶ್ಚಾಂಗಿರೋಭಿಶ್ಚ ಸರ್ವವಿದ್ಯಾಸು ನಿಷ್ಠಿತೈಃ ।
ಪಿತಾಮಹಃ ಪುಲಸ್ತ್ಯಶ್ಚ ಪುಲಹಶ್ಚ ಮಹಾತಪಾಃ ॥ ೬೩ ॥

ಅಂಗಿರಾಃ ಕಶ್ಯಪೋಽತ್ರಿಶ್ಚ ಮರೀಚಿರ್ಭೃಗುರೇವ ಚ ।
ಕ್ರತುರ್ಹರಃ ಪ್ರಚೇತಾಶ್ಚ ಮನುರ್ದಕ್ಷಸ್ತಥೈವ ಚ ॥ ೬೪ ॥

ಋತವಶ್ಚ ಗ್ರಹಾಶ್ಚೈವ ಜ್ಯೋತೀಂಷಿ ಚ ದ್ವಿಜೋತ್ತಮಾಃ ।
ಮೂರ್ತಿಮತ್ಯಶ್ಚ ಸರಿತೋ ದೇವಾಶ್ಚೈವ ಸನಾತನಾಃ ॥ ೬೫ ॥

---

೫೯-೭೭. ಅನಂತರ ಇಂದ್ರ, ವಿಷ್ಣು ಮಹಾತೇಜಸ್ವಿಗಳಾದ ಸೂರ್ಯ ಚಂದ್ರರು, ಧಾತ, ವಿಧಾತ ವಾಯು, ಅಗ್ನಿ, ಪೂಷಾ, ಭಾಗ, ಅರ್ಯಮಾ, ತ್ವಷ್ಟಾ, ವಿವಸ್ವಾನ್, ಅಂಶುಮಾನ್, ರುದ್ರ, ಅಶ್ವಿನಿ, ಮಿತ್ರ, ವರುಣ, ರುದ್ರ, ವಸು, ಆದಿತ್ಯ, ವಾಲಖಿಲ್ಯರು, ಮರೀಚಿಪುತ್ರರು, ಸಕಲ ವಿದ್ಯಾಪಾರಂಗತರಾದ ಭೃಗುಗಳು, ಅಂಗಿರಸ್ಸುಗಳು, ಪಿತಾಮಹ, ಪುಲಸ್ತ್ಯ, ಮಹಾತಪಸ್ವಿಯಾದ ಪುಲಹ, ಅಂಗಿರಸ್ಸು, ಕಶ್ಯಪ, ಅತ್ರಿ ಮರೀಚಿ, ಭೃಗು, ಕ್ರತು, ಹರ ಪ್ರಚೇತಸ್ಸು,

ಸುಭದ್ರಾಶ್ಚ ಹ್ರದಾಶ್ಚೈವ ತೀರ್ಥಾನಿ ವಿವಿಧಾನಿ ಚ ।
ಪೃಥಿವೀ ದ್ಯೌರ್ದಿಶಶ್ಚೈವ ಪಾದಪಾಶ್ಚ ದ್ವಿಜೋತ್ತಮಾಃ ॥ ೧೬ ॥

ಅದಿತಿರ್ದೇವಮಾತಾ ಚ ಹ್ರೀಃ ಶ್ರೀಃ ಸ್ವಾಹಾ ಸರಸ್ವತೀ ।
ಉಮಾ ಶಚೀ ಸಿನೀವಾಲೀ ತಥಾ ಚಾನುಮತಿಃ ಕುಹೂಃ ॥ ೧೭ ॥

ರಾಕಾ ಚ ಧಿಷಣಾ ಚೈವ ಪತ್ನ್ಯಶ್ಚಾನ್ಯಾ ದಿವೌಕಸಾಂ ।
ಶ್ರೇಷ್ಠೋ ಗಿರೀಣಾಂ ಹಿಮವಾನ್ನಾಗರಾಜಶ್ಚ ವಾಮನಃ ।
ಪಾರಿಯಾತ್ರಶ್ಚ ವಿಂಧ್ಯಶ್ಚ ಮೇರುಶ್ಚಾನೇಕಶೃಂಗವಾನ್ ॥ ೧೮ ॥

ಐರಾವತಃ ಸಾನುಚರಃ ಕಲಾಃ ಕಾಷ್ಠಾಸ್ತಥೈವ ಚ ।
ಮಾಸಾರ್ಧಮಾಸಾ ಋತವಸ್ತಥಾ ರಾತ್ರ್ಯಹನೀ ಸಮಾಃ ॥ ೧೯ ॥

ಉಚ್ಚೈಃಶ್ರವಾ ಹಯಶ್ರೇಷ್ಠೋ ನಾಗರಾಜಶ್ಚವಾಮನಃ ।
ಅರುಣೋ ಗರುಡಶ್ಚೈವ ಲತಾಶ್ಚೌಷಧಿಭಿಃ ಸಹ ॥ ೨೦ ॥

---

ಮನು, ದಕ್ಷ, ಋತು, ಗ್ರಹ, ಜ್ಯೋತಿರ್ಗಣ, ದ್ವಿಜೋತ್ತಮ, ದೇವಮಾತೆಯಾದ ಅದಿತಿ, ಹ್ರೀ, ಶ್ರೀ, ಸ್ವಾಹಾ, ಸರಸ್ವತೀ, ಉಮಾ, ಶಚಿ, ಸಿನೀವಾಲೀ, ಅನುಮತಿ, ಕುಹೂ, ರಾಕಾ, ಧಿಷಣಾ, ಇನ್ನೂ ಇತರ ದೇವಪತ್ನಿಯರು, ಗಿರಿಶ್ರೇಷ್ಠನಾದ ಹಿಮವಂತ, ನಾಗರಾಜ, ವಾಮನ, ಪಾರಿಯಾತ್ರ, ವಿಂಧ್ಯ, ಅನೇಕ ಶಿಖರಗಳುಳ್ಳ ಮೇರು ಪರ್ವತ, ಅನುಚರ ಸಹಿತವಾದ ಐರಾವತ, ಕಲಾ, ಕಾಷ್ಠಾ, ಮಾಸ, ಪಕ್ಷ, ಋತು, ರಾತ್ರಿ, ಹಗಲು, ಸಂವತ್ಸರ, ಉಚ್ಚೈಃಶ್ರವಸ್ಸೆಂಬ ಶ್ರೇಷ್ಠವಾದ ಅಶ್ವ, ನಾಗರಾಜ, ವಾಮನ, ಅರುಣ, ಗರುಡ, ಲತೆ, ಓಷಧಿ, ಧರ್ಮದೇವ, ಕಾಲ, ಯಮ, ಮೃತ್ಯು, ಯಮದೂತರು ಮುಂತಾದ

ಧರ್ಮಶ್ಚ ಭಗವಾನ್ ದೇವಃ ಗಾಮಾಗಚ್ಛಂತಿ ಸರ್ವಶಃ ।
ಕಾಲೋ ಯಮಶ್ಚ ಮೃತ್ಯುಶ್ಚ ಯಮಸ್ಯಾನುಚರಾಶ್ಚ ಯೇ ॥ ೭೧ ॥

ಬಹುಲತ್ವಾಚ್ಚ ನೋಕ್ತಾಯೇ ವಿವಿಧಾ ದೇವತಾಗಣಾಃ ।
ತೇ ದೇವಸ್ಯಾಭಿಷೇಕಾರ್ಥಂ ಸಮಾಯಾಂತಿ ತತಸ್ತತಃ ॥ ೭೨ ॥

ದಿವ್ಯಸಂಭಾರಸಂಯುಕ್ತೈಃ ಕಲಶೈಃ ಕಾಂಚನೈಸ್ತಥಾ ।
ಸಾರಸ್ವತೀಭಿಃ ಪುಣ್ಯಾಭಿರ್ದಿವ್ಯತೋಯಾಭಿರೇವ ಚ ॥ ೭೩ ॥

ತೋಯೇನಾಕಾಶಗಂಗಾಯಾಃ ಕೃಷ್ಣಂ ರಾಮೇಣ ಸಂಗತಂ ।
ಸಪುಷ್ಪೈಃ ಕುಂಭಸಲಿಲೈಃ ಸ್ನಾಪಯಂತ್ಯಂಬರೇ ಸ್ಥಿತಾಃ ॥ ೭೪ ॥

ಸಂಚರಂತಿ ವಿಮಾನಾನಿ ದೇವಾನಾಮಂಬರೇ ತಥಾ ।
ಉಚ್ಚಾವಚಾನಿ ದಿವ್ಯಾನಿ ಕಾಮಗಾನಿ ಸ್ಥಿರಾಣಿ ಚ ॥ ೭೫ ॥

---

ನಾನಾವಿಧ ದೇವತೆಗಳು, ತಂಡತಂಡವಾಗಿ ವಿಹಿತಮಂತ್ರಗಳಿಂದ ಸಂಸ್ಕಾರ ಮಾಡಲ್ಪಟ್ಟ ಮಂಗಳದ್ರವ್ಯಸಹಿತವಾಗಿ ಅಭಿಷೇಕೋಪಯುಕ್ತವಾದ ಸಾಮಗ್ರಿಯನ್ನು ತೆಗೆದುಕೊಂಡು ಅಭಿಷೇಕ ಮಾಡುವುದಕ್ಕೆ ಬರುವರು,

೭೩-೭೪. ಹೀಗೆ ಅಂತರಿಕ್ಷದಲ್ಲಿ ಸೇರಿದ ದೇವಸಮೂಹವು ಮನೋಹರ ಸಂಭಾರಗಳಿಂದ ತುಂಬಿದ ಸುವರ್ಣಕಲಶಗಳಲ್ಲಿ ತಂದ ಪುಣ್ಯಕರವಾದ ಸರಸ್ವತೀ ಮುಂತಾದ ದಿವ್ಯನದ್ಯುದಕಗಳಿಂದಲೂ, ಆಕಾಶಗಂಗೆಯ ಜಲದಿಂದಲೂ, ಬಲರಾಮ ಕೃಷ್ಣರಿಗೆ ಅಭಿಷೇಕಮಾಡಿ ಪುಷ್ಪಗಳನ್ನರ್ಪಿಸುವರು.

೭೫-೭೬. ಆಗ ಆಕಾಶದಲ್ಲಿ ಮನೋಹರ, ಕಾಮಗಾಮಿ, ಸ್ಥಿರ, ಸುಂದರರತ್ನಗಳಿಂದ ಚಿತ್ರಿತ, ಅಪ್ಸರಸ್ತ್ರೀಯರ ಸಮೂಹದಿಂದ ಕೂಡಿರುವುದು,

ದಿವ್ಯರತ್ನವಿಚಿತ್ರಾಣಿ ಸೇವಿತಾನ್ಯಪ್ಸರೋಗಣೈಃ ।
ಗೀತೈರ್ವಾದ್ಯೈಃ ಪತಾಕಾಭಿಃ ಶೋಭಿತಾನಿ ಸಮಂತತಃ ॥ ೭೩ ॥

**ಇತಿ ಶ್ರೀನಾರದೀಯಪುರಾಣೋತ್ತರಭಾಗೇ ವಸುಮೋಹಿನೀಸಂವಾದೇ ಪುರುಷೋತ್ತಮಮಾಹಾತ್ಮ್ಯೇ ಅಭಿಷೇಕೋ ನಾಮ ಷಷ್ಟಿತಮೋಽಧ್ಯಾಯಃ**

---

ಗಾನ, ವಾದ್ಯ, ಸುತ್ತಲೂ ಪತಾಕೆ ಇವುಗಳಿಂದಲಂಕೃತವೂ ಆಗಿರುವ ದೊಡ್ಡದು, ಸಣ್ಣದೂ ಆದ ದಿವ್ಯವಿಮಾನಗಳು ಸಂಚರಿಸುತ್ತಿರುವುವು.

ಇಂತು ಶ್ರೀನಾರದೀಯಪುರಾಣೋತ್ತರಭಾಗದಲ್ಲಿ ವಸು ಮೋಹಿನೀ ಸಂವಾದದೊಳು ಪುರುಷೋತ್ತಮ ಮಾಹಾತ್ಮ್ಯೆಯಲ್ಲಿ ಅಭಿಷೇಕವೆಂಬ ಅರವತ್ತನೆಯ ಅಧ್ಯಾಯವು ಮುಗಿದುದು.

ಮಂಗಳಂ



